ಮನೋಹರ ಗ್ರಂಥಮಾಲೆಯ ೫೬ನೆಯ ಕುಸುಮ

# ಮೆಡೇಮ್ ಕ್ಯೂರಿ

(ವಿಜ್ಞಾನಿಯ ಜೀವನ ಚರಿತ್ರೆ)



ಬರೆದವರು:

ಶ್ರೀಮತಿ ಕೆ. ಎ. ರತ್ನಮ್ಮ



ಮನೋಹರ ಗ್ರಂಥ ಪ್ರಕಾಶನ ಸಮಿತಿ
ಧಾರವಾಡ

ಅಕ್ಟೋಬರ ೧೯೪೨ ಬೆಲೆ: ೧ ರೂ. ೪ ಆ.

ಸಾಹಿತ್ಯ ವಿಷಯದಲ್ಲಿ ಸಲಹೆಗಾರರು:

ಶ್ರೀ. ದ. ರಾ. ಬೇಂದ್ರೆ, ಎಂ. ಎ.

ಶ್ರೀ. ರಂ. ಶ್ರೀ. ಮುಗಳಿ, ಎಂ. ಎ. ಬಿ. ಟಿ.

ಶ್ರೀ. ವಿ. ಕೃ. ಗೋಕಾಕ, ಬಿ. ಎ (ಆಕ್ಸಫರ್ಡ)

ಸಂಪಾದಕ:

ಜಿ. ಬಿ. ಜೋಶಿ



ಪ್ರಕಾಶಕರು:
ಜಿ. ಬಿ. ಜೋಶಿ
ಮನೋಹರ ಗ್ರಂಥಮಾಲಾ
ಧಾರವಾಡ

ಮುದ್ರಕರು:
ಕೆ. ಜಿ. ರಾಯದುರ್ಗ
ಮೋಹನ ಮುದ್ರಣಾಲಯ
ಧಾರವಾಡ

# ನಮ್ಮ ಮಾತು



ಮನೋಹರ ಗ್ರಂಥಮಾಲೆಯಲ್ಲಿ ಇದುವರೆಗೆ ಜೀವನ-ಚರಿತ್ರೆಗಳು ಪ್ರಕಟವಾಗಿರಲಿಲ್ಲವೆಂದೇ ಹೇಳಬಹುದು. 'ಹತ್ತು ವರ್ಷ'ವು ಇದೇ ಸಾಹಿತ್ಯಪ್ರಕಾರದಲ್ಲಿ ಸೇರಬಹುದಾಗಿದ್ದರೂ ಅದು ಜೀವನ-ಚರಿತ್ರೆಯಲ್ಲ, ಆತ್ಮಚರಿತ್ರೆ. 'ದಿಲ್ಲೀಶ್ವರನ ದಿನಚರಿ', 'ಸಮುದ್ರದಾಚೆಯಿಂದ', 'ಬಿಡುಗಡೆಯ ಬೆಲೆ' ಇವುಗಳಲ್ಲಿ ವ್ಯಕ್ತಿಯ ಸ್ವಯಂಸ್ವರೂಪದರ್ಶನವೇ ಜೀವಾಳವಾಗಿದ್ದರೂ, ಇವೂ ಸಮಗ್ರಜೀವನವನ್ನು ವಿವರವಾಗಿ ತೋರಿಸುವ ಜೀವನ-ಚರಿತ್ರೆಗಳಲ್ಲ. ಈ ದೃಷ್ಟಿಯಿಂದ 'ಮೆಡೇಮ್ ಕ್ಯೂರಿ' ಇದು ನಮ್ಮ ಗ್ರಂಥಮಾಲೆಯಲ್ಲಿ ಪ್ರಕಟವಾದ ಮೊದಲನೆಯ ಜೀವನ-ಚರಿತ್ರೆ ಎಂದೇ ಹೇಳಬಹುದು.

ಮೆಡೇಮ್ ಕ್ಯೂರಿಯ ಜೀವನ-ಚರಿತ್ರೆಯನ್ನು ಮೊಟ್ಟಮೊದಲು ಫ್ರೆಂಚ್ ಭಾಷೆಯಲ್ಲಿ ಕ್ಯೂರಿಯ ಮಗಳೇ ಬರೆದಳು. ಅಲ್ಲಿಂದ ಅದು ಇಂಗ್ಲಿಷಿಗೆ ಭಾಷಾಂತರವಾಯಿತು. ಆ ಇಂಗ್ಲಿಷ್ ಭಾಷಾಂತರವನ್ನೇ ಆಧಾರವಾಗಿ ಇಟ್ಟುಕೊಂಡು ಶ್ರೀಮತಿ ಕೆ. ಎ. ರತ್ನಮ್ಮ ಇವರು ಕನ್ನಡ ಜನದ ಮನಸ್ಸಿಗೆ ನೇರವಾಗಿ ಹೋಗಿ ಮುಟ್ಟುವ ತಿಳಿಯಾದ ಸಜೀವ-ಕನ್ನಡದಲ್ಲಿ ಕನ್ನಡಿಸಿ ಇಲ್ಲಿ ಸಂಗ್ರಹಿಸಿ ಕೊಟ್ಟಿದ್ದಾರೆ. ಒಬ್ಬ ಹೆಣ್ಣುಮಗಳ ಜೀವನ ಚರಿತ್ರೆಯನ್ನು ಹೆಣ್ಣುಮಗಳೆ ಬರೆದದ್ದನ್ನು ಹೆಣ್ಣುಮಗಳೇ ಅನುವಾದಿಸಿ ಕನ್ನಡಿಗರಿಗೆ ಕೊಟ್ಟದ್ದೊಂದು ಸುಯೋಗವೆಂದೇ ನಾವು ಭಾವಿಸುತ್ತೇವೆ.

ಮೆಡೇಮ್ ಕ್ಯೂರಿಯ ಜನ್ಮಭೂಮಿ ಪೋಲಂಡ್. ಇವಳ ಹೆಚ್ಚಿನ ಅಭ್ಯಾಸ ಆದದ್ದು ಪ್ಯಾರಿಸ್‌ನಲ್ಲಿ. ಅಲ್ಲಿಯೆ ಒಬ್ಬ ದೊಡ್ಡ ಫ್ರೆಂಚ್ ವಿಜ್ಞಾನಿಯನ್ನು ಮದುವೆಯಾದಳು. ಇಬ್ಬರೂ ವಿಜ್ಞಾನದಲ್ಲಿ ಸಂಶೋಧನೆಯನ್ನು ನಡೆಸಿದರು. ಇವರ ಸಂಶೋಧನೆಗೆ ಮೊದಲು 'ನೊಬೆಲ್' ಪಾರಿತೋಷಕವು

ದಂಪತಿಗಳಲ್ಲಿ ಹಂಚಿಕೊಡಲ್ಪಟ್ಟಿತು. ಕ್ಯೂರಿಯ ಗಂಡ ಅಪಘಾತದಿಂದ ಮರಣಹೊಂದಿದ. ಆಮೇಲೆಯೂ ಕ್ಯೂರಿಯು ವಿಜ್ಞಾನದ ಸಂಶೋಧನೆಯನ್ನು ನಡೆಸಿದಳು. 'ರೇಡಿಯಮ್' ಹುಡುಕಿ ತೆಗೆದಳು. 'ನೊಬೆಲ್' ಪಾರಿತೋಷಕ ಮತ್ತೆ ಇವಳಿಗೆ ದೊರಕಿತು. 'ಕ್ಯೂರಿ'ಯ ಮಗಳು ಅಳಿಯ ಇಬ್ಬರೂ ಇದೇ ವಿದ್ಯೆಯಲ್ಲಿ ಮುಂದರಿದು ಅವರೂ 'ನೊಬೆಲ್' ಪಾರಿ-ತೋಷಕವನ್ನು ಪಡೆದಿದ್ದಾರೆ.

ಮೆಡೇಮ್ ಕ್ಯೂರಿಯದು ಧ್ಯೇಯನಿಷ್ಠ ಜೀವನ. ಅವಳೂ ಭಾರತೀಯರಂತೆ ತುಳಿದೊತ್ತಲ್ಪಟ್ಟ ದೇಶದಲ್ಲಿ ಹುಟ್ಟಿ ಬೆಳೆದವಳು; ಬಡತನದ ಕಿಚ್ಚಿಗೆ ನೊಂದು ಬೆಂದವಳು; ಅವಮಾನದ ನಂಜನ್ನು ನುಂಗಿದವಳು. ವಿಜ್ಞಾನಕ್ಕಾಗಿ ಅವಳಲ್ಲಿದ್ದ ಹಸಿವು ಅವಳನ್ನು ಮನೆ ಬಿಡಿಸಿತು; ದೇಶ ಬಿಡಿಸಿತು; ಬಡತನದಲ್ಲಿ ನೂಕಿ ಅವಳ ಸತ್ವಪರೀಕ್ಷೆ ಮಾಡಿತು. ಅವಳ ದೇಶ, ಅವಳ ಕಾಲ ಇವು ತಂದೊಡ್ಡಿದ ಎಲ್ಲ ಪರೀಕ್ಷೆಗಳಲ್ಲಿಯೂ ಅವಳು ಚಿನ್ನದಂತೆ ಶುದ್ಧಳಾಗಿಯೆ ಉಳಿದು ಹೊರಕ್ಕೆ ಬಂದಳು. ಕೀರ್ತಿಕಾಮುಕತೆ ಅವಳನ್ನು ಕುರುಡು ಮಾಡಲಿಲ್ಲ; ಧನದ ಮೋಹ ಅವಳನ್ನು ದಾರಿತಪ್ಪಿಸಲಿಲ್ಲ. ಬಂದ ಕೀರ್ತಿ ಗೌರವಗಳನ್ನು ಹಸುಗೂಸಿನ ಬುದ್ಧಿಯಿಂದ ನೋಡಿದಳು. ಒಂದು ಒಳ್ಳೆಯ ಕಾರ್ಯ ಸಾಧಿಸುವುದಕ್ಕಾಗಿ ಬಂದ ಒಂದು ಒಳ್ಳೆಯ ಜೀವ ಯಾವ ಮಾರ್ಗದಲ್ಲಿ, ಯಾವ ವಿಧವಾಗಿ ಆ ಒಳ್ಳೆಯ ಕಾರ್ಯ ಸಾಧಿಸುತ್ತದೆಯೆಂಬುದನ್ನು ಈ ಕ್ಯೂರಿಯ ಜೀವನ-ಚರಿತ್ರೆ ತೋರಿಸಿಕೊಡುತ್ತದೆ.

ಮೆಡೇಮ್ ಕ್ಯೂರಿಯ ಈ ಜೀವನ-ಚರಿತ್ರೆಯನ್ನು ನಮ್ಮ ಗ್ರಂಥಮಾಲೆಯಲ್ಲಿ ಪ್ರಕಟಿಸಲು ಕೊಟ್ಟು ಗೌರವಿಸಿದ್ದಕ್ಕಾಗಿ ನಾವು ಶ್ರೀಮತಿ ಕೆ. ಎ. ರತ್ನಮ್ಮ ಇವರಿಗೆ ಅತ್ಯಂತ ಕೃತಜ್ಞರಾಗಿದ್ದೇವೆ.

ಈ ಗ್ರಂಥಕ್ಕೆ ಒಳ್ಳೆಯ ಹೊದಿಕೆ-ಚಿತ್ರವನ್ನು ಬರೆದುಕೊಟ್ಟ ಶ್ರೀ. ರಾಘವೇಂದ್ರರಿಗೂ, ಗ್ರಂಥದಲ್ಲಿ ಸೇರಿಸಲು ಒಳ್ಳೆಯ ಫೋಟೊಗಳನ್ನು ಒದಗಿಸಿಕೊಟ್ಟ ಶ್ರೀಮಾನ್ ಆರ್. ಸಿ. ಬದಾಮಿಯವರಿಗೂ ನಾವು ತುಂಬ ಉಪಕೃತರಾಗಿದ್ದೇವೆ.

**—ಸಂಪಾದಕ**

# ಮೊದಲ ಮಾತು



ಕತೆಯಂತೆ, ಕಾವ್ಯದಂತೆ ಸುಂದರವಾಗಿರುವ ಮೇರಿ ಕ್ಯೂರಿಯ ಜೀವನ-ಚರಿತ್ರೆಯನ್ನು ಓದಿದಾಗ, ಒಂದು ಪ್ರಶ್ನೆ ಮನಸ್ಸಿನಲ್ಲಿ ಪುನಃಪುನಃ ಏಳುತ್ತದೆ, 'ಇಂಥ ಹೆಂಗಸು ತಿರುಗಿ ಹುಟ್ಟಿಯಾಳೇ?' ಎಂದು. ಹುಟ್ಟ ಬಹುದು, ಎಂದು ಆ ಪ್ರಶ್ನೆಗೆ ಧೈರ್ಯವಾಗಿ ಉತ್ತರ ಹೇಳುವುದು ಕಷ್ಟ. ಆ ಅಪೂರ್ವ ಚೇತನದ ವಿಷಯದಲ್ಲಿ ಇದಕ್ಕಿಂತ ಹೆಚ್ಚು ಹೇಳುವುದು ಸಾಧ್ಯ ವಿಲ್ಲ. ಆ ಪ್ರಚಂಡ ಪ್ರತಿಭೆಯೇನು, ಬಾಳಿನ ಕಷ್ಟಗಳ ಮುಂದೆ ಹೆಣಗಿ ಹೋರಾಡಿದ ಆ ಹೃದಯದ ಶಕ್ತಿಯೇನು, ಬಡತನವನ್ನು ಒಲಿದು ಆರಾಧಿಸಿ, ಕೈಗೆಟಕಿದ ನಿಧಿಯನ್ನೂ, ಕೀರ್ತಿ ಗೌರವಗಳನ್ನೂ ಒಲ್ಲದೆ ಹೋದ ಆ ಮನ ಸ್ಸಿನ ಸಂಸ್ಕೃತಿಯೇನು, ಇವುಗಳನ್ನೆಲ್ಲ ಅವಳ ಜೀವನ-ಚರಿತ್ರೆಯನ್ನು ಓದಿಯೇ ತಿಳಿಯಬೇಕು.

ಮೆಡೇಮ್ ಕ್ಯೂರಿಯ ಕಿರಿಯ ಮಗಳು ಈವ್ ಕ್ಯೂರಿ ಅವರು, ಮೇರಿ ಕ್ಯೂರಿಯ ಜೀವನ-ಚರಿತ್ರೆಯನ್ನು ಫ್ರೆಂಚ್‌ನಲ್ಲಿ ಬಹಳ ಸುಂದರವಾಗಿ ಬರೆದಿದ್ದಾರೆ. ಅದು ಇಂಗ್ಲಿಷಿಗೆ ಅನುವಾದಿತವಾಗಿದೆ. ಆ ಅನುವಾದವನ್ನು ಆಧಾರವಾಗಿಟ್ಟುಕೊಂಡು ಈ ಪುಸ್ತಕ ಬರೆದಿದ್ದೇನೆ ಆಧಾರವಾಗಿರುವುದು ಒಂದೇ ಪುಸ್ತಕವಾದ್ದರಿಂದ ಆ ಪುಸ್ತಕದ ಸಾರಾಂಶ ಮಾತ್ರ ಇದರಲ್ಲಿದೆ. ಅಲ್ಲಿಯ ಅನೇಕ ವಾಕ್ಯಗಳು ಇಲ್ಲಿ ಅನುವಾದಿತವಾಗಿ ಬಂದಿವೆ. ಆ ಪುಸ್ತಕದ ಸರಣಿ ಕೂಡ ಅಲ್ಲಲ್ಲಿ ಕಾಣಿಸಿಕೊಂಡಿರಬಹುದು.

ಇಂಗ್ಲಿಷಿನ 'ಮೆಡೇಮ್ ಕ್ಯೂರಿ' ಪುಸ್ತಕದ ಪ್ರತಿ ನನ್ನ ಬಳಿ ಇರಲಿಲ್ಲ. ಅದನ್ನು ಕನ್ನಡದಲ್ಲಿ ಬರೆಯಬೇಕೆಂದಾಗ ತಮ್ಮ ಪುಸ್ತಕವನ್ನು ನನ್ನ ಬಳಿ ಅಷ್ಟು ದಿನವೂ ಇಟ್ಟುಕೊಳ್ಳಲು ಅನುಮತಿ ಕೊಟ್ಟಿದ್ದಕ್ಕಾಗಿ ಶ್ರೀಮಾನ್ ಬಿ. ಎ. ನಾರಾಯಣರಾವ್ ಅವರಿಗೆ ನಾನು ತುಂಬ ಕೃತಜ್ಞಳಾಗಿದ್ದೇನೆ. ಈ ಪುಸ್ತಕ ಮನೋಹರ ಗ್ರಂಥಮಾಲೆಯಿಂದ ಅಚ್ಚಾಗಿ ಹೊರಬಿದ್ದರೆ ಅದರ ಬೆಲೆ ಹೆಚ್ಚಾದೀತೆಂದು ಭಾವಿಸಿ, ಆ ವಿಷಯವಾಗಿ ನಾನು, ಮಾಲೆಯ ಸಂಪಾದಕರವರಲ್ಲಿ ಪ್ರಾರ್ಥನೆ ಮಾಡಿಕೊಂಡೆ. ಪುಸ್ತಕ ಬರೆಯುವುದರಲ್ಲಿ ಇದು ನನ್ನ ಮೊದಲನೆಯ ಪ್ರಯತ್ನವಾದರೂ ಶ್ರೀಮಾನ್ ಜೋಶಿಯವರು ಹಿಂತೆಗೆಯದೆ ತಮ್ಮ ಗ್ರಂಥಮಾಲೆಯಿಂದ ಇದನ್ನು ಪ್ರಕಟಿಸಿದ್ದಕ್ಕಾಗಿ ನಾನು ಅವರಿಗೆ ತುಂಬ ಕೃತಜ್ಞಳಾಗಿದ್ದೇನೆ.

—ಕೆ. ವಿ. ರತ್ನಮ್ಮ

## ತಿದ್ದುಪಡಿ

೫೭ನೆಯ ಪುಟದ ಕೊನೆಯಲ್ಲಿ ಪ್ರಾರಂಭವಾಗುವ ವಾಕ್ಯವನ್ನು ಈ ರೀತಿಯಾಗಿ ತಿದ್ದಿ ಓದಿಕೊಳ್ಳಬೇಕು.

"ತಂದೆ ಜೀವನೋಪಾಯಕ್ಕೆ ಡಾಕ್ಟರ್ ಆಗಿದ್ದರೂ ವಿಜ್ಞಾನದಲ್ಲಿ ಆಸಕ್ತಿಯುಳ್ಳವನು. ಪಿಯರಿ ಶಾಲೆಗೆ ಹೋಗದಿದ್ದರೂ ಬೆಜಿಲ್ ಎಂಬ ಉಪಾಧ್ಯಾಯನ ಕೈಕೆಳಗೆ ಓದಿ ತನ್ನ ೧೮ನೆಯ ವಯಸ್ಸಿನಲ್ಲಿ ಭೌತಶಾಸ್ತ್ರದ ಮಾಸ್ಟರ್ ಡಿಗ್ರಿಯನ್ನು ಪಡೆದಿದ್ದ"

೧೩೩ನೆಯ ಪುಟದ ೭ನೆಯ ಪಂಕ್ತಿಯಲ್ಲಿ 'ಆದರೂ ಮುದುಕ. . .' ಎಂದು ಪ್ರಾರಂಭವಾಗುವ ವಾಕ್ಯವನ್ನು ತಿದ್ದಿ ಈ ರೀತಿ ಓದಿಕೊಳ್ಳಬೇಕು.

"ಆದರೂ ಮುದುಕ ತನ್ನ ಮಗ ಜಾಕ್ವೆಸ್ ಬಳಿ ಇರುವುದಕ್ಕೆ ಇಷ್ಟಪಟ್ಟು ಪರದೇಶದವಳಾದ ಸೊಸೆಯನ್ನು ಬೇಡ ಎಂದರೆ ಅದೂ ಸರಿ ಎಂದು ಮೇರಿ ಯೋಚಿಸಿದಳು. ಆದರೆ ಮಗನನ್ನು ಕಳೆದುಕೊಂಡ ಮುದುಕ 'ನೀನೂ ಒಪ್ಪುವುದರಿಂದ ಯಾವಾಗಲೂ ನಿನ್ನ ಬಳಿ ಇರುವುದೇ ನನಗೆ ಇಷ್ಟ ಮೇರಿ' ಎಂದು ನಿರ್ಧಾರವಾಗಿ ಉತ್ತರಕೊಟ್ಟ."

ಮುಂದೆ ಬರಲಿರುವ ಕೆಲವು
ಕುಸುಮಗಳು



## ನಕ್ಕಳಾ ತಾಯಿ
ಜಿ. ಪಿ. ರಾಜರತ್ನಂ

## ತೆನ್ನಾಲಿ ರಾಮಕೃಷ್ಣ
ಸಿ. ಕೆ. ವೆಂಕಟರಾಮಯ್ಯ

## ನೋಡಗಳು
'ಶ್ರೀಸ್ವಾಮಿ'

## ನಟಸಾರ್ವಭೌಮ
ಅ. ನ. ಕೃಷ್ಣರಾಯ

## ಹೂವಿನ ಹಾಸಿಗೆ
'ಹೊಯಿಸಳ'

ವರುಷದಲ್ಲಿ
ಸುಮಾರು ೧೫೦ ಪುಟಗಳುಳ್ಳ
೬ ಸರಸ ಗ್ರಂಥಗಳು

ವಾರ್ಷಿಕ ಚಂದಾ:
೩ ರೂ. ೮ ಆ. ಮಾತ್ರ
(ಅಂ. ವೆ. ಸೇರಿ)



ಇದೀಗ ಪ್ರಕಟವಾಗಿದೆ!

# ಆಶುನಾಟಕಗಳು

ಇದು ಮನೋಹರ ಗ್ರಂಥಮಾಲೆಯ ಸಾಹಿತ್ಯೋತ್ಸವದ ಸಮಯಕ್ಕೆ ಏರ್ಪಡಿಸಿದ ಆಶುನಾಟಕಗಳ ಸ್ಪರ್ಧೆಯಲ್ಲಿ ಭಾಗವಹಿಸಿದ ಮೂವರು ನಾಟ್ಯಸಂಘದವರ ಏಕಾಂಕ ನಾಟಕಗಳ ಸಂಗ್ರಹ! ಬೆಲೆ: ೦-೧೨-೦

ನಮ್ಮ ಚಂದಾದಾರರಿಗೆ ೩ ೪ ಬೆಲೆಗೆ ಕೊಡುತ್ತೇವೆ. ಪಡೆಯಲಿಚ್ಛೆಯುಳ್ಳವರು ೯ ಆ. + ಅಂಚೆ ವೆಚ್ಚ ೦-೧-೩ ಹೀಗೆ ಒಟ್ಟು ೦-೧೦-೩ ಸ್ಟ್ಯಾಂಪು ಕಳಿಸಿಕೊಡಬೇಕು.

ಈ ಸವಲತ್ತಿನ ಅವಧಿ ಮೂರು ತಿಂಗಳಗಳ ವರೆಗೆ ಮಾತ್ರ ಇದೆ. ಬೇಗನೆ ತರಿಸಿಕೊಳ್ಳಿರಿ!



ಪ್ರಯೋಗಶಾಲೆಯಲ್ಲಿ ಮೇರಿ ಕ್ಯೂರಿ

(೧೯೧೨)



ಮೆಡೇಮ್ ಕ್ಯೂರಿ

(೧೯೩೯ರಲ್ಲಿ ಬರೆದ ಭಾವಚಿತ್ರ)

ಅಧ್ಯಾಯ ಒಂದು

# ಮೇನ್ಯ



ಹತ್ತೊಂಬತ್ತನೇ ಶತಮಾನದಲ್ಲಿ ಪೋಲೆಂಡ್ ದೇಶದ ಸ್ಥಿತಿ ತುಂಬ ಕೆಟ್ಟಿತ್ತು. ಕ್ರೂರಿಗಳಾದ ದೊರೆಗಳ ಆಡಳಿತದಲ್ಲಿದ್ದ ರಷ್ಯ, ಈ ಸಣ್ಣ ದೇಶವನ್ನು ತನ್ನ ಹಿಡಿತದಲ್ಲಿ ಸಿಕ್ಕಿಸಿಕೊಂಡು ಮೆಟ್ಟಿ ನಿಂತಿತ್ತು. ಬಲಹೀನವಾದ ಪೋಲೆಂಡ್‌ನ್ನು ಭಾಗ-ವಿಭಾಗಗಳಾಗಿ ಮಾಡಿ, ಸುತ್ತಲ ಬಲಿಷ್ಠ ರಾಜ್ಯಗಳು ತಮ್ಮ ಅಧಿಕಾರಕ್ಕೆ ಒಳಪಡಿಸಿಕೊಂಡಿದ್ದುವು. ಪ್ರತಿಯೊಬ್ಬ ಪೋಲನ ಹೃದಯವೂ ರಷ್ಯಾದ ಪ್ರಜೆಯಾಗಿರಲು ಒಪ್ಪದೆ ದಂಗೆಯೇಳುತ್ತಿತ್ತು. ಪೋಲರು ಈ ಬಂಧನವನ್ನು ಸುಮ್ಮನೆ ಅನುಭವಿಸಲೂ ಇಲ್ಲ. ಅನೇಕ ದೇಶಭಕ್ತರು ದಂಗೆಗೇಳುತ್ತಲೇ ಇದ್ದರು. ೧೮೩೦ರಲ್ಲಿ ನಡೆದ ದಂಗೆ ವ್ಯರ್ಥವಾದ ಮೇಲೆ ರಷ್ಯದ ದೊರೆ ತನ್ನ ರಾಜ್ಯಕ್ಕೆ ಸೇರಿದ್ದ ಪೋಲೆಂಡಿನ ಭಾಗಗಳಲ್ಲಿ ಕ್ರೂರವಾದ ನಿಬಂಧನೆಗಳನ್ನು ಮಾಡಿದನು. ದಂಗೆಯೆದ್ದವರೆಲ್ಲ ಒಟ್ಟಿಗೆ ದೇಶಬಿಟ್ಟು ಹೋಗಬೇಕಾಯಿತು. ಅವರ ಸ್ವತ್ತೆಲ್ಲ ಸರಕಾರದಿಂದ ಅಪಹರಣವಾಯಿತು. ೧೮೬೩ನೆಯ ಇಸವಿಯಲ್ಲಿ ಪೋಲರು ಉದ್ರೇಕಗೊಂಡು ಇನ್ನೊಂದು ಸಲ ದಂಗೆಯೆದ್ದರು. ರಷ್ಯನ್ನರ ಬಂದೂಕುಗಳ ಮುಂದೆ ಮಚ್ಚು ಕೊಡಲಿಗಳನ್ನು ಹಿಡಿದು ಹದಿನೆಂಟು ತಿಂಗಳ ಕಾಲ ಘೋರವಾಗಿ ಯುದ್ಧಮಾಡಿದರು. ಕೊನೆಗೆ ದಂಗೆಯೆಲ್ಲ ವ್ಯರ್ಥವಾಗಿ ದಂಗೆಯ ನಾಯಕರ ಶರೀರಗಳು ಗಲ್ಲಿನ ಮರಕ್ಕೆ ತೂಗಿದ ಮೇಲೆ ಎಲ್ಲ ಶಾಂತವಾಯಿತು. ಅಲ್ಲಿಂದ ಮುಂದೆ, ಸ್ವಾತಂತ್ರ್ಯ ಕಳೆದುಕೊಳ್ಳಲು ಇಷ್ಟಪಡದೆ, ಕೊಡವಿ ಕತ್ತೆತ್ತುತ್ತಿದ್ದ ಪೋಲೆಂಡನ್ನು ಪೂರ್ತಿಯಾಗಿ ಮುರಿಯಲು ಏನೇನು ಆಗಬೇಕೋ ಅದೆಲ್ಲ ನಡೆಯಿತು. ದಂಗೆಯಲ್ಲಿ ಸೇರಿದ್ದ ಅನೇಕರನ್ನು ಬಂಧಿಸಿ ಸೈಬೀರಿಯಾದ ಮಂಜುಪ್ರದೇಶಗಳಿಗೆ ಸಾಗಿಸಿದ ಮೇಲೆ ಪೋಲೆಂಡ್

ದೇಶದಲ್ಲೆಲ್ಲ ರಷ್ಯನ್ ಪ್ರೊಫೆಸರುಗಳೂ, ಇತರರೂ ತುಂಬಿಕೊಂಡರು. ಇವರು ಪೋಲರ ಮೇಲೆ ಕಣ್ಣಿಟ್ಟು, ಅವರ ಮತವನ್ನೂ, ಪುಸ್ತಕಗಳನ್ನೂ, ಪತ್ರಿಕೆಗಳನ್ನೂ, ಕ್ರಮೇಣ ಅವರ ಮಾತೃಭಾಷೆಯನ್ನೂ ಹೆಸರಿಲ್ಲದಂತೆ ಮಾಡಲು ಹವಣಿಸಿದರು. ರಷ್ಯನ್‌ರು, ಇತರರ ಅಧಿಕಾರವನ್ನು ಒಲ್ಲದೆ ಹೋದ ಈ ಸಣ್ಣ ರಾಷ್ಟ್ರದ ಜನಗಳ ಜೀವ ಹಿಂಡಲು ಮೊದಲುಮಾಡಿ ದರು. ಇಲ್ಲಿಂದ ಮುಂದೆ, ದೇಶಕ್ಕಾಗಿ ದಂಗೆಯೆದ್ದು ಜೀವಕೊಟ್ಟು ಪ್ರಯೋಜನವಿಲ್ಲವೆಂದು ತಿಳಿದ ಪೋಲರು ತಮ್ಮ ಕಾರ್ಯಮಾರ್ಗವನ್ನು ಬದಲಾಯಿಸಿದರು. ಶಾಲೆಯ ಉಪಾಧ್ಯಾಯರುಗಳೂ, ಇತರರೂ, ರಷ್ಯಾದ ಪ್ರಜೆಗಳಾಗಿರಲು ಒಪ್ಪುವಂತೆ ನಟಿಸುತ್ತ, ಸೊರಗಿಹೋಗಿದ್ದ ಜನಾಂಗದಲ್ಲಿ ಜೀವವನ್ನೂ, ಶಕ್ತಿಯನ್ನೂ ತುಂಬಲು ಮೊದಲುಮಾಡಿದರು

ಕ್ರೂರಿಗಳ ಆಡಳಿತಕ್ಕೆ ಸಿಕ್ಕಿದ್ದ ಇಂತಹ ನತದೃಷ್ಟ ಪೋಲೆಂಡ್, ಮೆಡೇಮ್ ಕ್ಯೂರಿ ಎಂದು ಜನ, ಭೂಷಿಸಿದ ಮೇನ್ಯ ಸ್ಕ್ಲೊಡೊವ್‌ಸ್ಕಿಗೆ ಜನ್ಮಕೊಟ್ಟ ದೇಶ. ವ್ಲಾಡಿಸ್ಲಾವ್ ಸ್ಕ್ಲೊಡೊವ್‌ಸ್ಕಿ ಮತ್ತು ಮೇಡಮ್ ಸ್ಕ್ಲೊಡೊವ್‌ಸ್ಕಿಗೆ ಮೇನ್ಯ, ಕಿರಿಯ ಹುಡುಗಿ. ಮೇನ್ಯಳ ತಾಯಿಯಾದ ಮೆಡೇಮ್ ಸ್ಕ್ಲೊಡೊವ್‌ಸ್ಕಿ, ವಾರ್ಸಾದ ಖಾಸಗೀ ಪಾಠಶಾಲೆಯೊಂದ ರಲ್ಲಿ ಚೆನ್ನಾಗಿ ವಿದ್ಯಾಭ್ಯಾಸ ಮಾಡಿ, ಅದೇ ಪಾಠಶಾಲೆಯಲ್ಲಿ ಪ್ರೊಫೆಸರ್ ಆಗಿ ಕೊನೆಗೆ ಅಲ್ಲಿಯ ಡೈರೆಕ್ಟರ್ ಆದಳು. ಮೆಡೇಮ್ ಸ್ಕ್ಲೊಡೊವ್‌ಸ್ಕಿ ಅತ್ಯಂತ ಚೆಲುವೆ, ಪಿಯಾನೊ ಬಾರಿಸುತ್ತ ತುಂಬ ಚೆನ್ನಾಗಿ ಹಾಡುತ್ತಿ ದ್ದಳು. ೧೮೬೦ರಲ್ಲಿ ವ್ಲಾಡಿಸ್ಲಾವ್ ಸ್ಕ್ಲೊಡೊವ್‌ಸ್ಕಿಗೂ ಇವಳಿಗೂ ಮದುವೆ ಗೊತ್ತಾದಾಗ, ಆ ಮಾತು ಎಲ್ಲರಿಗೂ ಮೆಚ್ಚಿಕೆಯಾಯಿತು. ಎಲ್ಲರೂ ಇದು ಬಹು ಒಪ್ಪಾದ ಮದುವೆ ಎಂದರು. ವ್ಲಾಡಿಸ್ಲಾವ್, ಪೀಟರ್ಸ್‌ಬರ್ಗ್ ವಿಶ್ವವಿದ್ಯಾಲಯದಲ್ಲಿ ದೀರ್ಘವಾಗಿ ವಿದ್ಯಾಭ್ಯಾಸಮಾಡಿ, ವಾರ್ಸಾಕ್ಕೆ ಹಿಂದಿರುಗಿ, ಅಲ್ಲಿಯ ಪಾಠಶಾಲೆಯೊಂದರಲ್ಲಿ ಭೌತಶಾಸ್ತ್ರ ಮತ್ತು ಗಣಿತಶಾಸ್ತ್ರವನ್ನು ಬೋಧಿಸುತ್ತಿದ್ದ.

ಮೆಡೇಮ್ ಸ್ಕ್ಲೊಡೊವ್‌ಸ್ಕಿ, ವಾರ್ಸಾದಲ್ಲಿ ಹೆಣ್ಣುಹುಡುಗರ ಶಾಲೆಯೊಂದನ್ನು ನಡೆಸುತ್ತಿದ್ದಳು. ಸ್ಕ್ಲೊಡೊವ್‌ಸ್ಕಿ ದಂಪತಿಗಳು, ಇದೇ ಶಾಲೆಯ ಕಟ್ಟಡದ ಕೆಳ ಅಂತಸ್ತಿನಲ್ಲಿ ಎಂಟು ವರ್ಷಗಳ ಕಾಲ ವಾಸಿಸುತ್ತಿ

ದ್ದರು. ಇಲ್ಲಿ ೧೮೬೭ನೇ ಇಸವಿ ನವೆಂಬರ್ ೭ನೇ ದಿನ ಇವರ ಕಿರಿಯ ಹುಡುಗಿ ಮೇರಿ ಹುಟ್ಟಿದಳು. 'ಪುಟ್ಟ ಮೇನ್ಯಾ'ಗೆ ಮೂರು ಜನ ಅಕ್ಕಂದಿರು, ಒಬ್ಬ ಅಣ್ಣ. ಹಿರಿಯಕ್ಕ ಸೋಫಿ ಅಥವ ಜೋಸ್ಯಾ, ಎರಡನೆಯವನು ಒಬ್ಬನೆ ಅಣ್ಣ ಜೋಸೆಫ್, ಮೂರನೆಯವಳು ಬ್ರೋನ್ಯ, ನಾಲ್ಕನೆಯ ಕಿರಿಯಕ್ಕ ಹೆಲಾ. ೧೮೬೮ರಲ್ಲಿ ಮೇರಿ ಇನ್ನೂ ಎಳೆಯ ಮಗುವಾಗಿದ್ದಾಗ, ಸ್ಕ್ಲೊಡೊವ್‌ಸ್ಕಿ, ತನ್ನ ಹಳೆಯ ಶಾಲೆ ಬಿಟ್ಟು ಹೊಸದೊಂದು ಶಾಲೆಯಲ್ಲಿ ಪ್ರೊಫೆಸರ್ ಆಗಿಯೂ, ಅಂಡರ್ ಇನ್‌ಸ್ಪೆಕ್ಟರ್ ಆಗಿಯೂ ಕೆಲಸ ವಹಿಸಿಕೊಂಡ. ಐದು ಮಕ್ಕಳ ಕೆಲಸದ ಭಾರವೇ ಹೆಚ್ಚಾಗಿದ್ದ ಮೇಡಮ್ ಸ್ಕ್ಲೊಡೊವ್‌ಸ್ಕಿ ಇಲ್ಲಿಗೆ ತನ್ನ ಶಾಲೆಯ ಕೆಲಸ ಬಿಟ್ಟುಕೊಟ್ಟಳು.

ಮೇನ್ಯಾಗೆ ನಾಲ್ಕು ವರ್ಷ ತುಂಬಿತು. ಬ್ರೋನ್ಯ ಆಗ ತಾನೇ ಅಕ್ಷರ ಕಲಿಯುತ್ತಿದ್ದಳು ಅದು ಬಹಳ ಬೇಸರದ ಕೆಲಸವೆಂದು ಬ್ರೋನ್ಯ ಕಂಡುಕೊಂಡು, ಸುಲಭವಾಗಿ ಕಲಿಯಲು ಒಂದು ಉಪಾಯ ಹುಡುಕಿದಳು. ತನ್ನ ಚಿಕ್ಕ ತಂಗಿಯಾದ ಮೇನ್ಯಾಗೆ ತಾನು ಉಪಾಧ್ಯಾಯಿನಿಯಾಗಿ ನಿಂತು ಅಕ್ಷರಗಳನ್ನು ಕಲಿಸಲು ತೊಡಗಿದಳು. ಅನೇಕ ವಾರಗಳ ಕಾಲ, ಚಿಕ್ಕ ಹುಡುಗಿಯರಿಬ್ಬರೂ ರಟ್ಟಿನಲ್ಲಿ ಅಕ್ಷರಗಳನ್ನು ಕತ್ತರಿಸಿ ಜೋಡಿಸುವುದರಲ್ಲಿ ಕಾಲಕಳೆಯುತ್ತಿದ್ದರು. ಕೊನೆಗೆ ಒಂದು ದಿನ ಬ್ರೋನ್ಯ, ಬಹು ಸುಲಭವಾದ ಪಾಠವೊಂದನ್ನು ತಂದೆತಾಯಿಗಳ ಮುಂದೆ ಓದಿ ಒಪ್ಪಿಸುತ್ತ, ಅಕ್ಷರಗಳನ್ನು ಕೂಡಿಸಲಾರದೆ ತಡವರಿಸುತ್ತಿದ್ದಳು ಕೇಳುತ್ತ ಕೇಳುತ್ತ ಮೇನ್ಯಳ ಸಹನೆ ಮೀರಿ ಹೋಗಿ, ಅವಳು ತೆರೆದ ಪುಸ್ತಕವನ್ನು ಅಕ್ಕನ ಕೈಯಿಂದ ತೆಗೆದುಕೊಂಡು ಸ್ವಲ್ಪವೂ ತಡವರಿಸದೆ ಅಕ್ಷರಗಳನ್ನು ಸುಲಭವಾಗಿ ಕೂಡಿಸಿಕೊಂಡು ಓದಿ ಮುಗಿಸಿದಳು. ಪುಸ್ತಕದಿಂದ ದೃಷ್ಟಿ ಎತ್ತಿದಾಗ, ಚಿಕ್ಕನ ಬೆರಗಾಗಿದ್ದ ತಾಯಿತಂದೆಗಳನ್ನೂ, ತಪ್ಪಿತಸ್ಥಳಂತೆ ನಿಂತಿದ್ದ ಬ್ರೋನ್ಯಳನ್ನೂ ನೋಡಿದ ಕೂಡಲೆ ನಾಲ್ಕುವರ್ಷದ ಹುಡುಗಿ ತಾನು ಮಾಡಿದುದು ತಪ್ಪೆಂದು ಭಾವಿಸಿಕೊಂಡು ಹೆದರಿ, ಬಿಕ್ಕಿಬಿಕ್ಕಿ ಅಳುವುದಕ್ಕೆ ಪ್ರಾರಂಭಿಸಿದಳು. ಅಳುವಿನ ಮಧ್ಯದಲ್ಲಿ ಕ್ಷಮೆ ಬೇಡುತ್ತ 'ನಾನು ಬೇಕೆಂದು ಹಾಗೆ ಮಾಡಲಿಲ್ಲ. ಅದು ನನ್ನ ತಪ್ಪಲ್ಲ—ಬ್ರೋನ್ಯಳದೂ ಅಲ್ಲ, ಅದು ತುಂಬ ಸುಲಭವಾಗಿತ್ತು ಅಷ್ಟೆ.' ಎಂದಳು.

ಮೇನ್ಯಾ ತನ್ನ ತಾಯಿಯನ್ನು ಅಗಾಧವಾಗಿ ಪ್ರೀತಿಸುತ್ತಿದ್ದಳು. ಆ ಪ್ರೀತಿಗೆ ಕೊನೆಮೊದಲಿರಲಿಲ್ಲ. ಮೇನ್ಯಾಗೆ ಅರಿವು ಮೂಡಿದಾಗಿನಿಂದ ಅವಳ ತಾಯಿ ಎಂದೂ ಅವಳನ್ನು ಮುದ್ದಿಸುತ್ತಿರಲಿಲ್ಲ. ಇತರ ತಾಯಂದಿರಂತೆ ಅವಳು ತನ್ನ ಮಕ್ಕಳಿಗೆ ಮುತ್ತುಕೊಡುತ್ತಿರಲಿಲ್ಲ. ಆದರೂ ಮೇನ್ಯಾಗೆ ತಾಯಿಯ ಅಪಾರವಾದ ಪ್ರೀತಿ ಸ್ನೇಹಗಳು ಚೆನ್ನಾಗಿ ತಿಳಿದಿದ್ದುವು. ತಾಯಿಯ ಸುಂದರವಾದ ಮುಖದಲ್ಲಿ ತೋರುತ್ತಿದ್ದ ಒಂದು ನಗೆ, ಅವಳ ಒಂದು ಮಾತು, ಒಂದು ನೋಟದಲ್ಲಿ, ಮೇನ್ಯಾ ಎಂತಹ ಮೃದುವಾದ ಪ್ರೇಮಮಯ ಹೃದಯ ತನ್ನ ಬಾಳನ್ನು ರೂಪಿಸುತ್ತಿದೆಯೆಂಬುದನ್ನು ತಿಳಿಯುತ್ತಿದ್ದಳು. ತಾಯಿಗೆ ಆದಷ್ಟು ಸಮೀಪದಲ್ಲಿ ಕುಳಿತು, ಅವಳ ಮೃದುವಾದ ಬೆರಳುಗಳು ತನ್ನ ಹಣೆಯನ್ನು ಸವರಿದರೆ, ಮೇನ್ಯಾಗೆ ಅದು ಬಹಳ ಸುಖವನ್ನು ಕೊಡುತ್ತಿತ್ತು. ಆದರೂ ಹೀಗೆ ತಾಯಿ ತಮ್ಮನ್ನು ದೂರವಾಗಿ ಇಡುವುದರ ಅರ್ಥ ಆ ಚಿಕ್ಕ ಹುಡುಗಿಗೆ ಹೊಳೆಯುತ್ತಿರಲಿಲ್ಲ. ಮೆಡೇಮ್ ಸ್ಕ್ಲೊಡೊವ್‌ಸ್ಕಿಗೆ, ಮೇನ್ಯ ಹುಟ್ಟಿದ ಹೊಸದರಲ್ಲಿಯೇ ಕ್ಷಯರೋಗದ ಸೂಚನೆಗಳು ತಲೆದೋರಿದ್ದುವು. ಈ ಐದು ವರ್ಷಗಳು ವೈದ್ಯರು ಹೇಳಿದಂತೆ ಎಚ್ಚರಿಕೆಯಿಂದ ನಡೆದುಕೊಂಡಿದ್ದರೂ, ರೋಗ ಉಲ್ಬಣವಾಗಿತ್ತು. ಆದ್ದರಿಂದ ತನ್ನ ಮಕ್ಕಳನ್ನು ದೂರವಾಗಿಟ್ಟು ಬಹು ಎಚ್ಚರಿಕೆಯಿಂದಿದ್ದರೂ ಅವಳು ಮಕ್ಕಳಿಗೆ ತನ್ನ ದುಃಖವನ್ನಾಗಲೀ, ನೋವನ್ನಾಗಲೀ ತೋರ್ಪಡಿಸುತ್ತಿರಲಿಲ್ಲ. ಪ್ರತಿನಿತ್ಯವೂ ಚಟುವಟಿಕೆಯಾಗಿ ಕೆಲಸ ನಡೆಸುತ್ತ, ಉಲ್ಲಾಸದಿಂದಿರುವಂತೆ ನಟಿಸುತ್ತಿದ್ದಳು. ಚಿಕ್ಕಮಕ್ಕಳಿಗೆ ತಾಯಿಯ ಕೋಣೆಯಿಂದ ಕೇಳಿ ಬರುತ್ತಿದ್ದ ಒಣಕೆಮ್ಮಿನ ಶಬ್ದ, ತಂದೆಯ ಮುಖದ ಮೇಲೆ ಒಂದೇ ಸಮನಾಗಿ ನೆಲಸಿದ್ದ ಚಿಂತೆಯ ಛಾಯೆ, ಇವು ಹೊರತು ಇನ್ನೇನೂ ತಿಳಿದಿರಲಿಲ್ಲ.

ಐದು ವರ್ಷದ ಮೇನ್ಯಾಗೆ ತನ್ನ ಹಿರಿಯ ಅಕ್ಕನೆಂದರೆ ತುಂಬ ಅಚ್ಚುಮೆಚ್ಚು. ಜೊಸ್ಯೆಯು ಕತೆ ಹೇಳುವುದರಲ್ಲಿ ಬಹು ಚತುರೆ. ಅವಳ ಕಲ್ಪನಾಶಕ್ತಿ, ಕತೆಗಳಿಗೆ ವಿಲಕ್ಷಣವಾದಕಳೆ ಕಟ್ಟಿಸುತ್ತಿತ್ತು. ಪುಟ್ಟ ಮೇನ್ಯಳು ಕತೆಗಳಲ್ಲಿಯ ವಿನೋದಸನ್ನಿವೇಶಗಳಲ್ಲಿ, ಹೃದಯ ಹಿಡಿಸಲಾರದಷ್ಟು ನಗುತ್ತ, ಭಯಂಕರ ಸನ್ನಿವೇಶಗಳಲ್ಲಿ ಹೆದರಿ ನಡುಗಿ ಕೇಳುತ್ತ ಕೇಳುತ್ತ, ಮುಗ್ಧಳಾಗಿ

ಬಿಡುತ್ತಿದ್ದಳು. ಜೊಸ್ಯೆಯಳಿಗೆ ಸಮಾನವಾಗಿ ಕತೆ ಹೇಳುವುದಕ್ಕೆ ಅವಳ ತಂದೆತಾಯಿಗಳಿಗೂ ಬರುತ್ತಿರಲಿಲ್ಲ. ಜೊಸ್ಯೆಯು ತಾನೇ ಸ್ವಂತವಾಗಿ ಕವನಗಳನ್ನು ಕಟ್ಟಿ ತನ್ನ ತಂಗಿಯರ ಮುಂದೆ ಅತ್ಯುತ್ಸಾಹದಿಂದ ಹಾಡಿ ತೋರಿಸುತ್ತಿದ್ದಳು.

ಮನೆಯ ಒಂದು ಕೋಣೆಯಲ್ಲಿ ಪ್ರೊಫೆಸರ್ ಸ್ಕ್ಲೊಡೊವ್‌ಸ್ಕಿ ಬರಾಮೀಟರ್ ಒಂದನ್ನು ಇಟ್ಟಿದ್ದ. ತಂದೆ ಅದನ್ನು ಆಗಾಗ ಒಂದೊಂದು ದಿನ, ಸೂಕ್ಷ್ಮವಾಗಿ ಕೈಯಲ್ಲಿ ತೆಗೆದುಕೊಂಡು ಸರಿಮಾಡಿ ಒರೆಸಿಡುತ್ತಿದ್ದಾಗ, ಮಕ್ಕಳು ಕುತೂಹಲದಿಂದ ಸುತ್ತಲೂ ನೆರೆದು ನಿಂತು ಅದನ್ನೇ ನೋಡುತ್ತಿದ್ದರು. ಮೋನ್ಯಾಗೆ ಅತ್ಯಂತ ಪ್ರಿಯವಾದ ಇನ್ನೊಂದು ವಸ್ತುವೆಂದರೆ ಅದೇ ಕೋಣೆಯಲ್ಲಿದ್ದ ಒಂದು ಗಾಜಿನ ಬೀರು. ಬೀರುವಿನ ತುಂಬ ಸುಂದರವಾದ ಮತ್ತು ಸೂಕ್ಷ್ಮವಾದ ಗಾಜಿನ ಕೊಳವೆಗಳು ಮತ್ತು ಇತರ ಸಾಧನಗಳು ತುಂಬಿದ್ದುವು. ಈ ಮೋಹಕವಾದ ವಸ್ತುಗಳ ಪ್ರಯೋಜನ ವೇನೆಂಬುದು ಮೋನ್ಯಳಿಗೆ ತಿಳಿದಿರಲಿಲ್ಲ. ಪ್ರೊಫೆಸರ್ ಸ್ಕ್ಲೊಡೊವ್‌ಸ್ಕಿ ವಿಜ್ಞಾನವನ್ನು ಬೋಧಿಸುವ ತರಗತಿಗಳಿಗೆ ಈ ಸಾಮಾನುಗಳನ್ನು ತೆಗೆದುಕೊಂಡು ಹೋಗುತ್ತಿದ್ದ. ಆದರೆ ವಿಜ್ಞಾನದ ಬೋಧನೆಗೆ ಗೊತ್ತಾಗಿದ್ದ ಕಾಲ ಸರಕಾರದಿಂದ ಕಡಮೆ ಮಾಡಲ್ಪಟ್ಟ ಮೇಲೆ, ಆ ಗಾಜಿನ ಬೀರು ಯಾವಾಗಲೂ ಮುಚ್ಚಿರುತ್ತಿತ್ತು. ಮೋನ್ಯ ಮೆಟ್ಟಿಂಗಾಲಿಟ್ಟು ನಿಂತು ಆ ಮನೋಹರವಾದ ಸಾಮಾನುಗಳನ್ನು ನೋಡಿ ಹಿಗ್ಗುತ್ತಿದ್ದಾಗ, ಒಂದು ದಿನ ತಂದೆ ಅವಳಿಗೆ ಅವುಗಳ ಹೆಸರು 'ಭೌತ ಸಲಕರಣೆಗಳು' (Physics apparatus) ಎಂದು ತಿಳಿಸಿದ. ಏನು ತಮಾಷಿಯಾದ ಹೆಸರು! ಆ ಹೆಸರನ್ನು ಮೇರಿ ಮರೆಯಲಿಲ್ಲ. ಉತ್ಸಾಹ ಉಕ್ಕುತ್ತಿದ್ದ ಆ ಸಂದರ್ಭದಲ್ಲಿ ಐದು ವರ್ಷದ ಹುಡುಗಿ ಆ ಹೆಸರನ್ನು ಪುನಃ ಪುನಃ ರಾಗವಾಗಿ ಹಾಡಿಕೊಂಡಳು.

ದೊಡ್ಡವರ ಹೃದಯದಲ್ಲಿ ದೇಶದ ವಿಷಯವಾಗಿ ಹುದುಗಿದ್ದ ಮೂಕನೋವು ಮಕ್ಕಳ ಮನಸ್ಸಿನ ಮೇಲೂ ಒಂದು ವಿಧವಾದ ಭಯ ಶಂಕೆಗಳನ್ನು ಹುಟ್ಟಿಸುತ್ತಿತ್ತು. ಪ್ರೊಫೆಸರ್ ಸ್ಕೊಡೊವ್‌ಸ್ಕಿಯ ಶಾಲೆಯ ಕಟ್ಟಡದ ಬಲಭಾಗದ ಕೊಠಡಿಗಳಲ್ಲಿ ಕ್ರೂರವಾದ ರಷ್ಯನ್ ಸರ್ಕಾರದ ಪ್ರತಿನಿಧಿಯಾಗಿಯೂ, ಶಾಲೆಯ ಡೈರೆಕ್ಟರ್ ಆಗಿಯೂ ಐವಾನೋವ್ ಎಂಬ

ವ್ಯಕ್ತಿ ಪಾಪಿಸುತ್ತಿದ್ದ ಸ್ಕೊಕ್ಲಡೊವ್‌ಸ್ಕಿಯ ಮನೆಯವರೆಲ್ಲರೂ ಇವನನ್ನು ದ್ವೇಷಿಸುತ್ತಿದ್ದರು. ಒಲವಂತವಾಗಿ ರಷ್ಯನ್ ಭಾಷೆಯಲ್ಲಿ ಪಾಠ ಹೇಳುತ್ತಿದ್ದ ಇತರ ಉಪಾಧ್ಯಾಯರ ಮನಸ್ಸಿನ ತೀಕ್ಷ್ಣವಾದ ನೋವನ್ನು ಅರಿಯಲು ಐವನೊವ್ ಒಲ್ಲದೆ ಹೋಗಿದ್ದ. ಅವನು ಶಾಲೆಯ ಮಕ್ಕಳು ರಷ್ಯನ್ ಭಾಷೆಯಲ್ಲಿ ಬರೆದ ಪ್ರಬಂಧಗಳಲ್ಲಿ ಪೋಲಿಷ್ ಭಾಷೆಯ ಮಾತುಗಳು ಕೈತಪ್ಪಿ ಹೊಕ್ಕಿವೆಯೋ ಏನೋ ಎಂದು ಬಹು ಶ್ರದ್ಧೆಯಿಂದ ಕಣ್ಣಲ್ಲಿ ಕಣ್ಣಿಟ್ಟು ಹುಡುಕುವನು. ಒಂದು ದಿನ ತನ್ನ ಪ್ರಯತ್ನದಲ್ಲಿ ಐವನೊವ್ ಗೆದ್ದಾಗ, ಪ್ರೊಫೆಸರ್ ಸ್ಕೊಕ್ಲಡೊವ್‌ಸ್ಕಿ ತನ್ನ ವಿದ್ಯಾರ್ಥಿಯ ಕಡೆಗೆ ವಹಿಸಿಕೊಂಡು ಶಾಂತವಾಗಿ 'ಐವನೊವ್, ಆ ಮಗು ತಪ್ಪು ಮಾಡಿದ್ದರೆ ಅದು ಬರೀ ಕೈತಪ್ಪಿನಿಂದ ಆದದ್ದು. . ನೀನು ಕೂಡ ಕೆಲವು ಸಲ ರಷ್ಯನ್ ಭಾಷೆಯನ್ನು ಬಹಳ ತಪ್ಪಾಗಿ ಬರೆಯುತ್ತೀ. ಅಷ್ಟೇಕೆ, ಅನೇಕಾನೇಕ ಸಲ ತಪ್ಪಾಗಿಯೇ ಒರೆಯುತ್ತೀಯೆ. ನೀನು ಬೇಕೆಂದು ಹಾಗೆ ಮಾಡುವುದಿಲ್ಲವಲ್ಲ, ಆ ಮಗುವೂ ಹಾಗೆಯೇ' ಎಂದು ಉತ್ತರ ಕೊಟ್ಟ. ಆ ದಿನದಿಂದ ಐವನೊವ್. ಸ್ಕೊಕ್ಲಡೊವ್‌ಸ್ಕಿಯ ಮೇಲೆ ಅಸಮಾಧಾನಪಟ್ಟು ಅವನನ್ನು ದ್ವೇಷಿಸ ತೊಡಗಿದ. ಸ್ಕೊಕ್ಲಡೊವ್‌ಸ್ಕಿ ಈ ದ್ವೇಷವನ್ನು ತೊಡಕಿಸಿಕೊಂಡುದಕ್ಕಾಗಿ, ಮುಂದೆ ಭಾರಿಯಾಗಿಯೇ ದಂಡ ತೆರಬೇಕಾಯಿತು.

ಇಲ್ಲಿಂದ ಮುಂದೆ ಸ್ಕೊಕ್ಲಡೊವ್‌ಸ್ಕಿಯ ಮನೆಯಲ್ಲಿ ತೊಂದರೆ, ದುಃಖಗಳು ಬೆಳೆಯತೊಡಗಿದುವು. ಖಾಯಿಲೆಯಾಗಿದ್ದ ಮೆಡೇಮ್ ಸ್ಕೊಕ್ಲಡೊವ್‌ಸ್ಕಿ ಚಿಕ್ಕ ಮಕ್ಕಳನ್ನೆಲ್ಲ ಮನೆಯಲ್ಲೇ ಬಿಟ್ಟು, ಹಿರಿಯ ಮಗಳಾದ ಜೊಸ್ಯೆಯೊಡನೆ ಹವ ಬದಲಾಯಿಸುವುದಕ್ಕೋಸ್ಕರ ನೈಸ್‌ಗೆ ಹೊರಟಳು. 'ಅಮ್ಮ ರೋಗ ವಾಸಿ ಮಾಡಿಕೊಂಡು ಸರಿಯಾಗಿ ಮನೆಗೆ ಬರುವಳು' ಎಂದು ಪುಟ್ಟ ಮೇನ್ಯಳನ್ನು ಎಲ್ಲರೂ ಸಮಾಧಾನ ಮಾಡಿದರು. ಆದರೆ ಮುಂದೆ ಒಂದು ವರ್ಷದ ಮೇಲೆ ತಾಯಿ ಹಿಂತಿರುಗಿ ಬಂದಾಗ ಮೇನ್ಯಳಿಗೆ ಕೃಶಳಾಗಿದ್ದ ತಾಯಿಯನ್ನು ಗುರುತಿಸುವುದಕ್ಕೇ ಸಾಧ್ಯವಿರಲಿಲ್ಲ.

—

ಅಧ್ಯಾಯ ಎರಡು

## ಕಷ್ಟ, ದುಃಖ



೧೮೭೩ನೆಯ ಇಸವಿಯ ರಜಾ ಕಾಲದಲ್ಲಿ ಹಳ್ಳಿಗೆ ಹೋಗಿದ್ದ ಸ್ಕ್ಲೊಡೊವ್‌ಸ್ಕಿ, ಮನೆಯವರೊಡನೆ ಹಿಂದಿರುಗಿ ಬಂದಾಗ ಐವನೊವ್ ಹೇಗೆ ದ್ವೇಷ ತೀರಿಸಿಕೊಂಡಿದ್ದನೆಂಬುದನ್ನು ತಿಳಿದುಕೊಂಡ. ಮೇಲಿನ ಅಧಿಕಾರಿಗಳಿಂದ ಅವನಿಗಾಗಿ ಮೋಜಿನ ಮೇಲೆ ಕಾದಿದ್ದ ಕಾಗದ ಎಲ್ಲವನ್ನೂ ಬಿಚ್ಚಿ ಹೇಳಿತು ಅವನ ಸಂಬಳ ಕಡಮೆಯಾಗಿದ್ದುದೂ ಅಲ್ಲದೆ, ಅವನಿರುವು ದಕ್ಕೆ ಕೊಟ್ಟಿದ್ದ ಮನೆಯೂ, ಅವನಿಗಿದ್ದ 'ಅಂಡರ್ ಇನಸ್ಪೆಕ್ಟರ್' ಎಂಬ ಹೆಸರೂ ಹೋಗಿದ್ದುವು. ತನ್ನ ಅಧಿಕಾರದ ದರ್ಪವನ್ನು ಅಲಕ್ಷ್ಯ ಮಾಡಿದ್ದ ಸ್ಕ್ಲೊಡೊವ್‌ಸ್ಕಿಗೆ, ಐವನೊವ್ ಕ್ರೂರವಾಗಿ ಪ್ರತೀಕಾರ ಮಾಡಿದ್ದ. ಹೀಗೆ ಬಡತನ ಒದಗಿದ ಮೇಲೆ ಸ್ಕ್ಲೊಡೊವ್‌ಸ್ಕಿ ಮನೆಯಿಂದ ಮನೆಗೆ ಬದಲಾಯಿಸುತ್ತ ಕೊನೆಗೆ ಒಂದು ಮೂಲೆಯಲ್ಲಿದ್ದ ಸಣ್ಣ ಮನೆಯೊಂದನ್ನು ಹಿಡಿದ. ಸಂಸಾರಕ್ಕೆ ಹಣ ಸಾಲದೆ ಮೊದಲು ಇಬ್ಬರು ಹುಡುಗರ ಊಟ ವಸತಿಗಳಿಗೆ ತನ್ನ ಮನೆಯಲ್ಲಿ ಏರ್ಪಾಡು ಮಾಡಿದ. ಇಬ್ಬರಿದ್ದುದ್ದು ಹತ್ತು ಜನ ಹುಡುಗರಾದರು. ಸ್ಕ್ಲೊಡೊವ್‌ಸ್ಕಿ ಇವರಿಗೆಲ್ಲ ಪಾಠವನ್ನೂ ಹೇಳಿ ಕೊಡುತ್ತಿದ್ದ. ಮನೆಯಲ್ಲಿನ ಶಾಂತವಾದ, ಮಧುರವಾದ ವಾತಾವರಣ ಮಾಯವಾಗಿ, ಗಲಭೆಗೆ ಪ್ರಾರಂಭವಾಯಿತು.

ಸ್ಕ್ಲೊಡೊವ್‌ಸ್ಕಿ ಈ ಮಾರ್ಗದಿಂದ ಹಣ ಸಂಪಾದನೆ ಮಾಡುವುದ ರಲ್ಲಿ ತೊಡಗಿದುದು, ಹೆಂಡತಿಯು ಖಾಯಿಲೆಯಾಗಿದ್ದಳೆಂಬ ಒಂದೇ ಕಾರಣ ದಿಂದಲ್ಲ. ತಾನು ಎಷ್ಟೋ ದಿನಗಳಿಂದ ಸಂಪಾದನೆ ಮಾಡಿದುದರಲ್ಲಿ ಕೂಡಿ ಇಟ್ಟಿದ್ದ ಮೂವತ್ತು ಸಾವಿರ ರೂಬಲ್‌ಗಳನ್ನು ಸ್ಕ್ಲೊಡೊವ್‌ಸ್ಕಿ ತನ್ನ ಬಂಧುವೊಬ್ಬನ ಬೋಧನೆಯಿಂದ ಒಟ್ಟಿಗೆ ಕಳೆದುಕೊಂಡು ಬಿಟ್ಟಿದ್ದ. ಬುದ್ಧಿ

ಯಿಲ್ಲದೆ ಮಾಡಿದ ಈ ಕೆಲಸ ಸ್ಕ್ಲೊಡೊವ್‌ಸ್ಕಿಯ ಹೃದಯವನ್ನು ಹಿಂಡಿ ಬಿಟ್ಟಿತು. ತನ್ನ ಮಕ್ಕಳಿಗೆ ತಾನು ಮೋಸ ಮಾಡಿದೆನೆಂದು ಅವನು ತಲ್ಲಣ ಪಡುತ್ತಿದ್ದ.

ಈ ನೋವು, ದುಃಖಗಳೆಲ್ಲ ಚಿಕ್ಕ ಹುಡುಗಿಯಾದ ಮೇನ್ಯಾಗೆ ಚೆನ್ನಾಗಿ ಅರ್ಥವಾಗುತ್ತಿರಲಿಲ್ಲ. ಇವುಗಳೆಲ್ಲಕ್ಕಿಂತ ಹೆಚ್ಚಾಗಿ ಅವಳ ಮನಸ್ಸಿಗೆ ತಟ್ಟಿ ಅವಳ ಜೀವವನ್ನು ಕುಗ್ಗಿಸಿದ್ದು, ಇದಕ್ಕೆ ಎರಡು ವರ್ಷಕ್ಕೆ ಮೊದಲೇ ಮನೆ ಯಲ್ಲಿ ಉಂಟಾದ ಸಾವು. ಮನೆಯಲ್ಲಿದ್ದ ಬಾಲಕರಲ್ಲಿ ಒಬ್ಬನಿಂದ ಜೋಸ್ಯೆ ಯಾಗೂ, ಬ್ರೊನ್ಯಾಗೂ, ಟೈಫಾಯಿಡ್ ಜ್ವರ ಅಂಟಿತು. ಆ ಕೆಲವು ವಾರ ಗಳು ಎಂತಹ ಭಯಂಕರವಾದುವುಗಳು! ರೋಗದಿಂದ ಕೃಶಳಾಗಿ ಹೋಗಿದ್ದ ತಾಯಿ ತನ್ನ ಕೆಮ್ಮಿನ ಶಬ್ದವನ್ನು ಹೊರಗೆ ಬರದಂತೆ ತಡೆಯಲು ಬಹಳ ಕಷ್ಟದಿಂದ ಪ್ರಯತ್ನ ಮಾಡಿಮಾಡಿ ಹಣ್ಣಾಗುತ್ತಿದ್ದಳು. ಇನ್ನೊಂದು ಕೋಣೆಯಲ್ಲಿ ಅಕ್ಕಂದಿರಿಬ್ಬರೂ ಜ್ವರದಿಂದ ಒಂದೇ ಸಮನಾಗಿ ನರಳುತ್ತ ಇದ್ದರು.

ಕೊನೆಗೆ ಒಂದು ದಿನ ತಂದೆ ತನ್ನ ಮೂರು ಕಿರಿಯ ಮಕ್ಕಳನ್ನೂ ಹಿರಿಯ ಅಕ್ಕನ ಹಾಸಿಗೆಯ ಬಳಿಗೆ ಅಂತ್ಯದರ್ಶನಕ್ಕಾಗಿ ಕರೆದುಕೊಂಡು ಹೋದ. ಮಕ್ಕಳೆಲ್ಲ ತಮ್ಮ ಪ್ರೀತಿಯ ಅಕ್ಕ ಜೋಸ್ಯೆಯು ಬಿಳಿಯ ಬಟ್ಟೆ ಧರಿಸಿ ನಸುನಗುತ್ತಿರುವಂತೆ ಮಲಗಿರುವುದನ್ನು ನೋಡಿದರು. ಅಕ್ಕನ ಮುಖ ಬಿಳಚಿಕೊಂಡು ಹೋಗಿತ್ತು. ಅದು ಆ ಮನೆಯಲ್ಲಿನ ಮೊದಲನೆಯ ಸಾವು. ದುಃಖದಿಂದ ಭಾರವಾದ ಹೃದಯದೊಡನೆ ಮೇನ್ಯ ಕಪ್ಪು ಬಟ್ಟೆ ಧರಿಸಿ ಅಕ್ಕನನ್ನು ತೆಗೆದುಕೊಂಡು ಹೋಗುತ್ತಿದ್ದ ಗುಂಪಿನೊಡನೆ ಹೊರ ಟಳು. ಬ್ರೊನ್ಯ ಜ್ವಾನ ಹೋದವಳ ಹಾಗೆ ದಿಂಬಿಗೆ ಮುಖ ಕೊಟ್ಟು ಬಿಕ್ಕಿ ಬಿಕ್ಕಿ ಅಳುತ್ತಿದ್ದಳು. ರೋಗದಿಂದ ಅರೆಜೀವವಾಗಿದ್ದು ನಿಲ್ಲಲು ಬಲವಿಲ್ಲದ ತಾಯಿ, ಮನೆಯಿಂದ ಸಾಗಿ ಹೋಗುತ್ತಿದ್ದ ತನ್ನ ಮಗುವನ್ನು ನೋಡಲು ಕಿಟಕಿಯಿಂದ ಕಿಟಕಿಗೆ ತೆವಳಿಕೊಂಡು ಹೋದಳು.

ಇಂತಹ ಕ್ರೂರವಾದ ಕಷ್ಟಗಳಿಂದ ಮೇನ್ಯಳ ಎಳೆಯ ಹೃದಯ ತತ್ತರಿಸುತ್ತಿತ್ತು. ತಾಯಿ ದಿನದಿನಕ್ಕೆ ಸಾವಿಗೆ ಸಮೀಪವಾಗುತ್ತಿದ್ದಳು. ಪ್ರಪಂಚದಲ್ಲೆಲ್ಲ ತನಗೆ ಅತ್ಯಂತ ಪ್ರಿಯವಾದ ಆ ಜೀವವೊಂದನ್ನುಳಿಸಲು,

ತನ್ನ ಜೀವವನ್ನಾದರೂ ಸಂತೋಷವಾಗಿ ಕೊಡುತ್ತೇನೆಂದು, ಮೇನ್ಯಳ ಮನಸ್ಸು ಒಂದೇ ಸಮನಾಗಿ ದೇವರಲ್ಲಿ ಬೇಡಿಕೊಳ್ಳುತ್ತಿತ್ತು. ಹಿರಿಯ ಅಕ್ಕನ ನೆನಪು ಮೂಡಿದಾಗಲೆಲ್ಲ ದುಃಖ ಒತ್ತರಿಸಿಕೊಂಡು ಒಂದು ಬಾಳು ಅಸಹನೀಯವಾಗುತ್ತಿತ್ತು. ಮೇನ್ಯಳಿಗೆ, ಈ ದುಃಖಗಳೆಲ್ಲ ಅಳಿಸಿ ಹೋಗಿ, ಶಾಂತಿ ಸಿಕ್ಕುತ್ತಿದ್ದುದು, ಶಾಲೆ ಮತ್ತು ಶಾಲೆಯ ಪಾಠಗಳಿಂದ. ಹತ್ತು ವರ್ಷದ ಮೇನ್ಯ ಈಗ ಶಾಲೆಗೆ ಹೋಗಿಬರುತ್ತಿದ್ದಳು. ಆ ಶಾಲೆಯ ನಿಬಂಧನೆಯಂತೆ ಯಾವಾಗಲೂ ನೀಲಿ ಸರ್ಜಿನ ಲಂಗವನ್ನೇ ಧರಿಸುತ್ತಿದ್ದಳು. ಶಾಲೆಯ ಉಪಾಧ್ಯಾಯಿನಿಯಾದ ಆಂಟೋನಿನ ಟುಪಲ್ ಸ್ಕ, ಗಣಿತ, ಚರಿತ್ರೆಗಳನ್ನು ಬೋಧಿಸುತ್ತಿದ್ದುದಲ್ಲದೆ ಶಾಲೆಯ ಮೇಲ್ವಿಚಾರಣೆಯನ್ನೂ ನೋಡಿಕೊಳ್ಳುತ್ತಿದ್ದಳು. ವಿನೋದ, ತಮಾಷೆಗಳನ್ನು ತನ್ನ ಒಳಿಗೇ ಸೇರಗೊಡದಿದ್ದ ಈ ಕುರೂಪಿ ಹೆಂಗಸು, ಮೊಂಡ ಹುಡುಗಿ ಮೇನ್ಯಳನ್ನು ಎಷ್ಟೋ ಸಲ ಶಿಕ್ಷಿಸುತ್ತಿದ್ದಳು. ಆದರೆ ಅವಳನ್ನು ಕಂಡು ಹೆಮ್ಮೆಪಡದಿರುವುದು ಆ ಒರಟು ಉಪಾಧ್ಯಾಯಿನಿಗೆ ಸಾಧ್ಯವೇ ಇರಲಿಲ್ಲ. ಜೊತೆಯವರಿಗಿಂತ ಎರಡು ವರ್ಷ ಚಿಕ್ಕವಳಾದ ಈ ಚುರುಕು ಹುಡುಗಿಗೆ ಯಾವ ಪಾಠವನ್ನು ಕಲಿಯುವುದಕ್ಕೂ ಕಷ್ಟವೇ ಇರಲಿಲ್ಲ. ಪುಟ್ಟ ಮೇನ್ಯ, ಲೆಕ್ಕ, ಚರಿತ್ರೆ, ಸಾಹಿತ್ಯ, ಜರ್ಮನ್, ಫ್ರೆಂಚ್, ಈ ಪ್ರತಿಯೊಂದರಲ್ಲೂ, ಪ್ರತಿ ಸಲವೂ ಮೊದಲನೆಯವಳು !

ಆ ದಿನ ಆಂಟೋನಿನ ಟುಪಲ್ ಸ್ಕ, ಪೋಲಿಷ್ ಭಾಷೆಯಲ್ಲಿ ಪೋಲೆಂಡಿನ ಚರಿತ್ರೆಯನ್ನು ಹುಡುಗರಿಗೆ ಬೋಧಿಸುವ ಸಾಹಸ ಮಾಡಿದ್ದಳು. ಈ ಚರಿತ್ರೆಯ ತರಗತಿಗಳು, ಯಾವಾಗಲೂ ಉತ್ಸಾಹದಿಂದ ಕೂಡಿರುತ್ತಿದ್ದುವು. ಕೋಣೆಯೆಲ್ಲ ನಿಶ್ಶಬ್ದವಾಗಿ ಗಭೀರವಾಗಿತ್ತು. ಶ್ರದ್ಧೆಯಿಂದ ತಮ್ಮ ದೇಶದ ಚರಿತ್ರೆಯನ್ನು ಕೇಳುತ್ತ ಕುಳಿತಿದ್ದ, ಇಪ್ಪತ್ತೈದು ಜೊತೆ ಎಳೆಯ ಕಣ್ಣುಗಳು ಫಳಫಳನೆ ಹೊಳೆಯುತ್ತಿದ್ದುವು. ಎಲ್ಲರ ಮುಖದಲ್ಲಿಯೂ ಪಿತೂರಿ ಮಾಡುವವರಂತೆ, ಎಚ್ಚರಿಕೆ, ಭೀತಿ, ಶಂಕೆಗಳು ನಿಚ್ಚಳವಾಗಿ ಮೂಡಿದ್ದುವು. ಮೇನ್ಯ ಎದ್ದು ನಿಂತು ಉಪಾಧ್ಯಾಯಿನಿಯ ಪ್ರಶ್ನೆಗೆ ಉತ್ತರ ಹೇಳುತ್ತಿದ್ದಳು. ಅನೇಕ ವರ್ಷದ ಹಿಂದೆ ಅಳಿದು ಹೋಗಿದ್ದ ಪೋಲೆಂಡಿನ ತಮ್ಮ ದೊರೆಯ ವಿಷಯವಾಗಿ, ಪ್ರೀತಿಯಿಂದ ಕೂಡಿದ ಧೀರ

ವಾದ ಕಂಠದಿಂದ ಮಾತನಾಡುತ್ತಿದ್ದಳು. ಇದ್ದಕ್ಕಿದ್ದ ಹಾಗೆ ಗಂಟೆಯು ಶಬ್ದ ಕೇಳಿಸಿತು ಎರಡು ದೀರ್ಘವಾದ ಶಬ್ದ, ಆಮೇಲೆ ಎರಡು ಮೊಟಕಾದ ಶಬ್ದ ಅದು ಎಚ್ಚರಿಕೆಯ ಧ್ವನಿ. ಮಾತನಾಡುತ್ತಿದ್ದ ಕಂಠ ತಾನೇ ತಾನಾಗಿ ನಿಂತು ಹೋಯಿತು. ಎಲ್ಲರೂ ಬೆಚ್ಚಿಬಿದ್ದರೂ, ಒಬ್ಬರಾದರೂ ಒಂದು ಸಣ್ಣ ಶಬ್ದವನ್ನೂ ಮಾಡಲಿಲ್ಲ. ಉಪಾಧ್ಯಾಯಿನಿ, ಹರಡಿದ್ದ ಪುಸ್ತಕಗಳನ್ನೆಲ್ಲ ಸರಸರನೆ ಜೋಡಿಸಿದಳು. ಚಟುವಟಿಕೆಯಾಗಿದ್ದ ಎಳೆಯ ಕೈಗಳು ಮೇಜಿನ ಮೇಲೆ ಬಿದ್ದಿದ್ದ ಪೋಲಿಷ್ ಭಾಷೆಯ ಪುಸ್ತಕಗಳನ್ನೆಲ್ಲ ರಾಶಿ ಮಾಡಿದುವು. ಇವುಗಳನ್ನೆಲ್ಲ ಮಡಿಲಲ್ಲಿ ಆತುಕೊಂಡು ನಾಲ್ಕು ಜನ ಹುಡುಗಿಯರು ಸಣ್ಣ ಬಾಗಿಲಿನಿಂದ ಹಾದು ಹೋಗಿ ಹಾರುವ ಹೃದಯದೊಡನೆ ಹಿಂತಿರುಗಿ ಬಂದರು. ಹೊರಬಾಗಿಲು ಸಿಧಾನವಾಗಿ ತೆಗೆಯಿತು. ವಾರ್ಸಾ ಪಟ್ಟಣದ ಖಾಸಗೀ ಶಾಲೆಗಳ ಇನ್‌ಸ್ಪೆಕ್ಟರ್ ಆಗಿದ್ದ ಹಾರ್ನ್‌ಬರ್ಗ್ ಒಳಕ್ಕೆ ಬಂದ ಮಾತನ್ನೇನೂ ಆಡದೆ ಹುಡುಗಿಯರ ಕಡೆಗೆ ದೃಷ್ಟಿ ಹಾಕಿದ. ಅವನ ಹಿಂದೆಯೇ ಬಂದಿದ್ದ ಶಾಲೆಯ ಮುಖ್ಯಸ್ಥೆಯಾದ ಸಿಕೋರ್‌ಸ್ಕ ಚಿಂತೆ ಆತಂಕಗಳಿಂದ ಮಕ್ಕಳ ಕಡೆಗೆ ನೋಡಿದಳು. ಈ ದಿನ ಎಚ್ಚರಿಕೆಯ ಧ್ವನಿಯಾದ ಮೇಲೆ ಹೆಚ್ಚು ಅವಕಾಶವಿರಲಿಲ್ಲ. ಹಾರ್ನ್‌ಬರ್ಗ್ ಅವಳನ್ನು ಹಿಂದೆ ಹಾಕಿ ದಡಬಡನೆ ಕೋಣೆಯೊಳಕ್ಕೆ ನುಗ್ಗಿಬಿಟ್ಟಿದ್ದ. ಆದರೆ ಎಲ್ಲ ಕ್ರಮಬದ್ಧವಾಗಿತ್ತು. ಹುಡುಗಿಯರೆಲ್ಲ ಹೊಲಿಗೆಯನ್ನು ತೆಗೆದಿಟ್ಟುಕೊಂಡು ಶ್ರದ್ಧೆಯಿಂದ ಹೊಲಿಯುತ್ತಿದ್ದರು. ಖಾಲಿಯಾಗಿದ್ದ ಡೆಸ್ಕುಗಳ ಮೇಲೆ ಕತ್ತರಿಗಳೂ ದಾರದ ಉಂಡೆಗಳೂ ಇದ್ದುವು.

ಶಾಲೆಯ ಮುಖ್ಯಸ್ಥೆ ಶಾಂತವಾಗಿ 'ಈ ಮಕ್ಕಳಿಗೆ ಪ್ರತಿವಾರವೂ ಎರಡು ಗಂಟೆಗಳ ಕಾಲ ಹೊಲಿಗೆ ಇರುತ್ತದೆ' ಎಂದು ಹೇಳಿದಳು. ಹಾರ್ನ್‌ಬರ್ಗ್ ಉಪಾಧ್ಯಾಯಿನಿಯ ಕಡೆಗೆ ನಡೆದುಹೋದನು. ಮೇಜಿನ ಮೇಲೆ ರಷ್ಯನ್ ಪುಸ್ತಕ ಸರಿಯಾಗಿತ್ತು.

'ಏನೋ ಗಟ್ಟಿಯಾಗಿ ಓದುತ್ತಿದ್ದಂತಿತ್ತು. ಅದು ಏನಿರಬಹುದು ?'

ಉಪಾಧ್ಯಾಯಿನಿ ಕೊಂಚವೂ ಉದ್ರೇಕಗೊಳ್ಳದೆ ಶಾಂತವಾಗಿ 'ಕತೆಯ ಪುಸ್ತಕ. ಈ ದಿನ ತಾನೇ ಅದನ್ನು ಓದಲು ಪ್ರಾರಂಭ ಮಾಡಿದೆ' ಎಂದು ಉತ್ತರ ಕೊಟ್ಟಳು. ಭಯದಿಂದ ಪೇಲವವಾಗಿ ಹೋಗಿದ್ದ ಅವಳ

ಮುಖದಲ್ಲಿ ತಿರುಗಿ ಕೆಂಪು ಮೂಡುತ್ತಿತ್ತು. ಏನೂ ಕುತೂಹಲವಿಲ್ಲದವನಂತೆ ನಟಿಸುತ್ತ ಹಾರ್ನ್‌ಬರ್ಗ್ ಸಮೀಪದ ಡೆಸ್ಕಿನ ಮುಚ್ಚಳ ತೆಗೆದು ನೋಡಿದ. ಏನೊಂದೂ ಅನುಮಾನವಿರಲಿಲ್ಲ. ಒಂದು ಪುಸ್ತಕವಾಗಲಿ, ಒಂದು ಚೂರು ಕಾಗದವಾಗಲಿ ಡೆಸ್ಕಿನೊಳಗೆ ಇರಲಿಲ್ಲ ಹುಡುಗಿಯರು ನಾಜೂಕಾಗಿ ಹೊಲಿಗೆಯನ್ನು ಮುಗಿಸಿದರು. ಸೀಲಿಯ ಒಟ್ಟಿಯಲ್ಲಿ ಒಂದೇ ಸಮನಾಗಿ ಕಾಣುತ್ತಿದ್ದ ಇಪ್ಪತ್ತೈದು ಮಕ್ಕಳು ಗಂಭೀರವಾಗಿ ಎತ್ತಿದ್ದ ಎಳೆಯ ಮುಖ ಗಳಲ್ಲಿ, ಚಿಂತೆ, ದ್ವೇಷ, ಭಯಗಳು ಒಟ್ಟಿಗೆ ಹೊರಹೊಮ್ಮುತ್ತಿದ್ದವು.

ಹಾರ್ನ್‌ಬರ್ಗ್ ಕುರ್ಚಿಯ ಮೇಲೆ ದೊಪ್ಪನೆ ಕುಳಿತು 'ಯಾವುದಾ ದರೂ ಹುಡುಗಿಯನ್ನು ಕರೆಯಿರಿ' ಎಂದು ಆಜ್ಞಾಪಿಸಿದ. ಮೂರನೆಯ ಸಾಲಿನಲ್ಲಿ ಕುಳಿತಿದ್ದ ಮೇನ್ಯ ತಟಕ್ಕನೆ ಬೆಚ್ಚಿಬಿದ್ದು, ಕಿಟಕಿಯ ಕಡೆ ಬಿಡರಿದ ಮುಖವನ್ನು ತಿರುಗಿಸಿಕೊಂಡು ತನ್ನನ್ನು ಪಾತ್ರ ಒಬ್ಬಿಸದಿರಲೆಂದು ದೇವ ರನ್ನು ಬೇಡಿಕೊಂಡಳು. ಆದರೆ ಇನ್‌ಸ್ಪೆಕ್ಟರ್ ಮುಂದೆ ನಿಂತುಕೊಳ್ಳತಕ್ಕ ವಳು ಮೇನ್ಯಳೇ ಎಂದು ಎಲ್ಲರಿಗೂ ಗೊತ್ತಿತ್ತು. ಪುಟ್ಟ ಮೇನ್ಯಳಷ್ಟು ಚೆನ್ನಾಗಿ ರಷ್ಯನ್ ಭಾಷೆಯಲ್ಲಿ ಯಾರು ಮಾತನಾಡಬಲ್ಲರು? ತನ್ನ ಹೆಸರನ್ನು ಕೂಗುತ್ತಲೂ ಮೇನ್ಯ ಎದ್ದುನಿಂತಳು. ಹಾರ್ನ್‌ಬರ್ಗ್ ಅಲಕ್ಷ್ಯವಾಗಿ ಬೇಸರದಿಂದ ಮಾತನಾಡತೊಡಗಿದ.

'ಪ್ರಾರ್ಥನೆ ಹೇಳು.'

ಪೋಲರ ಹೃದಯದಲ್ಲಿ ಅವಮಾನದ ಕಿಚ್ಚೆಬ್ಬಿಸುತ್ತಿದ್ದುವುಗಳಲ್ಲಿ ಇದೂ ಒಂದು. ಪೋಲರು ತಮ್ಮ ಪ್ರಾರ್ಥನೆಯನ್ನು ಪರಭಾಷೆಯಾದ ರಷ್ಯನ್ ಭಾಷೆಯಲ್ಲಿ ಹೇಳಬೇಕಾಗಿತ್ತು. ಮೇನ್ಯ ಒಣ ಧ್ವನಿಯಲ್ಲಿ ಪ್ರಾರ್ಥನೆ ಹೇಳಿ ಮುಗಿಸಿದಳು.

'ಎರಡನೆಯ ಕ್ಯಾಥರೀನ್ ಆದಮೇಲೆ ರಷ್ಯಾ ದೇಶವನ್ನು ಆಳಿದ ದೊರೆಗಳ ಹೆಸರನ್ನೆಲ್ಲ ಹೇಳು.'

'ಎರಡನೆಯ ಕ್ಯಾಥರೀನ್, ಮೊದಲನೆಯ ಪಾಲ್, ಮೊದಲನೆಯ ಅಲೆಕ್ಸಾಂಡರ್, ಮೊದಲನೆಯ ನಿಕೋಲಾಸ್, ಎರಡನೆಯ ಅಲೆಕ್ಸಾಂಡರ್.'

ಮುಂದಿನ ಪ್ರಶ್ನೆಗೆ ಮೇನ್ಯ ರಾಜಮನೆತನದ ಪ್ರತಿಯೊಬ್ಬರ ಹೆಸರು ಗಳನ್ನೂ ಅವರವರ ಬಿರುದುಗಳ ಸಹಿತ ಸರಿಯಾಗಿ ಒಪ್ಪಿಸಿದಳು.

ಹಾರ್ನ್‌ಬರ್ಗ್‌ನ ಗಂಭೀರವಾದ ಮುಖದಲ್ಲಿ ಕಿರುನಗೆ ಮೂಡಿತು. ಉತ್ತರಗಳೆಲ್ಲ ತೃಪ್ತಿಕರವಾಗಿದ್ದುವು. ಎಂತಹ ಜ್ಞಾಪಕಶಕ್ತಿ! ಎಷ್ಟು ಸ್ಫುಟವಾದ ಉಚ್ಚಾರಣೆ! ರಷ್ಯಾದಲ್ಲಿ ಹುಟ್ಟಿದವರೂ, ಇದಕ್ಕಿಂತ ಚೆನ್ನಾಗಿ ಮಾತನಾಡಲು ಸಾಧ್ಯವಿರಲಿಲ್ಲ. ಮಗ ವಿನ ಮುಖದ ಮೇಲೆ ಎದ್ದು ಕಾಣುತ್ತಿದ್ದ, ನೋವು, ಕೋಪಗಳನ್ನು ಮಾತ್ರ ಹಾರ್ನ್‌ಬರ್ಗ್ ನೋಡಲಿಲ್ಲ.

ಪುನಃ ತನ್ನ ಸಂತೋಷಕ್ಕೋಸ್ಕರ ಹಾರ್ನ್‌ಬರ್ಗ್ ಇನ್ನೊಂದು ಪ್ರಶ್ನೆಯನ್ನು ಕೇಳಿದ.

'ಯಾರು ನಮ್ಮನ್ನು ಆಳುವವರು?'

ಒತ್ತಿ ಬರುತ್ತಿದ್ದ ಅಪಮಾನ ಕ್ರೋಧಗಳನ್ನು ನುಂಗಲು ಹೆಂಗಸರಿಬ್ಬರೂ ತಲೆ ಬಗ್ಗಿಸಿ ನೆಲದ ಕಡೆಗೆ ನೋಡತೊಡಗಿದರು. ಮೇನ್ಯ ಮುಖವೆಲ್ಲ ಬಿಳಿಚಿಕೊಂಡು ಉತ್ತರ ಕೊಡದೆ ನಿಂತಿದ್ದಳು. ಉತ್ತರ ಬರದಿದ್ದುದನ್ನು ಕಂಡು ಹಾರ್ನ್‌ಬರ್ಗ್ ಗಟ್ಟಿಯಾದ ಧ್ವನಿಯಲ್ಲಿ ಪುನಃ ಪ್ರಶ್ನೆ ಹಾಕಿದ. ಹುಡುಗಿ ಗಾಬರಿ ಬಿದ್ದು ಉತ್ತರ ಕೊಟ್ಟಳು.

'ರಷ್ಯಾದ ದೊರೆಯಾದ ಎರಡನೆಯ ಅಲೆಕ್ಸಾಂಡರ್.'

ಪರೀಕ್ಷೆ ಮುಗಿಯಿತು. ಕೋಣೆಯಿಂದ ಹೊರಕ್ಕೆ ನಡೆದ ಹಾರ್ನ್‌ಬರ್ಗ್‌ನ್ನು ಸಿಕೋರ್‌ಸ್ಕ ಹಿಂಬಾಲಿಸಿದ ಮೇಲೆ, ಉಪಾಧ್ಯಾಯಿನಿ ಮೆಲ್ಲಗೆ ತಲೆಯೆತ್ತಿ 'ಬಾ ಇಲ್ಲಿ, ನನ್ನ ಪುಟ್ಟ ಮೇನ್ಯ' ಎಂದು ಕರೆದಳು. ಮಾತನ್ನೇನೂ ಆಡದೆ, ಹತ್ತಿರ ಬಂದ ಮೇನ್ಯಳನ್ನು ಆ ಒರಟು ಕುರೂಪಿ ಹೆಂಗಸು ಆದರದಿಂದ ಹಿಡಿದು ಹಣೆಯ ಮೇಲೆ ಮುದ್ದಿಟ್ಟಳು. ಎಷ್ಟೋ ಹೊತ್ತಿನಿಂದ ಒತ್ತರಿಸಿ ಬರುತ್ತಿದ್ದ ಅಳುವನ್ನು ತಡೆಯಲಾರದೆ, ಮೇನ್ಯ, ಬಿಕ್ಕಿ ಬಿಕ್ಕಿ ಅಳಲು ಪ್ರಾರಂಭಿಸಿದಳು.

ಇಂತಹ ಭಯವೂ ಆತಂಕವೂ ಮೇನ್ಯಳ ಎಳೆಯ ಮನಸ್ಸನ್ನು ಕುಗ್ಗಿಸಿ ಬಿಡುತ್ತಿದ್ದವು ತಿಳಿವು ಮೂಡಿದಾಗಿನಿಂದ, ಮನೆಯಲ್ಲಿ ಚಿಂತೆ ದಿನದಿನಕ್ಕೆ ಬೆಳೆಯತೊಡಗಿತ್ತು. ಮಕ್ಕಳ ಹುರುಪು, ಹುಮ್ಮಸ್ಸು ಈ ಹತ್ತು ವರ್ಷಗಳಲ್ಲಿ ಅವಳ ಪಾಲಿಗೆ ಯಾವಾಗಲೂ ಇರಲಿಲ್ಲ. ಹೊರಗಿನ ಹುಡುಗರ ಗಲಭೆ ಮನೆಯಲ್ಲ ವಿಪರೀತವಾಗಿತ್ತು. ಊಟದ ಮನೆಯಲ್ಲಿ ಮಲಗುತ್ತಿದ್ದ ಮೇನ್ಯ ಈ ಹುಡುಗರಿಗೆ ಊಟಕ್ಕೆ ಜಾಗ ಮಾಡಿಕೊಡಲು, ನಸುಕಿನಲ್ಲಿ

ಅರೆನಿದ್ರೆಯಲ್ಲಿ ಮೈ ಕೊಡವಿಕೊಂಡು ಹಾಸಿಗೆಯಿಂದ ಏಳಬೇಕಾಗಿತ್ತು. ದುಃಖ, ಚಿಂತೆಗಳು ತಂದೆಯನ್ನು ದಿನದಿನಕ್ಕೆ ಹಣ್ಣು ಮಾಡುತ್ತಿದ್ದವು. ಮನೆಯಲ್ಲಿ ಏನೋ ಅಸ್ಪಷ್ಟವಾದ ಭಯ ಆತಂಕಗಳು ಆವರಿಸಿಕೊಂಡಿದ್ದುವು. ಯಾವ ಒಂದು ಜೀವಕ್ಕಾಗಿ, ಮಕ್ಕಳು ಹೃದಯದಲ್ಲಿ ಪ್ರೀತಿಯನ್ನು ತುಂಬಿ ಕೊಂಡು ಪ್ರಾಣವನ್ನೇ ಹೊಣೆಮಾಡಿ, ಹಾತೊರೆಯುತ್ತಿದ್ದುವೋ, ಆ ತಾಯಿಯ ಜೀವವನ್ನು, ರೋಗ, ನಿಧಾನವಾಗಿ, ಸ್ಪಷ್ಟವಾಗಿ ಸಾವಿನ ಕಡೆಗೆ ಜಗ್ಗಿಕೊಂಡು ಹೋಗುತ್ತಿತ್ತು. ತನ್ನ ಗಾಢವಾದ ಪ್ರೀತಿಯಾಗಲಿ, ತನ್ನ ಮನಃಪೂರ್ವಕವಾದ ಪ್ರಾರ್ಥನೆಯಾಗಲಿ, ತನಗೆ ಸರ್ವಸ್ವವಾಗಿದ್ದ ತಾಯಿಯನ್ನು ಉಳಿಸಿಕೊಡಲಾರವೆಂದು ಮೇನ್ಯಾಗೆ ತಿಳಿದುಹೋಗಿತ್ತು. ಅತ್ಯಂತ ಸುಂದರಳಾಗಿದ್ದ ತನ್ನ ತಾಯಿ ಈಗ ಪ್ರೇತದ ಹಾಗಾಗಿದ್ದಳು. ಈ ದುಃಖಗಳೆಲ್ಲ ಹತ್ತು ವರ್ಷದ ಮೇನ್ಯಳ ಹೃದಯವನ್ನು ಚೂರು ಚೂರು ಮಾಡುತ್ತಿದ್ದುವು.

ಆದರೆ ಮೇನ್ಯ ಪಾಠ ಓದುವುದಕ್ಕೆ ಕುಳಿತಳೆಂದರೆ, ಈ ಚಿಂತೆಗಳೆಲ್ಲ ಕರಗಿ ಹೋಗಿ ಅವುಗಳ ಇರವೇ, ಅವಳಿಗೆ ಮರೆತು ಹೋಗುತ್ತಿತ್ತು. ಐದು ಗಂಟೆಗೆ, ಗಂಟೆ ಹೊಡೆಯಿತೆಂದರೆ ಅದು ಪಾಠದ ಗಂಟೆ. ಮನೆಯಲ್ಲಿ ಇರುತ್ತಿದ್ದ ಹುಡುಗರು, ತಮ್ಮ ತಮ್ಮ ಕೋಣೆಗಳಲ್ಲಿ ಇಬ್ಬಿಬ್ಬರಾಗಿ, ಮೂವರು ಮೂವರಾಗಿ ಸೇರಿ ಓದಲು ತೊಡಗುತ್ತಿದ್ದರು. ಮನೆಯ ಮಕ್ಕಳೆಲ್ಲ ಊಟದ ಮನೆಯಲ್ಲಿ ಸೇರಿ ಬಿಡುತ್ತಿದ್ದರು. ಆ ಹೊತ್ತಿನಲ್ಲಿ ಮನೆಯಲ್ಲೆಲ್ಲ ಗಲಭೆಯೇ ಗಲಭೆ! ಪ್ರತಿಯೊಬ್ಬರೂ, ತಮ್ಮ ಲ್ಯಾಟಿನ್ ಪದ್ಯಗಳನ್ನಾಗಲಿ, ಚರಿತ್ರೆಯ ಇಸವಿಗಳನ್ನಾಗಲಿ, ಲೆಕ್ಕಗಳನ್ನಾಗಲಿ ಗಟ್ಟಿಯಾಗಿಯೇ ಹೇಳಿಕೊಳ್ಳಬೇಕು. ಕೆಲವರಿಗೆ ಪಾಠಗಳು ಪೋಲಿಷ್ ಭಾಷೆಯಲ್ಲಿ ವಿವರಿಸಿದರೆ, ಚೆನ್ನಾಗಿ ತಿಳಿಯುತ್ತಿತ್ತು, ರಷ್ಯನ್‌ನಲ್ಲಿ ಹೇಳಿದರೆ ತಿಳಿಯುತ್ತಲೇ ಇರಲಿಲ್ಲ! ಆಗ ಪ್ರೊಫೆಸರ್, ಅವರ ಸಹಾಯಕ್ಕೆ ಹೋಗಬೇಕು. ಮನೆಯ ಪ್ರತಿಯೊಂದು ಭಾಗದಿಂದಲೂ ಗೊಣಗಾಟ, ಕಿರಚಾಟಗಳು ಒಟ್ಟಿಗೆ ಪ್ರಾರಂಭವಾಗಿ ಬಿಡುತ್ತಿದ್ದುವು. ಮೇನ್ಯಳಿಗೆ ಈ ತರಹದ ಕಷ್ಟಗಳೇನೂ ಇರಲಿಲ್ಲ. ಕೇವಲ ಎರಡು ಸಲ ಓದಿದ ಪದ್ಯಗಳನ್ನು ಅವಳು ಬಾಯಲ್ಲಿ ಹೇಳಿಬಿಡುತ್ತಿದ್ದಳು. ಇದನ್ನು ನೋಡಿದ ಅವಳ ಸ್ನೇಹಿತರೆಲ್ಲರೂ ಮೇನ್ಯ ಗುಟ್ಟಾಗಿ ಪದ್ಯ ಗಟ್ಟಿಮಾಡುವ

ಳಿಂದೇ ಸಾಧಿಸಿ ಬಿಡುತ್ತಿದ್ದರು. ಇತರರಿಗೆ ಉಪಕಾರ ಮಾಡುವುದಕ್ಕಾಗಲಿ, ಅಥವ ತನಗೆ ಏನೂ ಮಾಡುವುದಕ್ಕೆ ತೋರದೆ ಇದ್ದಾಗಲಾಗಲಿ, ಮೇನ್ಯ ತನ್ನ ಜೊತೆಯವರಿಗೆ ಲೆಕ್ಕ ಹೇಳಿಕೊಡುತ್ತಿದ್ದಳು.

ಎಂದಿನಂತೆ ಆ ದಿನವೂ ಮೇನ್ಯ ತನ್ನ ಮೊಳಕೈಗಳನ್ನು ಮೇಜಿನ ಮೇಲೆ ಊರಿ, ಕೈಗಳನ್ನು ಹಣೆಯ ಮೇಲಿಟ್ಟು, ಹೆಬ್ಬೆರಳುಗಳಿಂದ ಕಿವಿಯನ್ನು ಭದ್ರವಾಗಿ ಮುಚ್ಚಿ ಓದುವುದಕ್ಕೆ ಕುಳಿತಿದ್ದಳು. ಕಿವಿ ಮುಚ್ಚಿಕೊಳ್ಳುತ್ತಿದ್ದುದು, ಪಕ್ಕದಲ್ಲಿ ಕುಳಿತಿರುತ್ತಿದ್ದ ಹೆಲಾ ದೆಸೆಯಿಂದ. ತನ್ನ ಧ್ವನಿಯನ್ನು ಆದಷ್ಟು ಎತ್ತರಿಸಿ ಕಿರಚಿ ಗಲಭೆಯೆಬ್ಬಿಸದ ಹೊರತು, ಹೆಲಾಗೆ ಪಾಠ ಹಿಡಿಯುತ್ತಲೇ ಇರಲಿಲ್ಲ. ಆದರೆ ಮೇನ್ಯ ಕಿವಿ ಮುಚ್ಚಿಕೊಳ್ಳುತ್ತ ಇದ್ದುದು ನೆಪಮಾತ್ರಕ್ಕೆ! ಓದಲು ತೊಡಗಿದ ಒಂದು ನಿಮಿಷದೊಳಗೆ ಅವಳಿಗೆ, ಸುತ್ತಲೂ ನಡೆಯುತ್ತಿದ್ದ ವಿಷಯಗಳು ಏನೊಂದೂ ತಿಳಿಯುತ್ತಿರಲಿಲ್ಲ. ಪಾಠ ಓದುತ್ತ ಓದುತ್ತ ಮೇನ್ಯ ತನ್ನನ್ನು ತಾನೇ ಮರೆತುಬಿಡುತ್ತಿದ್ದಳು. ಚಿಕ್ಕ ಹುಡುಗಿಯಲ್ಲಿದ್ದ ಈ ವಿಲಕ್ಷಣವಾದ ಹುಚ್ಚು, ಅವಳ ಜೊತೆಯವರಿಗೆ ವಿನೋದಕ್ಕೆ ಕಾರಣವಾಗುತ್ತಿತ್ತು. ಬ್ರೊನ್ಯ, ಹೆಲಾ ಇತರರನ್ನೂ ತಮ್ಮ ಜೊತೆಗೆ ಸೇರಿಸಿಕೊಂಡು, ಓದುತ್ತ ಕುಳಿತಿದ್ದ ತಮ್ಮ ಚಿಕ್ಕ ತಂಗಿಯ ಮುಂದೆ, ಕುಣಿದು, ಕುಪ್ಪಳಿಸಿ, ಗಲಾಟೆ ಮಾಡುತ್ತಿದ್ದರು. ಆದರೆ ಪ್ರತಿ ಸಲವೂ ಅವರ ಪ್ರಯತ್ನ ವ್ಯರ್ಥವಾಗುತ್ತಿತ್ತು. ಪುಟ್ಟ ಮೇನ್ಯ, ಒಂದು ಕ್ಷಣವೂ, ಪುಸ್ತಕದಿಂದ ಕಣ್ಣೆತ್ತುತ್ತಿರಲಿಲ್ಲ.

ಆ ದಿನ, ಬ್ರೊನ್ಯ, ಹೆಲಾ, ಮೇನ್ಯಳನ್ನು ಹೇಗಾದರೂ ಮಾಡಿ ಎಚ್ಚರಿಸಲೇಬೇಕೆಂದು, ಇನ್ನೊಂದು ಪ್ರಯತ್ನ ಮಾಡಿದರು. ತಮ್ಮೊಡನೆ, ಆ ದಿನ ತಮ್ಮ ಚಿಕ್ಕಮ್ಮನ ಮಗಳೂ ಸೇರಿದ್ದರಿಂದ ಅವರಿಗೆ ಎಂದೂ ಇಲ್ಲದ ಹುಮ್ಮಸ್ಸು! ಅಲುಗಾಡದೆ ಪುಸ್ತಕ ಹಿಡಿದು ಕುಳಿತಿದ್ದ ಮೇನ್ಯಳ ಸುತ್ತಲೂ, ಕುರ್ಚಿಗಳನ್ನೆಲ್ಲ ಕಲೆಹಾಕಿ ಒಂದು ಗೋಪುರ ಕಟ್ಟಿದರು. ಬಹಳ ಎಚ್ಚರಿಕೆಯಿಂದ ಅವಳ ಸುತ್ತಲೂ ಕುರ್ಚಿಗಳನ್ನು ಪೇರಿಸಿ ಮುಂದಾಗುವ ವಿನೋದವನ್ನು ಕಾಯುತ್ತ ಕುಳಿತರು. ಪುಟ್ಟ ಮೇನ್ಯಾಗೆ ತಾನು ಕುರ್ಚಿಗಳ ಮಧ್ಯೆ ಕುಳಿತದ್ದೂ, ತಲೆಯ ಮೇಲೆ ಒಂದು ಕುರ್ಚಿ ನಿಂತಿರುವುದೂ ಗೊತ್ತಾಗಲೇ ಇಲ್ಲ. ಅರ್ಧ ಗಂಟೆಯ ಹೊತ್ತು ಹೀಗೆ, ಗೋಪುರದ ಒಳಗೆ ಕುಳಿತಿದ್ದು,

ಪುಸ್ತಕ ಮುಚ್ಚಿ ಧಡಕ್ಕನೆ ತಲೆಯೆತ್ತುತ್ತಲೂ, ಹಗುರವಾಗಿ ನಿಂತಿದ್ದ ಗೋಪುರ ಧಡಧಡನೆ ಶಬ್ದ ಮಾಡುತ್ತ ಕಳಚಿಕೊಂಡಿತು. ಕುರ್ಚಿಗಳು ನೆಲದ ಮೇಲೆ ಉರುಳುರುಳಿ ಬಿದ್ದವು. ಹೆಲಾ ಸಂತೋಷದಿಂದ ಕೇಕೆ ಹಾಕಿ ನಕ್ಕಳು. ಬ್ರೊನ್ಸ್ಯ ಮತ್ತು ಹೆನ್ರಿಯಟ್, ಮುಂದೆ ಒದಗಬಹುದಾದ ಯುದ್ಧಕ್ಕೆ ಸಿದ್ಧರಾಗಿ ತಂಗಿಯ ಕಡೆಗೆ ಎಚ್ಚರಿಕೆಯಿಂದ ನೋಡುತ್ತಿದ್ದರು.

ಮೇನ್ಯಳಿಗೆ ಏನು ಹೇಳಬೇಕೋ ತಿಳಿಯಲಿಲ್ಲ. ತನ್ನನ್ನು ಭಯಪಡಿಸಿದ್ದ ಈ ವಿನೋದದಲ್ಲಿ ತಾನೂ ಸೇರಿ ನಗುವುದೂ ಅವಳಿಗೆ ಸರಿಹೋಗಲಿಲ್ಲ. ಪುಸ್ತಕವನ್ನು ಆಗ ತಾನೇ ಮುಚ್ಚಿದ್ದವಳು, ನಿದ್ರೆಯಿಂದ ಎಚ್ಚತ್ತವಳಂತೆ, ಕುರ್ಚಿಯು ತಗಲಿ, ಹೆಚ್ಚು ನೋವಾಗಿದ್ದ ತನ್ನ ಭುಜವನ್ನು ಉಜ್ಜಿಕೊಳ್ಳುತ್ತ, ಪಕ್ಕದ ಕೋಣೆಯ ಕಡೆಗೆ ನಡೆದಳು.

ಪುಸ್ತಕಗಳಲ್ಲಿ ಮುಳುಗಿಹೋಗಿ, ಮೈಮರೆಯುತ್ತಿದ್ದ ಈ ಕೆಲವು ಕ್ಷಣಗಳು ಮೇನ್ಯಳಿಗೆ ಶಾಂತಿಯನ್ನು ತುಂಬಿಕೊಡುತ್ತಿದ್ದುವು. ಮೋಹಕ ವಾಗಿದ್ದ ಪುಸ್ತಕದಿಂದ ಕಣ್ಣೆತ್ತಿದ ಕೂಡಲೇ, ಮನೆಯ ದುಃಖಗಳೆಲ್ಲ ಮನ ಸ್ಸನ್ನು ಮುತ್ತಿ ಹೃದಯ ಭಾರವಾಗುತ್ತಿತ್ತು. ಎಲ್ಲವನ್ನೂ ಮೀರಿಸಿ ಮೇನ್ಯಳ ಎಳೆಯ ಮನಸ್ಸನ್ನು ಹಿಂಡುತ್ತಿದ್ದ ಚಿಂತೆ, ತಾಯಿಯ ರೋಗ. ಈಚೆಗೆ ಕೆಲವು ದಿನಗಳಿಂದ ರೋಗ, ಸಾವುಗಳ ಭಯ, ಮನೆಯ ವಾತಾ ವರಣದಲ್ಲೆಲ್ಲ ಊರಿಬಿಟ್ಟಿತ್ತು.

ತಾಯಿ ಕೂಡ ತನ್ನ ಸಾವನ್ನು ಶಾಂತವಾಗಿ ಎದುರು ನೋಡುವು ದಕ್ಕೆ ಪ್ರಾರಂಭಿಸಿದ್ದಳು. ತಾನು, ಎಣೆಯಿಲ್ಲದಂತೆ ಪ್ರೀತಿಸಿ ಮದುವೆಯಾದ ಗಂಡ, ತನ್ನ ಸರ್ವಸ್ವವಾಗಿದ್ದ ನಾಲ್ಕು ಮಕ್ಕಳು, ಅದರಲ್ಲೂ ತನ್ನ ಮುದ್ದಿನ ಪುಟ್ಟ ಮನ್ಯೂಸ್ಯ (ಮೇನ್ಯಳನ್ನು ತಾಯಿ ಕರೆಯುತ್ತಿದ್ದ ಮುದ್ದಿನ ಹೆಸರು) ಇವರನ್ನು ಎಂದೆಂದಿಗೂ ಅಗಲಬೇಕಾಗಿ ಬಂದಿದ್ದ ಆ ಸಮಯದ ನೋವು, ಆ ತಾಯಿಯ ಹೃದಯಕ್ಕೆ ಮಾತ್ರ ಗೊತ್ತು. ಆದರೂ, ಈ ತಲ್ಲಣವನ್ನು ಅವಳು ಯಾರ ಬಳಿಯೂ ತೋಡಿಕೊಳ್ಳಲಿಲ್ಲ. ತನ್ನ ಪ್ರೀತಿಯ ಮಕ್ಕಳನ್ನು ಗಂಡನ ಕೈಯಲ್ಲಿಟ್ಟು, ತಾನು ಚಿರವಾಗಿ ಕಣ್ಮರೆಯಾಗುವುದಕ್ಕೆ, ದಿನದಿನಕ್ಕೆ ಸಿದ್ಧವಾಗುತ್ತಿದ್ದಳು. ಇಷ್ಟು ದಿನವೂ ತನ್ನದೆಸಿಸಿದ್ದ ಆ ಮನೆಯ ಶಾಂತಿ ಯನ್ನು ತನ್ನ ಸಾವು ಸ್ವಲ್ಪವೂ ಕೆಡಿಸಕೂಡದೆಂದು ನಿಶ್ಚಯಿಸಿಕೊಂಡಿದ್ದಳು.

೧೮೭೮ನೆಯ ಮೇ ೯ನೇ ದಿನ, ತನ್ನ ಕಾಲ ಸಮೀಪಿಸಿತೆಂದು ತಿಳಿದಾಗ, ಆವಳ ಗಂಡನೂ ಮಕ್ಕಳೂ, ಹಾಸಿಗೆಯ ಬಳಿ ನೆರೆದು ನಿಂತರು. ಮಕ್ಕಳಿಗೆ ತೋರಿಬರುತ್ತಿದ್ದುದು, ತಾಯಿಯ ಶಾಂತವಾದ ಮುಖವೊತ್ತು. ಹೃದಯದ ಒಳಗೆ ಹುದುಗಿದ್ದ, ನೋವು ತಲ್ಲಣಗಳ ನೆರಳು ಕೂಡ ಮುಖದ ಮೇಲೆ ಇರಲಿಲ್ಲ. ಅವಳು ಎಷ್ಟೋ ದಿನಗಳಿಂದ ಬಯಸುತ್ತಿದ್ದುದೂ ಇಂತಹ ಸಾವನ್ನೇ! ಮೃತ್ಯುವಿನ ದೆಸೆಯಿಂದ ಆಗಲೇ ಜಡವಾದ ಕಣ್ಣುಗಳಿಂದ, ದುಃಖದಿಂದ ಕಂಗೆಟ್ಟು ಹುಚ್ಚುಹುಚ್ಚಾಗಿದ್ದ ಐದು ಮುಖಗಳ ಕಡೆಗೆ ಆವಳು ಪ್ರೀತಿ ತುಂಬಿದ ನೋಟದಿಂದ ಕೊನೆಯ ಸಲ ನೋಡಿದಳು. ಪ್ರಾಣ ಹತ್ತಿಬರುತ್ತಿದ್ದ ಆ ಕೊನೆಯ ನಿಮಿಷದಲ್ಲಿ, 'ನಾನು ನಿಮ್ಮನ್ನು ಪ್ರೀತಿಸುತ್ತೇನೆ' ಎಂದು ಕಷ್ಟದಿಂದ ಹೇಳಿದಳು. ಇಷ್ಟು ದಿನ ಆ ಐದು ಜನರ ಬಾಳಿನ ಆಧಾರವಾಗಿದ್ದ, ಸರ್ವಸ್ವವಾಗಿದ್ದ, ಆ ಜೀವ ಆ ಮಾತಿನ ಜೊತೆಗೆ ಶಾಂತವಾಗಿ ಆರಿಹೋಯಿತು.

ಪುನಃ ಕಪ್ಪುಬಟ್ಟೆ ಧರಿಸಿ, ಶೂನ್ಯವಾದ ಹೃದಯದೊಡನೆ ಮನೆಯಲ್ಲಿ ಎಲ್ಲರೂ ಓಡಾಡತೊಡಗಿದರು. ತಾಯಿ ತಮ್ಮನ್ನು ಬಿಟ್ಟು ಹೊರಟು ಹೋದದ್ದು, ಬೊನ್ನ ಈಗ ತಾಯಿಯ ಸ್ಥಾನವನ್ನು ಪಡೆದುದು, ಮನೆಯಲ್ಲಿ ಒಬ್ಬ ಮನೆವಾರ್ತೆ ಬಂದು ಕೆಲಸ ನೋಡಿಕೊಂಡು ಹೋಗುತ್ತಿದ್ದುದು, ಇವನ್ನೆಲ್ಲ ನಂಬಲು ಮೇನ್ನಳ ಜೀವ ಒಡಂಬಡುತ್ತಿರಲಿಲ್ಲ, 'ಇವೆಲ್ಲ ಹೇಗೆ ನಡೆದು ಹೋದುವು?' ಪ್ರೀತಿಯ ಹಿರಿಯಕ್ಕ ಸತ್ತುಹೋದಳು. ತಾಯಿ ಜೀವಬಿಡಲಾರದೆ, ಮಕ್ಕಳನ್ನು ಅಗಲಲಾರದೆ, ಕಣ್ಣುಮುಚ್ಚಿದಳು. ಬಾಳು ಎಷ್ಟು ಕ್ರೂರವಾದದ್ದು! ತಾಯಿಯೊಡಗೂಡಿ ಹೋಗುತ್ತಿದ್ದ ಚರ್ಚಿನಲ್ಲಿ ಪುನಃ ಪ್ರಾರ್ಥನೆಗೋಸ್ಕರ ಮೊಣಕಾಲೂರಿದಾಗ ಮೇನ್ನಳ ಎಳೆಯ ಹೃದಯದ ಕಿಚ್ಚು ಧಗಧಗನೆ ಉರಿಯೆಬ್ಬಿಸಿತು. ಅಕ್ಕನನ್ನೂ ತಾಯಿಯನ್ನೂ ತನ್ನಿಂದ ಬಲವಂತವಾಗಿ ಸೆಳೆದುಕೊಂಡು ಹೋಗಿ, ಮಧುರವಾಗಿ, ಸುಂದರವಾಗಿದ್ದ ತನ್ನ ಬಾಳನ್ನು ಬರಿದುಮಾಡಿದ ನಿಷ್ಕರುಣಿಯಾದ ದೇವರಲ್ಲಿಯ ನಂಬಿಕೆ ಅದುರಿ ಅಲ್ಲಾಡಿ ಹೋಗಿತ್ತು!

—

ಅಧ್ಯಾಯ ಮೂರು

## ರಷ್ಯನ್ ಶಾಲೆಯಲ್ಲಿ



ನಾಲ್ಕು ವರ್ಷಗಳು ಕಳೆಯುವ ಹೊತ್ತಿಗೆ, ಸ್ಕ್ಲೊಡೊವ್ಸ್ಕಿಯ ಮನೆಯಲ್ಲಿ ಮೊದಲಿನಂತೆ ಶಾಂತಿ ಮೂಡುತ್ತಬಂತು. ಶಾಲೆಯ ಹುಡುಗಿಯಾಗಿದ್ದ ಹಿರಿಯಕ್ಕ ಬ್ರೊನ್ಯ ಈಗ ಮನೆಯ ಯಜಮಾನಿಯಾಗಿ, ಮನೆಯ ಕೆಲಸವನ್ನೆಲ್ಲ ನೋಡಿಕೊಳ್ಳುತ್ತಿದ್ದಳು. ಮನೆಯಲ್ಲಿ ಇರುತ್ತಿದ್ದ ಹೊರಗಿನ ಹುಡುಗರ ಮೇಲ್ವಿಚಾರಣೆಯನ್ನೂ ಮಾಡುತ್ತಿದ್ದಳು.

ಹುಟ್ಟಿದ ಐದು ಮೇಧಾವಿಗಳಾದ ಮಕ್ಕಳಲ್ಲಿ ಜೋಸ್ಯೆಯನ್ನು ದೇವರು ಕಿತ್ತುಕೊಂಡು ಹೋಗಿದ್ದ. ದುಡಿದು ದುಡಿದು ಜರ್ಝರಿತನಾಗಿದ್ದ ಮೇಧಾವಿಯಾದ ತಂದೆ, ಕ್ಷಯರೋಗದ ತಾಯಿ, ಇವರಿಗೆ ಹುಟ್ಟಿದ ಈ ಉಳಿದ ನಾಲ್ಕು ಮಕ್ಕಳು ಮಹಾ ಪ್ರಚಂಡರು. ಬಾಳಿನ ಎಡರು-ತೊಡರುಗಳನ್ನು ಲೆಕ್ಕಿಸದೆ ಮುಂದೆ ನುಗ್ಗಿದ ಎದೆಗಾರರು.

ಶಾಲೆಯ ಓದನ್ನು ಮುಗಿಸಿದ್ದ ಬ್ರೊನ್ಯ ಹೋದ ವರ್ಷ ತಾನೇ ಶಾಲೆಗೆ ಮೊದಲನೆಯವಳಾಗಿ, ಚಿನ್ನದ ಪದಕವನ್ನು ಪಡೆದು ಮನೆಗೆ ಹೆಸರನ್ನು ತಂದಿದ್ದಳು. ಜೋಸೆಫ್, ಹೈಸ್ಕೂಲ್ ಓದನ್ನು ಮುಗಿಸಿ, ಅಕ್ಕನಂತೆಯೇ ಚಿನ್ನದ ಪದಕವನ್ನು ಸಂಪಾದಿಸಿದ್ದ. ಈಗ ಜೋಸೆಫ್ ವಾರ್ಸಾ ವಿಶ್ವವಿದ್ಯಾಲಯದಲ್ಲಿ ವೈದ್ಯಪರೀಕ್ಷೆಗೆ ಓದುತ್ತಿದ್ದ. ಗಂಡಸಾಗಿ ಹುಟ್ಟಿ ಅವನು ಎಂತಹ ಅದೃಷ್ಟಶಾಲಿ! ಅವನ ಜೊತೆಯಲ್ಲಿ ಹುಟ್ಟಿದ ಮೂರು ಹೆಣ್ಣುಮಕ್ಕಳಿಗೆ ಯಾವಾಗಲೂ ಅದೇ ಮಾತು, ಗೊಣಗಾಟ. ಆಗಿನ ಪದ್ಧತಿಯಂತೆ, ರಷ್ಯಕ್ಕೆ ಸೇರಿದ ಆ ವಿಶ್ವವಿದ್ಯಾಲಯದಲ್ಲಿ ಹೆಂಗಸರಿಗೆ ಓದಲು ಅವಕಾಶವಿರಲಿಲ್ಲ. ಅಣ್ಣ ಹೇಳುತ್ತಿದ್ದ ಆ ವಿಶ್ವವಿದ್ಯಾಲಯದ ಮಾತನ್ನೆಲ್ಲ ಈ ಹೆಣ್ಣುಮಕ್ಕಳು ಉತ್ಸಾಹದಿಂದಲೂ, ಕುತೂಹಲದಿಂದಲೂ ಕೇಳುತ್ತಿದ್ದರು.

ಹದಿನಾರು ವರ್ಷದ ಹೆಲಾ ಮನೆಯಲ್ಲೆಲ್ಲ ಅತ್ಯಂತ ಸುಂದರಿ. ಅವಳಿನ್ನೂ ಸಿಕೋರ್‌ಸ್ಕ ಶಾಲೆಗೇ ಹೋಗುತ್ತಿದ್ದಳು. ಹದಿನಾಲ್ಕು ವರ್ಷದ ಮೇನ್ಯ, ಬ್ರೋನ್ಯ ಮೊದಲು ಹೋಗುತ್ತಿದ್ದ ಸರ್ಕಾರಿ ಶಾಲೆಯಲ್ಲಿಯೇ ಓದುತ್ತಿದ್ದಳು ಆ ಶಾಲೆಯಲ್ಲಿ ತಂಗಿ, ಅಕ್ಕನನ್ನು ಮೀರಿಸಿದ ಮೇಧಾವಿ. ಈ ದಿನಗಳಲ್ಲಿ ಕೆಜಯು, ಮೇನ್ಯಳ ಪ್ರೀತಿಯ ಗೆಳತಿ. ಒಬ್ಬರ ಕೈ ಇನ್ನೊಬ್ಬರು ಹಿಡಿದು, ಹೋಗುತ್ತಿದ್ದ ಈ ಗೆಳತಿಯರಿಗೆ, ಶಾಲೆಯ ಮಾತು ಬಿಟ್ಟು ಬೇರೆ ಮಾತಿರುತ್ತಿರಲಿಲ್ಲ. ಮೇನ್ಯಳಿಗಂತೂ, ಪ್ರಪಂಚವೆಲ್ಲ, ಕಲಿಸುವವರು, ಕಲಿಯುವವರು ಇವೆರಡರಿಂದಲೇ ತುಂಬಿದಂತೆ ತೋರುತ್ತಿತ್ತು. ಆ ಪ್ರಪಂಚದಲ್ಲಿ, ಬಾಳಿನ ಇತರ ಧ್ಯೇಯಗಳೆಲ್ಲ ಕರಗಿಹೋಗಿ ಉಳಿದು ಎದ್ದು ತೋರುತ್ತಿದ್ದ ಆದರ್ಶ ಒಂದೇ ಒಂದು, ಓದುವುದು, ಕಲಿಯುವುದು.

ಮೇನ್ಯ ಹೋಗುತ್ತಿದ್ದ ಈ ಶಾಲೆ, ಪೂರ್ಣವಾಗಿ ರಷ್ಯನ್ ಮೇಲ್ವಿಚಾರಣೆಯುಳ್ಳದ್ದು. ಈ ಶಾಲೆ ಬಿಟ್ಟರೆ, ಬೇರೆ ಶಾಲೆಗಳು ಸರಿಯಾಗಿರಲಿಲ್ಲ. ಆದರೂ ಕೆಜಯು, ಮೇನ್ಯ ಇಬ್ಬರೂ ಗುಟ್ಟಾಗಿ, ತಮ್ಮ ರಷ್ಯನ್, ಜರ್ಮನ್ ಉಪಾಧ್ಯಾಯರುಗಳನ್ನು ಗೇಲಿಮಾಡಿ ತಮ್ಮ ದ್ವೇಷವನ್ನು ತೀರಿಸಿಕೊಳ್ಳುತ್ತಿದ್ದರು. ಶಾಲೆಯಲ್ಲಿ ಓದಿನ ಮೇಲ್ವಿಚಾರಣೆ ನೋಡಿಕೊಳ್ಳುತ್ತಿದ್ದ, ಮೇಯರ್‌ಳಿಗೂ, ಮೇನ್ಯಳಿಗೂ ಹತ್ತಿದರೆ ಹರಿಯದ ದ್ವೇಷ. ಮೇನ್ಯಳನ್ನು ಕಂಡಾಗಲೆಲ್ಲ ಅವಳು ಬೈಯದೇ ಇರುತ್ತಿರಲಿಲ್ಲ ಮೇನ್ಯ ನಕ್ಕರೆ, ತನ್ನನ್ನು ಹಾಸ್ಯ ಮಾಡುವುದಕ್ಕೋಸ್ಕರ ಎನ್ನುವಳು. ಕೆಟ್ಟ ಹಟಮಾಡುವ ಮೊಂಡ ಹುಡುಗಿ ಎಂದು ತಪ್ಪನ್ನು ಹೊರಿಸುವಳು. ಮೇನ್ಯಳ ಗುಂಗುರು ಕೂದಲು ಹಣೆಯ ಮೇಲೆ ಬಿದ್ದಿದ್ದರೆ, ಹುಚ್ಚುಹುಚ್ಚಾಗಿ ತಲೆ ಕೆದರಿಕೊಂಡಿದ್ದೀಯೆ ಎನ್ನುವಳು. ಎಷ್ಟೋ ವೇಳೆ ಕೂದಲನ್ನು ನೆಟ್ಟಗೆ ಮಾಡುವುದಕ್ಕೋಸ್ಕರ ಹಿಡಿದೆಳೆದು ಹಿಂದಕ್ಕೆ ಬಾಚುತ್ತಿದ್ದಳು. ಆದರೆ ಒಂದು ಕ್ಷಣದೊಳಗಾಗಿ ಕೂದಲು ಗುಂಗುರ ಸುತ್ತಿಕೊಂಡು ಹಣೆಯ ಮೇಲೆಲ್ಲ ಚೆಲ್ಲಾಡುತ್ತಿತ್ತು. ಇಂತಹ ಸಮಯಗಳಲ್ಲಿ ಮೇನ್ಯ ಏನೂ ಅರಿಯದೆ, ಬಿಡ್ದುಬಿಡ್ದಾಗಿ ಬುರುಡೆಗೆ ಹತ್ತಿಕೊಂಡಿರುತ್ತಿದ್ದ ಮೇಯರ್‌ಳ ಕೂದಲಿನ ಕಡೆಗೆ ದೃಷ್ಟಿ ತಿರುಗಿಸುತ್ತಿದ್ದಳು. ಇದನ್ನು ಕಂಡು ಮೇಯರ್ ಪುನಃ ರೇಗಿಬಿದ್ದು 'ನೀನು ನನ್ನ ಕಡೆಗೆ ಹಾಗೆ ನೋಡಕೂಡದು. ದೃಷ್ಟಿ ತಗ್ಗಿಸಿ ನನ್ನನ್ನು ನೋಡುವುದೆಂದರೆ

ಏನು ?' ಎನ್ನುವಳು. ಮೇಯರ್‌ಗಿಂತ ಎಷ್ಟೋ ಉದ್ದವಾಗಿದ್ದ ಮೇನ್ಯ ದೃಷ್ಟಿ ತಗ್ಗಿಸದೆ ಅವಳ ಕಡೆಗೆ ನೋಡುವುದು ಹೇಗೆ ಸಾಧ್ಯ? ಕೊನೆಗೆ ಒಂದು ದಿನ ಮೇನ್ಯ 'ಹಾಗೆ ನೋಡದೆ, ಇನ್ನು ಬೇರೆಯಾಗಿ ನೋಡು ವುದು ನನಗೆ ಸಾಧ್ಯವಿಲ್ಲ' ಎಂದು ಉತ್ತರ ಕೊಟ್ಟಳು. ದಿನದಿನವೂ ಹೀಗೆ, ಈ ಕೋಪಿಷ್ಠ ಉಪಾಧ್ಯಾಯಿನಿಗೂ, ಈ ಮೊಂಡ ಹುಡುಗಿಗೂ, ಕದನ ನಡೆಯುತ್ತಲೇ ಇತ್ತು. ಒಂದು ಸಲ ಮೇಯರ್ ಅನಿರೀಕ್ಷಿತವಾಗಿ ತರಗತಿ ಯೊಳಕ್ಕೆ ಬಂದಾಗ ಅವಳು ರೇಗಿಬಿದ್ದಳು. ಆಗ ತಾನೇ ರಷ್ಯಾದ ದೊರೆಯ ಕೊಲೆ ನಡೆದ ಸುದ್ದಿ ಎಲ್ಲರಿಗೂ ಮುಟ್ಟಿತ್ತು. ರಷ್ಯಾದ ದೊರೆ ಕೊಲೆಯಾದ ಸಂತೋಷವನ್ನು ಪ್ರಕಟಿಸುವುದಕ್ಕೋಸ್ಕರ, ಮೇನ್ಯ ಮತ್ತು ಕೆಜಯ ಡೆಸ್ಕುಗಳ ಮಧ್ಯೆ ಕುಣಿದು ಹಾರಾಡುತ್ತ ನಗುತ್ತಿದ್ದರು. ಇಂತಹ ತಪ್ಪಿಗೆ, ಮೇಯರ್ ಇಬ್ಬರು ಹುಡುಗಿಯರಿಗೂ ಕ್ರೂರವಾಗಿ ಶಿಕ್ಷೆ ಮಾಡಿದಳು.

ಮೇನ್ಯಳ ತರಗತಿಯಲ್ಲಿ, ಬೇರೆ ಬೇರೆ ಜಾತಿ ಜನಾಂಗಗಳ ಹುಡುಗಿ ಯರೆಲ್ಲ ಇದ್ದರು. ಪೋಲಿಷ್, ರಷ್ಯನ್, ಜರ್ಮನ್, ಜ್ಯೂ ಹುಡುಗಿಯರು ಒಟ್ಟಿಗೆ ಕುಳಿತು, ದ್ವೇಷ ಅಸಮಾಧಾನಗಳಿಲ್ಲದೆ ಪಾಠ ಕಲಿಯುತ್ತಿದ್ದರು. ತಾವೆಲ್ಲ ಒಂದೇ ತರಗತಿಯವರೆಂಬ ಭಾವನೆ, ಇತರ ವೈಷಮ್ಯಗಳನ್ನೆಲ್ಲ ಮರೆಸಿ ಬಿಡುತ್ತಿತ್ತು. ಆದರೆ ಈ ಸಹನೆ ಔದಾರ್ಯಗಳೆಲ್ಲ ತರಗತಿಯೊಳಗೆ ಮಾತ್ರ. ಪಾಠ ಮುಗಿದು ಈಚೆಗೆ ಬಂದಕೂಡಲೆ, ಹುಡುಗಿಯರೆಲ್ಲ ಗುಂಪು ಗುಂಪಾಗಿ ಭಾಗವಾಗಿ ಹೋಗುತ್ತಿದ್ದರು. ಪೋಲಿಷ್ ಹುಡುಗಿಯರೆಲ್ಲ ಸೇರಿ ತಮ್ಮದೇ ಒಂದು ತಂಡವಾಗುತ್ತಿದ್ದರು. ಅವರ ಬಳಿಗೆ ರಷ್ಯನ್ ಹುಡು ಗಿಯರು ಸುಳಿಯಲೇ ಕೂಡದು. ತಮ್ಮನ್ನು ಇತರರು ಆಳುತ್ತ ತಮಗೆ ಅನ್ಯಾಯವಾಗಿದೆಯೆಂಬ ಭಾವನೆ ಅವರ ಗರ್ವವನ್ನೂ ಬಿಗುಮಾನವನ್ನೂ ಇನ್ನಷ್ಟು ಹೆಚ್ಚಿಸುತ್ತಿತ್ತು. ಅಭಿಮಾನಿಗಳಾದ ಈ ಪೋಲಿಷ್ ಹುಡುಗಿಯರು ತಮ್ಮ ತಮ್ಮಲ್ಲೇ ವಿನೋದಗಳನ್ನೇರ್ಪಡಿಸಿಕೊಳ್ಳುವರು. ಉಪಾಧ್ಯಾಯರು ಗಳನ್ನೆಲ್ಲ ಗುಟ್ಟಾಗಿ ಗೇಲಿ ಮಾಡುವರು. ಸ್ಯಾಕ್ಸನಿ ಚೌಕದಲ್ಲಿನ ಸ್ಮಾರಕವೆಂದರೆ, ಈ ಪೋಲಿಷ್ ಹುಡುಗಿಯರಿಗೆ ದ್ವೇಷ. ಆ ಸ್ಮಾರಕ ರಷ್ಯದ ರಾಜನ ಭಕ್ತರಾಗಿ ದಂಗೆಯಲ್ಲಿ ಸತ್ತ ಪೋಲರಿಗೆ ಏರ್ಪಡಿಸಿದ್ದುದು. ಶಾಲೆ ಯಿಂದ ಮನೆಗೆ ಬರುವಾಗ ಈ ಸ್ಮಾರಕ ದಿನವೂ ಸಿಕ್ಕುತ್ತಿತ್ತು. ಅವರ

ಒಪ್ಪಂದದಂತೆ, ಈ ಹುಡುಗಿಯರು ಮನಸ್ಸಿನ ದ್ವೇಷವನ್ನೆಲ್ಲ ಒಟ್ಟುಗೂಡಿಸಿ ಕೊಂಡು ಅದರ ಮೇಲೆ ಉಗುಳಬೇಕು. ಮರೆತು ಮುಂದೆ ಹೊರಟು ಹೋದರೆ, ಹಿಂದುರಿಗಿ ಬಂದು ಉಗುಳಿಯೇ ಮುಂದೆ ಹೋಗಬೇಕು.

ಇಷ್ಟೊಂದು ದ್ವೇಷವನ್ನು ಹೃದಯದಲ್ಲಿಟ್ಟುಕೊಂಡಿದ್ದರೂ, ಮೇನ್ಯ, ರಷ್ಯಾ ಸರ್ಕಾರದಿಂದ ಏರ್ಪಡಿಸಿದ್ದ ಈ ಶಾಲೆಯನ್ನು ಪ್ರೀತಿಸುತ್ತಿದ್ದಳು. ಅಲ್ಲಿಯ ಉಪಾಧ್ಯಾಯರೆಲ್ಲ ರಷ್ಯನ್‌ರು. ಪಾಠ ಹೇಳುತ್ತಿರುವ ಈ ರಷ್ಯನ್ ವ್ಯಕ್ತಿಯ ಮೇಲೆ ದ್ವೇಷ ಅಸಹ್ಯಗಳು ಉರಿಯೆಬ್ಬಿಸುತ್ತಿದ್ದರೂ, ಆತ ಹೇಳುವ ವಿಜ್ಞಾನದ ಪಾಠಗಳು ಎಷ್ಟು ಮೋಹಕವಾದುವುಗಳು. ಮೇನ್ಯ ಪಾಠ ಕೇಳುತ್ತ ಕೇಳುತ್ತ ಮೈಮರೆತು ಬಿಡುತ್ತಿದ್ದಳು. ರಷ್ಯನ್ ಸರ್ಕಾರ, ಅದು ಏರ್ಪಡಿಸಿರುವ ಶಾಲೆ, ಅದು ಪೋಲಿಷ್ ಸಂಸ್ಕೃತಿಯನ್ನೆಲ್ಲ ಹೆಸರಿಲ್ಲ ದಂತೆ ಮಾಡುತ್ತಿರುವುದು, ಈ ಅಪಮಾನಗಳನ್ನೆಲ್ಲ ನೆನಪಿಗೆ ತರುವಂತೆ ರಷ್ಯನ್ ಉಪಾಧ್ಯಾಯರುಗಳು, ಇವೆಲ್ಲ ಮರೆತು ಹೋಗಿ ಮೇನ್ಯಳಿಗೆ, ಶಾಲೆ, ಶಾಲೆಯ ಪಾಠಗಳು ಬಹಳ ಸುಖಕರವಾದುವುಗಳು ಎಂಬ ಭಾವನೆ ಮಾತ್ರ ಉಳಿಯುತ್ತಿತ್ತು. ಈ ಭಾವನೆ ತಪ್ಪು, ಅಪಮಾನಕರ ಎಂಬುದು ಮೇನ್ಯಳಿಗೆ ಗೊತ್ತಿತ್ತು.

೧೮೮೩ನೆಯ ವರ್ಷದ ಜೂನ್ ೧೨ನೆಯ ದಿನ, ಮೇನ್ಯಳ ಶಾಲಾ ವಿದ್ಯಾಭ್ಯಾಸ ಮುಗಿಯಿತು. ಆ ದಿನ ಆತುರದಿಂದ ಉಸಿರು ಹಿಡಿದು ಕೇಳು ತ್ತಿದ್ದ ಹುಡುಗರ ಮುಂದೆ ಬಹುಮಾನಗಳ ಪಟ್ಟಿಯನ್ನು ಓದಿದರು. ಎಲ್ಲರೂ ನಿರೀಕ್ಷಿಸಿದ್ದಂತೆ ಮೇನ್ಯಳಿಗೆ ಚಿನ್ನದ ಪದಕ ದೊರೆಯಿತು. ಜೊತೆಯ ಹುಡುಗಿ ಯರೂ, ಉಪಾಧ್ಯಾಯರೂ ಅಭಿನಂದಿಸಿದರು. ಭಾಷಣಗಳಾದ ಮೇಲೆ, ಶಾಲೆಯ ಮುಖ್ಯೋಪಾಧ್ಯಾಯ ಮೇನ್ಯಳಿಗೆ ಹಸ್ತಲಾಘವ ಕೊಟ್ಟ. ಮೇನ್ಯಳನ್ನು ಮನೆಗೆ ಕರೆದುಕೊಂಡು ಹೋಗಲು ತಂದೆ ಬಂದಿದ್ದ. ಈ ಸಲದ ಪದಕ ಅವನ ಮನೆಯಲ್ಲಿ ಮೂರನೆಯದು. ತನ್ನ ಮನೆಯಲ್ಲಿ ಹುಟ್ಟಿದ ಈ ಮಕ್ಕಳು ಎಂತಹ ಮೇಧಾವಿಗಳು, ಎಂದು ಯೋಚಿಸಿದ ಹಾಗೆಲ್ಲ ಅವನ ಮನಸ್ಸು ಸಂತೋಷದಿಂದ ಹಿಗ್ಗುತ್ತಿತ್ತು. ಮೇನ್ಯ, ತನಗೆ ಬಹುಮಾನವಾಗಿ ಬಂದಿದ್ದ, ರಷ್ಯನ್ ಪುಸ್ತಕಗಳ ಹೊರೆಯನ್ನು ಹೊತ್ತು, ಹೆಮ್ಮೆಯಿಂದ ಬೀರಿಯುತ್ತಿದ್ದ ತಂದೆಯ ಕೈಹಿಡಿದು ಶಾಲೆಯಿಂದ ಮನೆಯ ಕಡೆಗೆ

ಹೊರಟಳು. ಹೋಗುವುದಕ್ಕೆ ಮುಂಚೆ ಕಾಗದ ಬರೆಯಬೇಕೆಂದು ತನ್ನ ಗೆಳತಿಯರಿಗೆಲ್ಲ ಹೇಳಿದಳು. ಈ ಸಲ ಎಲ್ಲರಿಗೂ ಕೇಳಿಸುವಂತೆ, ತನಗೆ ದೊರೆತಿದ್ದ ರಷ್ಯನ್ ಪುಸ್ತಕಗಳು 'ಮಹಾ ಭಯಂಕರವಾದುವುಗಳು' ಎಂದು ಗಟ್ಟಿಯಾಗಿ ಹೇಳಿದಳು. ತಾನು ಶಾಲೆಯನ್ನು ಬಿಟ್ಟು ಹೋಗುವ ಆ ಗಳಿಗೆಯಲ್ಲಿ ಹಾಗೆ ಹೇಳಲು ಏನು ಭಯ?

ಮೇನ್ಯ ಕಷ್ಟಪಟ್ಟು ಓದಿ ಮನೆಗೆ ಒಳ್ಳೆಯ ಹೆಸರನ್ನು ತಂದಿದ್ದಳು. ತಂದೆ ಹುಡುಗಿಯನ್ನು ಹಳ್ಳಿಗೆ ಕಳುಹಿಸಿ ಒಂದು ವರ್ಷದ ಕಾಲ ವಿಶ್ರಾಂತಿ ಕೊಡಬೇಕೆಂದು ನಿರ್ಧರಿಸಿದ. ಈ ಅವಧಿಯಲ್ಲಿ ಮೇನ್ಯ ಇದ್ದಕ್ಕಿದ್ದ ಹಾಗೆ ಸೋಮಾರಿಯಾಗಿಬಿಟ್ಟಳು. ಶಾಲೆಯ ಪುಸ್ತಕ ಮುಟ್ಟುತ್ತಿರಲಿಲ್ಲ. ವಿಜ್ಞಾನ, ಲೆಕ್ಕ ಇವೆಲ್ಲ ಪೂರ್ತಿ ಮರೆತು ಹೋದಂತೆ ಆಗಿಹೋಗಿತ್ತು. ಶಾಲೆಯ ನೆರಳು ನೋಕದ ದೂರದ ಹಳ್ಳಿಯಲ್ಲಿ ದಿನದಿನಕ್ಕೆ ಸುಂದರವಾಗಿ ಬೆಳೆಯುತ್ತಿದ್ದ ಮೇನ್ಯ ತನ್ನ ಬಾಳಿನಲ್ಲೆಲ್ಲ ವಿಶ್ರಾಂತಿಯ ಅನುಭವ ಮಾಡಿದ್ದು ಇದೊಂದೇ ಸಲ. ಎಳೆಯತನದಲ್ಲಿಯೇ ದುಃಖದ ಹೊರೆ ಹೊತ್ತು, ತಲ್ಲಣ ಪಟ್ಟು, ಸೊರಗಿಹೋಗಿದ್ದ ಮನಸ್ಸು ಈಗ ಹಿಗ್ಗಿ ಅರಳಿತು. ಸ್ಕ್ಲೊಡೊವ್‌ಸ್ಕಿಯ ಹಳ್ಳಿಯಲ್ಲಿದ್ದ ಬಂಧುಗಳು ಒಬ್ಬರಾದ ಮೇಲೊಬ್ಬರು, ವಾರವಾರಗಳಗಟ್ಟಲೆ, ಮೇನ್ಯಳನ್ನು ತಮ್ಮ ಮನೆಗಳಲ್ಲಿಟ್ಟುಕೊಳ್ಳುತ್ತಿದ್ದರು. ಮೇನ್ಯ ಅವರ ಮಕ್ಕಳಿಗೆ ಅಷ್ಟಿಷ್ಟು ಪಾಠ ಹೇಳಿಬಿಟ್ಟರೆ ಅವಳ ಕೆಲಸವೆಲ್ಲ ಮುಗಿದು ಹೋಗುತ್ತಿತ್ತು. ಉಳಿದ ಹೊತ್ತಿನಲ್ಲಿ, ಮನಸ್ಸು ತಣಿಯುವಷ್ಟು ಕುಣಿಯುವುದು, ಆಡುವುದು, ನಿದ್ರೆಮಾಡುವುದು. ಒಬ್ಬ ಚಿಕ್ಕಪ್ಪನ ಮನೆಯಲ್ಲಿ, ಮೇನ್ಯ ತನ್ನ ಚಿಕ್ಕಪ್ಪನ ಮಕ್ಕಳಿಂದ ಕುದುರೆಯ ಉಡುಪು ಎರವಲಾಗಿ ತೆಗೆದುಕೊಂಡು ಚೆನ್ನಾಗಿ ಕುದುರೆ ಸವಾರಿ ಮಾಡುವುದನ್ನು ಕಲಿತಳು. ಇನ್ನೊಬ್ಬ ಚಿಕ್ಕಪ್ಪ ಬಹಳ ವಿನೋದಪ್ರಿಯ. ಅವನ ಹೆಣ್ಣುಮಕ್ಕಳು ಯಾವಾಗಲೂ ನಗುತ್ತಲೇ ಇರುವರು. ಇವರುಗಳ ಜೊತೆಯಲ್ಲಿ ಮೇನ್ಯ, ಉಲ್ಲಾಸದಿಂದ ಕಾಲಕಳೆದಳು.

ಬಂಧುಗಳ ಮನೆಗಳೆಲ್ಲ ಮುಗಿಯುವ ಹೊತ್ತಿಗೆ ಇನ್ನೊಂದು ಕಡೆಯಿಂದ ಆಹ್ವಾನ ಬಂತು. ಮೆಡೇಮ್ ಸ್ಕ್ಲೊಡೊವ್‌ಸ್ಕಿಯ ಶಿಷ್ಯರಲ್ಲೊಬ್ಬಳು, ಮೇನ್ಯಳನ್ನೂ, ಹೆಲಾಳನ್ನೂ ತನ್ನ ಹಳ್ಳಿಯ ಮನೆಗೆ ಕರೆದುಕೊಂಡು

ಹೋಗಿ ಎರಡು ತಿಂಗಳ ಕಾಲ ಇಟ್ಟುಕೊಂಡಿದ್ದಳು. ಕೆಲವು ದಿನಗಳಲ್ಲಿಯೇ' ಹೆಲಾ, ಮೇನ್ಯ, ಆಲ್ಲೊಂದು ಹುಡುಗರ ತಂಡವನ್ನೇರ್ಪಡಿಸಿ, ಅದಕ್ಕೆ ಮುಖ್ಯಸ್ಥರಾದರು. ಇವರ ತುಂಟತನಕ್ಕೂ, ಚೇಷ್ಟೆಗೂ ಮಿತಿಯೇ ಇರಲಿಲ್ಲ. ಬುದ್ಧಿಗೆ ತೋರಿದ್ದನ್ನೆಲ್ಲ ಮಾಡುವರು. ಹುಚ್ಚುಕುಣಿತ ಕುಣಿಯುವರು. ಹುಡುಗರು ಹೊರಕ್ಕೆ ಹೋದ ಹೊರತು ಮನೆಯಲ್ಲಿ ಗಲಭೆ ನಿಲ್ಲುತ್ತಿರಲಿಲ್ಲ. ಮನೆಯ ಯಜಮಾನರು, ಆ ಫ್ರೆಂಚ್ ಗಂಡ, ಪೋಲಿಷ್ ಹೆಂಡತಿ ವಿಚಿತ್ರದ ಮನುಷ್ಯರು. ತಾವಿಬ್ಬರೂ ಒಟ್ಟಿಗೆ ಇದ್ದಾಗ, ಈ ಹುಡುಗರ ಮೇರೆ ಮೀರಿದ ಹುಚ್ಚು ತುಂಟಾಟಗಳಿಗೆ ಎಷ್ಟೋ ಅಂಕೆಯಿಟ್ಟು ತಮಗೆ ಅದು ಸರಿಬೀಳುವುದಿಲ್ಲವೇನೋ ಎನ್ನುವ ಹಾಗೆ ನಟಿಸುವರು. ಇಬ್ಬರೂ ಬೇರೆ ಬೇರೆಯಾದಾಗ, ಗುಟ್ಟಾಗಿ, ಇನ್ನೊಬ್ಬರಿಗೆ ತಿಳಿಯದಂತೆ, ಮಕ್ಕಳಿಗೆ ಪ್ರೋತ್ಸಾಹ ಸಹಕಾರಗಳನ್ನು ಕೊಡುವರು. ಅವರ ತುಂಟಾಟದಲ್ಲಿ ಉಲ್ಲಾಸ ಪಡುವರು. ಹುಡುಗರಂತೂ ಇವರಿಬ್ಬರನ್ನೂ ಮನಃಪೂರ್ವಕವಾಗಿ ಪ್ರೀತಿ ಸುತ್ತಿದ್ದರು. ಈ ಚೇಷ್ಟೆಯ ಹುಡುಗರು ಮನೆಯಲ್ಲಿ ನಿಲ್ಲುತ್ತಲೇ ಇರಲಿಲ್ಲ. ಅವರನ್ನು ಹಿಡಿದುಹಾಕಬೇಕಾದರೆ, ನೃತ್ಯಕೂಟಗಳನ್ನಾಗಲಿ, ಅಥವಾ ಇತರ ವಿನೋದಗಳನ್ನಾಗಲಿ ಏರ್ಪಡಿಸಬೇಕು. ಇಂತಹ ನೃತ್ಯಕೂಟವೊಂದ ರಲ್ಲಿ ಮೇನ್ಯ ರಾತ್ರಿಯೆಲ್ಲ ಕುಣಿದು ಕುಣಿದು, ಆವಳ ಹೊಸ ಜೋಡಿನ ಅಟ್ಟೆಗಳು ಒಂದು ರಾತ್ರಿಯಲ್ಲಿ ಉಪಯೋಗಕ್ಕೆ ಬರದಂತೆ ಸವೆದು ಹೋದುವು.

—

ಅಧ್ಯಾಯ ನಾಲ್ಕು

## ತಂದೆ ಮಕ್ಕಳು

ಒಂದು ವರ್ಷ ವಿಶ್ರಾಂತಿಯಲ್ಲಿ ಕಳೆದ ಮೇಲೆ ಮೇನ್ಯ ತಂದೆಯ ಮನೆಗೆ ಹಿಂತಿರುಗಿ ಬಂದಳು. ತಂದೆ ಮೊದಲಿನಂತೆ ಉಪಾಧ್ಯಾಯನಾಗಿದ್ದರೂ,

ಮನೆಯಲ್ಲಿ ಈಗ ವಿದ್ಯಾರ್ಥಿಗಳಿರಲಿಲ್ಲ. ಮನೆ ತುಂಬ ಚಿಕ್ಕದಾದರೂ, ಗಲಭೆ ಮಾಯವಾಗಿ, ಮಧುರವಾದ ವಾತಾವರಣ ಮನೆಯಲ್ಲ ಬೇರೂರಿತ್ತು. ಮುದುಕನಾದ ತಂದೆ, ತಾಯಿಲ್ಲದ ಈ ನಾಲ್ಕು ಮಕ್ಕಳು, ಇವರುಗಳಲ್ಲಿ ಪರಸ್ಪರ ಪ್ರೀತಿ ತುಂಬಿ ಹರಿಯುತ್ತಿತ್ತು.

ಸ್ಕ್ಲೊಡೊವ್‌ಸ್ಕಿ ಹೊರಗೆ ನೋಡುವುದಕ್ಕೆ ಒರಟು ಮನುಷ್ಯ. ಮೂವತ್ತು ವರ್ಷಗಳ ದೀರ್ಘಕಾಲ ಹುಡುಗರಿಗೆ ಕಲಿಸಿ ಕಲಿಸಿ, ಅವನ ಹೃದಯ ಜಡವಾಗಿ ಹೋಗಿತ್ತು. ಪ್ರತಿಭಾವಂತನಾಗಿದ್ದೂ, ಸಣ್ಣ ಮಕ್ಕಳ ಶಾಲೆಯಲ್ಲಿ ಕೆಲಸ ಮಾಡಿ, ಅವನ ನಡೆನಳಿಕೆ ಯಂತ್ರದಂತಾಗಿತ್ತು. ಹೆಂಡತಿಯ ಸಾವಿನ ದುಃಖದಿಂದ ಅವನಿನ್ನೂ ಚೇತರಿಸಿಕೊಂಡೇ ಇರಲಿಲ್ಲ. ಮಕ್ಕಳಿಗೋಸ್ಕರ ತಾನು ಕೂಡಿಟ್ಟಿದ್ದ ಆಸ್ತಿಯನ್ನು ಕಳೆದುಕೊಂಡಿದ್ದಂತೂ ಅವನ ಮನಸ್ಸನ್ನು ಯಾವಾಗಲೂ ಹಿಂಡುತ್ತಿತ್ತು. ಇಂತಹ ಮನುಷ್ಯ ಹೊರಗೆ ನೋಡುವುದಕ್ಕೆ ಗಂಭೀರನಾಗಿ ಕಾಣುತ್ತಿದ್ದ. ಆದರೆ ಅವನ ಹೃದಯ ಮಾತ್ರ ಮಕ್ಕಳ ವಿಷಯದಲ್ಲ ತುಡಿದುಕೊಳ್ಳುತ್ತಿತ್ತು. ಮನೆಯಲ್ಲಿ ತಾಯಿ ಸತ್ತು ಹೋದ ಮೇಲೆ ಈ ಐದು ಜೀವಗಳು, ತಮಗೆ ತಿಳಿಯದಂತೆಯೇ ಒಟ್ಟಿಗೆ ಹೆಣೆದುಕೊಂಡುವು.

ಸ್ಕ್ಲೊಡೊವ್‌ಸ್ಕಿ ಬೋಧಿಸುತ್ತಿದ್ದುದು, ಸಣ್ಣ ಹೈಸ್ಕೂಲೊಂದರಲ್ಲಿ. ಸಂಪಾದಿಸುತ್ತಿದ್ದ ಹಣ ಮನೆಯ ವೆಚ್ಚಕ್ಕೆ ಸಾಲುತ್ತಿರಲಿಲ್ಲ. ಇಂತಹ ಕಂಗೆಟ್ಟ ಸ್ಥಿತಿಯಲ್ಲಿಯೂ, ಅವನ ತೀವ್ರವಾದ ಬುದ್ಧಿಶಕ್ತಿ ಅವನನ್ನು ಸುಮ್ಮನೆ ಇರಗೊಡಿಸುತ್ತಿರಲಿಲ್ಲ. ವಿಜ್ಞಾನದಲ್ಲಿನ ಹೊಸ ಹೊಸ ಸಂಶೋಧನೆಗಳನ್ನೆಲ್ಲ ಅವನು ಓದಿ ಮನನ ಮಾಡಿಕೊಂಡಿದ್ದ. ಇತರ ಪರಭಾಷೆಗಳ ದೊಡ್ಡ ದೊಡ್ಡ ಗ್ರಂಥಗಳನ್ನು ಪೋಲಿಷ್ ಭಾಷೆಗೆ ಪರಿವರ್ತಿಸುತ್ತಿದ್ದ. ಪೋಲಿಷ್ ಭಾಷೆಯಲ್ಲಿ ಸ್ವತಃ ಪದ್ಯಗಳನ್ನೂ ರಚಿಸುತ್ತಿದ್ದ. ಇಷ್ಟೊಂದು ಪ್ರತಿಭೆ, ಸಾಮರ್ಥ್ಯಗಳಿದ್ದರೂ ಸ್ಕ್ಲೊಡೊವ್‌ಸ್ಕಿಗೆ ಹಣ ಸಂಪಾದನೆ ಮಾತ್ರ ಇರಲಿಲ್ಲ. ಸರಿಯಾದ ಸಂಪಾದನೆ ಇಲ್ಲದೆ ದುಡಿದು, ದುಡಿದು ಹಣ್ಣಾಗಿದ್ದ ಈ ಒರಟು ತಂದೆಯ ಹೃದಯ ಎಷ್ಟು ಮೃದುವಾದದ್ದೆಂದು ಮೇನ್ಯಳಿಗೆ ಗೊತ್ತಿತ್ತು. ಹೆಂಡತಿ ತನಗೆ ಒಪ್ಪಿಸಿ ಹೋಗಿದ್ದ ನಾಲ್ಕು ಮಕ್ಕಳನ್ನು ಸಾಕುವುದು ಅವನ ಬಾಳಿನ ಧ್ಯೇಯವಾಗಿ ಹೋಗಿತ್ತು.

ವರ್ಷಾನುಗಟ್ಟಲೆಯಿಂದ, ಪ್ರತಿ ಶನಿವಾರ ಈ ಸಂಸಾರದ ಐದು ಜನ ಸಾಯಂಕಾಲವನ್ನೆಲ್ಲ ಒಟ್ಟಿಗೆ ಕಳೆಯುವರು. ಎತ್ತರದಲ್ಲಿ ಕಟ್ಟಿರುವ ದೀಪದ ಕೆಳಗೆ ಗುಂಪಾಗಿ ಕುಳಿತ ಮೇಲೆ, ತಂದೆ, ಅನೇಕ ಸಾಹಿತ್ಯದ ಭಾಗಗಳನ್ನೆಲ್ಲ ಮಕ್ಕಳಿಗೆ ಓದಿ ಹೇಳುವನು. 'ಡೇವಿಡ್ ಕಾಪರ್ ಫೀಲ್ಡ್' ಮುಂತಾದ ಗ್ರಂಥಗಳ ಭಾಗಗಳನ್ನು ಪೋಲಿಷ್ ಭಾಷೆಯಲ್ಲಿ ತಡೆಯಿಡೆಯಿಲ್ಲದೆ, ಲೀಲಾ ಜಾಲವಾಗಿ ವರ್ಣಿಸಿ ಹೇಳುವನು. ತಮ್ಮ ಹೃದಯದಲ್ಲಿ ಅಕ್ಕರೆಯನ್ನು ಉಕ್ಕಿಸುವ ಆ ಧ್ವನಿಯನ್ನು ಮಕ್ಕಳು ಮುಗ್ಧರಾಗಿ ಮನಸೋತು ಆಲಿಸು ವರು. ಒಂದೊಂದು ವೇಳೆ ತಂದೆ ತನ್ನ ಮನಸ್ಸನ್ನು ಎಡೆಬಿಡದೆ ಹಿಂಸು-ತ್ತಿದ್ದ ಮಾತನ್ನು ತಡೆಯಲಾರದೆ ಹೇಳಿಬಿಡುವನು. 'ನಾನು ಆ ಹಣವನ್ನು ಹೇಗೆ ಕಳೆದುಕೊಂಡುಬಿಟ್ಟೆ? ನಿಮಗೆಲ್ಲ ಚೆನ್ನಾಗಿ ವಿದ್ಯೆ ಕಲಿಸಿ, ದೇಶ-ವಿದೇಶ ಗಳಲ್ಲೆಲ್ಲ ಸುತ್ತಿಸಬೇಕೆಂದಿದ್ದೆ. ಎಲ್ಲ ಹಾಳುಮಾಡಿಬಿಟ್ಟೆ. ಕೈಲಿ ಕಾಸಿಲ್ಲದೆ ನಿಮಗೇನೂ ಉಪಕಾರ ಮಾಡಲಾರೆ ಇಷ್ಟರಲ್ಲೇ ನೀವೇ ನನ್ನನ್ನು ಸಾಕ ಬೇಕಾಗುತ್ತದೆ ' ಇಷ್ಟು ಹೇಳಿ ಮುದುಕ ದೊಡ್ಡದಾಗಿ ನಿಟ್ಟುಸುರುಬಿಟ್ಟು ನಾಲ್ಕು ಎಳೆಯ ಮುಖಗಳ ಕಡೆಗೆ ನೋಡುವನು. ಪ್ರೀತಿಯನ್ನು ಹೊರ ಸೂಸುತ್ತ ಧೀರವಾಗಿ ತನ್ನ ಕಡೆಗೆ ಎತ್ತಿದ್ದ ಆ ಕಣ್ಣುಗಳಲ್ಲಿ ಒಂದೇ ಉತ್ತರ ಸ್ಪಷ್ಟವಾಗಿ ಹೊಳೆಯುವುದು. 'ನಾವಿನ್ನೂ ಚಿಕ್ಕವರು. ನಮಗೆ ಒಲವಿದೆ. ನಾವು ಎಲ್ಲದರಲ್ಲೂ ಯಶಸ್ವಿಗಳಾಗುತ್ತೇವೆ. '

ಸ್ಕ್ಲೊಡೊವ್‌ಸ್ಕಿಯ ದುಃಖ, ಚಿಂತೆಗಳು ಬುಡವಿಲ್ಲದವುಗಳಲ್ಲ. ಅವನಿಗೆ ಈಗ ಬರುತ್ತಿದ್ದ ಸಂಬಳ, ಮನೆ ಬಾಡಿಗೆ, ಮತ್ತು ಒಬ್ಬ ಆಳಿಗೆ ಸಂಬಳ ಕೊಟ್ಟ ಮೇಲೆ, ಮನೆಯವರ ಹೊಟ್ಟೆಗೇ ಸರಿಯಾಗಿ ಸಾಲುತ್ತಿರಲಿಲ್ಲ. ಇಷ್ಟರಲ್ಲೇ ಅವನ ಕೆಲಸ ಮುಗಿದು, ವಿಶ್ರಾಂತಿವೇತನ ಬರುವುದರಲ್ಲಿತ್ತು. ಇಂತಹ ಹೊಟ್ಟೆಗಿಲ್ಲದ ಸಂಕಟ ಒದಗಿ ಬಂದಾಗ, ಉಪಾಯವನ್ನೇನೂ ಕಷ್ಟಪಟ್ಟು ಹುಡುಕಬೇಕಾಗಿಲ್ಲ. ನಾಲ್ಕು ಮಕ್ಕಳೂ ತಮ್ಮ ಜೀವನಕ್ಕೆ ತಾವೇ ಸಂಪಾದಿಸಿಕೊಳ್ಳಬೇಕಾಯಿತು.

ಮೇನ್ಯ ಮನೆಮನೆಗೆ ಹೋಗಿ ಕಲಿಸುವ ಉದ್ಯೋಗವನ್ನು ಹಿಡಿದಳು. ಮಳೆ, ಗಾಳಿಯೆನ್ನದೆ ಮನೆಮನೆಗೆ ಅಲೆಯುವುದು, ಕೆಲವು ಮನೆಗಳಲ್ಲಿ ಯಜಮಾನಿಯರು ಹೇಳಿದಷ್ಟು ಹೊತ್ತು ಕಾಯುವುದು, ಪಾಠ ತಲೆಗೆ ಹತ್ತದ

ದಡ್ಡ ಶಿಷ್ಯೆಯರ ಮುಂದೆ ಪಾಠ ಒರಲುವುದು, ಈ ಮಧುರ ಪರಿಚಯಗಳೆಲ್ಲ, ಹದಿನೇಳು ವರ್ಷಗಳೂ ತುಂಬದ ಹುಡುಗಿಗೆ ಪೂರ್ತಿಯಾಗಿ ಆದುವು. ಕೆಲವರು ಕೊಡಬೇಕಾಗಿದ್ದ ಕೆಲವು ರೂಬಲ್‍ಗಳನ್ನು, ಏನು ಮಹಾ ಎಂಬಂತೆ, ಅಲಕ್ಷ್ಯದಿಂದ ಕೊಡದೆ ಮರೆತುಬಿಡುವರು. ಮೇನ್ಯ ಅದೇ ಹಣಕ್ಕೋಸ್ಕರ ತಿಂಗಳೆಲ್ಲ ಲೆಕ್ಕಹಾಕಿ ನಿರೀಕ್ಷಿಸುತ್ತಿರುವಳು.

ಈ ಅವಧಿಯಲ್ಲಿ ಮೇನ್ಯ, ಬ್ರೊನ್ಯ ಹೆಚ್ಚು ಒಂದಾದರು. ಅವರವರ ಮನಸ್ಸು ಹತ್ತಿರವಾಯಿತು. ತಾಯಿ ಹತ್ತು ವರ್ಷದ ಹುಡುಗಿಯನ್ನು ಅಗಲಿ ಹೊರಟುಹೋದಾಗಿನಿಂದ, ಮೇನ್ಯಳಿಗೆ ಹಿರಿಯಕ್ಕ ಬ್ರೊನ್ಯ ತಾಯಿಯಂತೆ ಇದ್ದಳು. ಅವರಿಬ್ಬರ ಸ್ವಭಾವವೂ ಹೊಂದಿಕೊಂಡು ಹೋಗಿತ್ತು. ಮನೆಯ ಮಕ್ಕಳಲ್ಲಿ ಈಗ ಇಬ್ಬರ ಚಿಂತೆ ಕಡಮೆಯಾಗಿತ್ತು. ಜೋಸೆಫ್ ಕೆಲವು ದಿನಗಳಲ್ಲಿ ಡಾಕ್ಟರ್ ಪರೀಕ್ಷೆ ಮುಗಿಸುವುದರಲ್ಲಿದ್ದ. ಹೆಲಾ ತುಂಬ ಚೆಲುವೆ. ಚೆನ್ನಾಗಿ ಹಾಡುತ್ತಿದ್ದಳು. ಅವಳನ್ನು ಮದುವೆಯಾಗಲು ಅನೇಕರು ಮುಂದೆ ಒರುತ್ತಿದ್ದರು. ಬ್ರೊನ್ಯ, ಮೇನ್ಯಳಂತೆ ಉಪಾಧ್ಯಾಯ ವೃತ್ತಿಯನ್ನೇನೋ ಕೈಗೊಂಡಿದ್ದಳು. ಆದರೆ ಪ್ಯಾರಿಸ್‍ಗೆ ಹೋಗಿ ಡಾಕ್ಟರ್ ಪರೀಕ್ಷೆಗೆ ಓದಬೇಕೆಂಬುದು ಅವಳಿಗಿದ್ದ ಆಸೆ. ಹಾಗೆ ಓದಲು ತಾನು ಕೂಡಿಟ್ಟಿದ್ದ ಹಣ ಸಾಲದೆಂಬುದು ಅವಳಿಗೆ ಗೊತ್ತಿತ್ತು. ಬ್ರೊನ್ಯ ತನ್ನ ಆಸೆಯನ್ನೆಲ್ಲ ಹೃದಯದಲ್ಲಿ ಹುದುಗಿಸಿಟ್ಟುಕೊಂಡು ತಳಮಳಪಡುತ್ತಿದ್ದಳು. ಮೇನ್ಯಳಿಗೆ ಅಕ್ಕನ ಚಿಂತೆ ಚೆನ್ನಾಗಿ ತಿಳಿದಿತ್ತು.

ಒಂದು ದಿನ ಅಕ್ಕ ಓದಲು ಆಗುವ ವೆಚ್ಚವನ್ನು ಕಾಗದದ ಮೇಲೆ ಗುರುತು ಹಾಕುತ್ತಿದ್ದಾಗ ಮೇನ್ಯ ಮಾತು ತೆಗೆದು ಒಂದು ಉಪಾಯ ಸೂಚಿಸಿದಳು.

'ನಾನು ಈಚೆಗೆ ಇದರ ವಿಷಯದಲ್ಲಿ ತುಂಬ ಯೋಚಿಸಿದ್ದೇನೆ. ಅಪ್ಪನೊಡನೆಯೂ ಮಾತಾಡಿದ್ದೇನೆ. ನನಗೆ ಒಂದು ತಕ್ಕ ದಾರಿ ಹೊಳೆದಿದೆ.'

ಬ್ರೊನ್ಯಳಿಗೆ ಇದನ್ನು ಕೇಳಿ ತುಂಬ ಆಶ್ಚರ್ಯವಾಯಿತು. ಮೇನ್ಯ ತಿರುಗಿ ಹೇಳಿದಳು.

'ನೀನು ಕೂಡಿಟ್ಟಿರುವ ಹಣದಲ್ಲಿ ನೀನು ಪ್ಯಾರಿಸ್‍ನಲ್ಲಿ ಎಷ್ಟುದಿನ ಕಳೆಯಬಹುದು ?'

ಬ್ರೊನ್ಯ ತಟಕ್ಕನೆ ಉತ್ತರ ಕೊಟ್ಟಳು.

' ಒಂದು ಸಲ ಪ್ರಯಾಣಕ್ಕಾಗಿ ಮೇಲೆ, ಒಂದು ವರ್ಷ ಅಲ್ಲಿರಲು ಆಗುವಷ್ಟು ಹಣ ನನ್ನಲ್ಲಿದೆ. ಆದರೇನು ಮೇನ್ಯ, ಮೆಡಿಕಲ್ ಪರೀಕ್ಷೆಗೆ ಓದಬೇಕಾದ್ದು ಐದು ವರ್ಷ. '

' ಬ್ರೊನ್ಯ, ಪಾಠ ಹೇಳಿ ನಾವು ಅಷ್ಟು ಹಣವನ್ನೂ ಸಂಪಾದಿಸುವುದಕ್ಕಾಗುವುದಿಲ್ಲ. ನಾವಿಬ್ಬರೂ ಒಂದು ಒಪ್ಪಂದಕ್ಕೆ ಬರೋಣ. ಮೊದಲು ನಿನ್ನ ಹಣವನ್ನೆಲ್ಲ ವೆಚ್ಚ ಮಾಡು. ಮುಂದೆ, ನಾನೂ ತಂದೆಯೂ ನಿನ್ನ ಓದಿಗೆ ಹಣ ಕಳುಹಿಸುತ್ತೇವೆ. ಅದೇ ಸಮಯದಲ್ಲಿ ನಾನು ನನ್ನ ಓದಿಗೂ ಹಣ ಕೂಡಿಸಿಡುತ್ತೇನೆ. ನೀನು ಡಾಕ್ಟರಾಗಿ ಬಂದ ಮೇಲೆ ಓದುವುದಕ್ಕೆ ನನ್ನ ಸರದಿ. '

ಬ್ರೊನ್ಯಳಿಗೆ ಪೂರ್ತಿ ಅರ್ಥವಾಗಲಿಲ್ಲ.

' ನನಗೂ ಕೊಟ್ಟು, ನಿನ್ನ ಜೀವನಕ್ಕೂ ಆಗಿ, ಇನ್ನೂ ಕೂಡಿಡುವಷ್ಟು, ನೀನು ಸಂಪಾದಿಸುವುದಕ್ಕಾಗುತ್ತದೆಯೇ ಮೇನ್ಯ ? '

ಮೇನ್ಯ ತಾನು ಮಾಡಿಕೊಂಡಿದ್ದ ನಿಶ್ಚಯವನ್ನು ಹೇಳಿದಳು.

' ನಾನು ಯಾರ ಮನೆಯಲ್ಲಾದರೂ, ಗವರ್ನೆಸ್ ಆಗಿ ಕೆಲಸ ಮಾಡುತ್ತೇನೆ. ಆಗ ಊಟ, ವಾಸ ಎಲ್ಲ ಅಲ್ಲೇ ಆಗಿ, ಜೊತೆಗೆ, ವರ್ಷಕ್ಕೆ ೪೦೦ ರೂಬಲ್‌ಗಳಷ್ಟು ಸಂಬಳವೂ ಬರುತ್ತದೆ. ಆಗ ಈ ಚಿಂತೆಗಳೆಲ್ಲ ಪರಿಹಾರವಾಗುತ್ತವೆ. '

' ಮೇನ್ಯ, ನನ್ನ ಪುಟ್ಟ ಮನ್ಯೂಸ್ಯ...... '

ಬ್ರೊನ್ಯಳಿಗೆ ತಂಗಿಯ ಮಾತು ಕೇಳಿ ಕಣ್ಣೀರು ಉಕ್ಕಿಬಂತು. ಆದರೆ ಬ್ರೊನ್ಯ, ಈ ಏರ್ಪಾಡಿಗೆ ಬೇಗ ಒಪ್ಪಿಕೊಳ್ಳಲಿಲ್ಲ. ಮೇನ್ಯ ತನಗಿಂತ ಬುದ್ಧಿವಂತೆ, ಅವಳೇ ಮೊದಲು ಹೋಗಲಿ ಎಂದು ಸೂಚಿಸಿದಳು. ಮೇನ್ಯ, ' ನೀನು ನನಗಿಂತ ದೊಡ್ಡವಳು, ನೀನೇ ಮೊದಲು ಹೋಗಬೇಕು. ಇಷ್ಟಕ್ಕೂ ನೀನು ಓದಿ ಮುಗಿಸಿ ಬಂದ ಮೇಲೆ, ಚಿನ್ನದ ರಾಶಿಯಲ್ಲಿ ನನ್ನನ್ನು ಮುಳುಗಿಸಬಲ್ಲೆ. ನಾನು ಅದನ್ನೇ ನಿರೀಕ್ಷಿಸುತ್ತಿರುತ್ತೇನೆ. ' ಎಂದು ಅಕ್ಕನ ಮಾತನ್ನು ಹಾರಿಸಿ ಮಾತಾಡಿಬಿಟ್ಟಳು. ಬ್ರೊನ್ಯ ಮೊದಲು ಹೋಗಬೇಕೆಂದು ನಿರ್ಧಾರವಾಯಿತು. ಹೀಗೆ ಅಕ್ಕನನ್ನು ಓದಲು ಹೋಗಗೊಟ್ಟು

ತಾನು ಅವಳಿಗೋಸ್ಕರ ದುಡಿಯುವುದರಲ್ಲಿ ಮೇನ್ಯ ಎಂತಹ ತ್ಯಾಗ ಮಾಡಿ ತೋರಿಸಿದ್ದಳೆಂಬುದು ಅವಳೊಬ್ಬಳಿಗೇ ಗೊತ್ತು. ಯಾವ ದಿನ ಪದಕ ತೆಗೆದುಕೊಂಡು ಹೈಸ್ಕೂಲಿನಿಂದ ಮನೆಗೆ ಬಂದಳೋ, ಆ ದಿನದಿಂದ ವಿಶ್ವ-ವಿದ್ಯಾಲಯದಲ್ಲಿ ಓದಬೇಕೆಂಬುದು, ಮೇನ್ಯಳ ಕನಸು. ಪ್ಯಾರಿಸ್‌ಗೆ ಪ್ರಯಾಣಮಾಡಿ, ಅಲ್ಲಿ ಓದಿ, ಜ್ಞಾನವನ್ನು ಸೂರೆಗೊಳ್ಳಬೇಕೆಂದು ಅವಳ ಮನಸ್ಸು ಹಾತೊರೆಯುತ್ತಿತ್ತು.

ತನ್ನ ಹೃದಯದ ಆಸೆಯನ್ನೆಲ್ಲ ಅಡಗಿಸಿಟ್ಟುಕೊಂಡು ಮೇನ್ಯ ಗವರ್ನೆಸ್ ಆಗಿ ಕೆಲಸ ಮಾಡಲು ಹೊರಟಳು.

—

ಅಧ್ಯಾಯ ಐದು

## ಗವರ್ನೆಸ್



ಮೇನ್ಯ, ಅಕ್ಕನಿಗೆ ಸಹಾಯ ಮಾಡುವ ಉತ್ಸಾಹದಲ್ಲಿ ವಹಿಸಿಕೊಂಡ ಕೆಲಸ ಅವಳು ಊಹಿಸಿದ್ದಷ್ಟು ಸುಲಭವಾಗಿರಲಿಲ್ಲ. ದೀರ್ಘವಾದ ಮೂರು ವರ್ಷಗಳ ಅವಧಿಯಲ್ಲಿ ಮೇನ್ಯ ತನಗೆ ಒದಗಿದ ಕೆಲವು ಸನ್ನಿವೇಶಗಳನ್ನು, ತನ್ನ ಬಾಳಿನಲ್ಲೆಲ್ಲ ಅತಿ ಕ್ರೂರವಾದವುಗಳೆಂದು ಭಾವಿಸಿಕೊಂಡಳು. ತನ್ನ ಸುತ್ತಮುತ್ತಲಿನ ಬಂಧುಗಳಲ್ಲದೆ ಇತರರಲ್ಲಿ ಬೆರೆತು ಅವಳಿಗೆ ಅನುಭವವಿರಲಿಲ್ಲ. ಜನ ತಮ್ಮಂತೆಯೇ ಗೌರವಸ್ಥರಾಗಿ, ಸತ್ಯವಂತರಾಗಿರುತ್ತಾರೆಂಬ ಅವಳ ಭಾವನೆಯೆಲ್ಲ, ಕೆಲವು ದಿನಗಳಲ್ಲಿಯೇ ಚೂರು ಚೂರಾಗಿ ಸಿಡಿದು ಹೋಯಿತು. ಗವರ್ನೆಸ್ ಆಗಿ ಮೇನ್ಯ ಮೊದಲು ಹೊಕ್ಕಿದ್ದು ಒಬ್ಬ ವಕೀಲರ ಮನೆ. ತನ್ನ ಚಿಕ್ಕಮ್ಮನ ಮಗಳಿಗೆ ಕಾಗದ ಬರೆಯುತ್ತ ಆ ಮನೆಯನ್ನು ಮೇನ್ಯ ಹೀಗೆ ವರ್ಣಿಸುತ್ತಾಳೆ. 'ನಾನು ಮನಮುಟ್ಟಿ ದ್ವೇಷಿಸುವ ಶತ್ರು ಕೂಡ ಆ ಮನೆಯಲ್ಲಿರಲೆಂದು ನಾನು ಹಾರೈಸುವದಿಲ್ಲ.....ನಮಗೆ ಎಲ್ಲೆ

ಲ್ಲಿಯೂ ಕಾಣುವ ಶ್ರೀಮಂತರ ಮನೆಗಳಲ್ಲಿ ಅದೂ ಒಂದು ಮನೆಗೆ ಬಂದ ಅತಿಥಿಗಳ ಮುಂದೆ ಅವರು ಮಾತಾಡುವದು ಶುದ್ಧ ತಪ್ಪಾದ ಫ್ರೆಂಚ್ ಭಾಷೆಯಲ್ಲಿ. ಆರಾರು ತಿಂಗಳಾದರೂ, ಕೊಡಬೇಕಾದ ದುಡ್ಡನ್ನು ಅವರು ಕೊಡುವುದಿಲ್ಲ. ಬೇಡದ್ದಕ್ಕೆಲ್ಲ ಧಾರಾಳವಾಗಿ ಹಣವನ್ನು ನೀರಿಗೆಸೆದರೂ, ಕ್ಷುದ್ರವಾದ ವಿಷಯಗಳಲ್ಲಿ ಮಹಾ ಒಪ್ಪ ಮಾಡುವರು. ಬೆಣ್ಣೆಯ ಹಾಗೆ ನವಿರಾದ ರೀತಿಯಲ್ಲಿ ಮಾತಾಡಿದರೂ, ಯಾವ ಮಾನವನ್ನೂ ಉಳಿಸದ ನೀಚ ಶಬ್ದಗಳೆಲ್ಲ ಅವರ ಮಾತಿನಲ್ಲಿ ಧಾರಾಳವಾಗಿ ಬರುತ್ತವೆ.....ಇಲ್ಲಿ ಬಂದ ಮೇಲೆ, ಕಾದಂಬರಿಯಲ್ಲಿ ಸೃಷ್ಟಿಯಾಗಿರುವ ಪಾತ್ರಗಳು ಬಾಳಿನಲ್ಲಿ ನಿಜವಾಗಿ ಇರುತ್ತವೆಂದು ನಾನು ತಿಳಿದೆ.

ಇಂತಹ ಮನೆಯಲ್ಲಿ ಮೇನ್ಯ ಹೆಚ್ಚು ದಿನ ಇರುವುದು ಸಾಧ್ಯವಿರಲಿಲ್ಲ. ಜನ ಮೂರ್ಖರೂ, ದಡ್ಡರೂ ಆದರೆ ಸಹಿಸಬಹುದು. ಆದರೆ ಹೀಗೆ ನೀಚರಾದರೆ, ಸ್ಕ್ಲೊಡೊವ್ಸ್ಕಿಯಂತಹ ತಂದೆಯ ಮಗಳು ಮೇನ್ಯ ಅದನ್ನು ಹೇಗೆ ಸರಿಹೋಗಿಸಿಕೊಳ್ಳಬಲ್ಲಳು? ಜನರ ಜೊತೆಯಲ್ಲಿ ಬೆರೆತಹಾಗೆಲ್ಲ, ಅವಳಿಗೆ ತನ್ನ ಬುದ್ಧಿಯ ಮಟ್ಟ ಎಲ್ಲಿದೆ, ತಂದೆ ತನಗೆ ಕೊಟ್ಟ ಶಿಕ್ಷಣ ತನಗೆ ಎಂತಹ ಸಂಸ್ಕಾರವನ್ನು ಹೊಂದಿಸಿಕೊಟ್ಟಿದೆ ಎಂಬುದು ತಿಳಿಯುತ್ತ ಬಂತು. ಮನೆಯಲ್ಲಿ, ಪ್ರತಿಭಾವಂತರಾದ, ನಾಲ್ಕು ಮಕ್ಕಳಲ್ಲಿ ಕಿರಿಯ ಹುಡುಗಿ ಮೇನ್ಯಳಿಗೇನೂ ಹೆಚ್ಚು ಪ್ರಾಶಸ್ತ್ಯವಿರಲಿಲ್ಲ. ಎಲ್ಲರೂ ಇಟ್ಟ ಪ್ರತಿಯೊಂದು ಹೆಜ್ಜೆಯಲ್ಲಿಯೂ, ಓರಗೆಯವರನ್ನು ಹಿಂದೆ ಹಾಕಿದ ಮೇಧಾವಿಗಳು! ತನ್ನ ಪುಟ್ಟ ಮೇನ್ಯಳ ಬುದ್ಧಿಶಕ್ತಿ ಇತರ ಮಕ್ಕಳಿಗಿಂತ ಹೆಚ್ಚಾಗಿ ಜ್ಯೋತಿಯಂತೆ ಉರಿಯುತ್ತಿದೆಯೆಂದು ತಂದೆಗೂ ತಿಳಿದಿರಲಿಲ್ಲ. ಮೇನ್ಯಳಂತೂ, ತನ್ನ ಮನೆಯವರೊಡನಿದ್ದಾಗ, ಬಹಳ ದೈನ್ಯದಿಂದ ವರ್ತಿಸುತ್ತಿದ್ದಳು. ಆದರೆ ಶ್ರೀಮಂತರೆನಿಸಿಕೊಂಡು, ತನ್ನಿಂದ ಸೇವೆ ಕೈಕೊಳ್ಳುತ್ತಿದ್ದ ಜನರೊಡನೆ ತನ್ನನ್ನು ಹೋಲಿಸಿಕೊಂಡು ನೋಡುತ್ತಿದ್ದಾಗ, ಅವಳಿಗೆ ತನ್ನ ಸಂಸ್ಕೃತಿ ಎಷ್ಟು ಮೇಲಿನ ಮಟ್ಟದ್ದು ಎಂದು ಹೊಳೆಯುತ್ತ ಬಂತು.

ವಾರ್ಸಾದಲ್ಲೇ ಇದ್ದುಕೊಂಡು ಕೆಲಸ ಮಾಡುತ್ತ ಹಣ ಸಂಪಾದಿಸಬಹುದೆಂದು ಮೇನ್ಯ ನಂಬಿದ್ದಳು. ಒಂದೇ ಕಡೆಯಲ್ಲಿರುವುದರಿಂದ ತಂದೆಯನ್ನು ಪ್ರತಿದಿನವೂ ನೋಡಬಹುದಾಗಿತ್ತು. ಆದರೆ ದೊಡ್ಡ ಪಟ್ಟಣದಲ್ಲಿ

ಅವಳು ಸಂಪಾದಿಸಿದ ಹಣವೆಲ್ಲ ವೆಚ್ಚವಾಗಿಯೇ ಹೋಗುತ್ತಿತ್ತು. ಬ್ರೊನ್ಸ್ಟ ಪ್ಯಾರಿಸ್‌ದಲ್ಲಿ ಬಡತನದ ಬಾಳು ಹೊರೆಯುತ್ತ ತಲ್ಲಣಪಡುತ್ತಿದ್ದಳು. ತಂದೆಗೆ ಕೆಲಸದ ಅವಧಿ ಮುಗಿದು ವಿಶ್ರಾಂತಿವೇತನ ಬರುವುದರಲ್ಲಿತ್ತು. ಕೆಲವೇ ವಾರಗಳ ಹಿಂದೆ ಹಳ್ಳಿಯ ಕಡೆಯಿಂದ ತನ್ನ ಗಮನಕ್ಕೆ ಬಂದಿದ್ದ ಹೆಚ್ಚು ಸಂಬಳದ ಕೆಲಸವೊಂದನ್ನು, ತಂದೆಯನ್ನು ಬಿಟ್ಟು ಹೋಗಬೇಕಾದೀತೆಂದು, ಮೇನ್ಸ್ ನಿರಾಕರಿಸಿದ್ದಳು. ಈಗ ತನ್ನ ಪ್ರಿಯ ಅಕ್ಕ ಬ್ರೊನ್ಸ್ಟಳನ್ನು ನೆನಸಿಕೊಂಡು, ಅವಳು ಆ ಕೆಲಸಕ್ಕೆ ಒಪ್ಪಿಕೊಂಡಳು. ಹಳ್ಳಿಯಲ್ಲಾದರೆ ವೆಚ್ಚವೂ ಕಡಮೆಯಾಗುತ್ತದೆ ಎಂಬ ನಂಬಿಕೆಯೂ ಇತ್ತು.

೧೮೮೬ನೇ ಜನವರಿ ಮೊದಲ ದಿನ ಹದಿನೆಂಟು ವರ್ಷದ ಮೇನ್ಸ್ ಮುದುಕ ತಂದೆಯನ್ನು ಹಿಂದೆ ಬಿಟ್ಟು, ಕೊರೆಯುವ ಚಳಿಯಲ್ಲಿ ತನ್ನ ಕೆಲಸಕ್ಕೋಸ್ಕರ ಹೊರಟಳು. ದೃಢಮನಸ್ಸಿನಿಂದ ತಂದೆಯನ್ನು ಬೀಳ್ಕೊಂಡು ರೈಲುಗಾಡಿ ಏರಿದಳು. ಒತ್ತಿಒರುತ್ತಿದ್ದ ಅಳುವನ್ನು ತಡೆದುಕೊಂಡು ತಂದೆಯನ್ನು ನೋಡಿ ಮೃದುವಾಗಿ ನಕ್ಕಳು. ಗಾಡಿ ಹೊರಟು ತಂದೆಯ ಆಕೃತಿ ಮರೆಯಾದ ಕೂಡಲೆ, ಮೇನ್ಸ್ಯಳಿಗೆ ದುಃಖ, ನಿರಾಶೆಗಳು ಹೃದಯವನ್ನೆಲ್ಲ ತುಂಬಿದುವು. ಹುಚ್ಚುಹುಚ್ಚು ಭಾವನೆಗಳೆಲ್ಲ ಅವಳನ್ನು ಹೆದರಿಸಿ ನಡುಗಿಸಿದುವು. ಈಗ ಸಿಕ್ಕಿರುವ ಹೊಸ ಮನೆಯು ಹಿಂದಿನ ಮನೆಗಳಂತೆ ಆದರೆ? ತಾನು ಇಲ್ಲದಾಗ ತಂದೆ ಖಾಯಿಲೆ ಬಿದ್ದರೆ? ತಿರುಗಿ ತನ್ನ ಮುದುಕ ತಂದೆಯನ್ನು ನೋಡುವುದಕ್ಕೇ ಆಗದೆ ಹೋದರೆ? ಅಳು ಉಕ್ಕಿ ಉಕ್ಕಿ ಬಂತು. ಕಣ್ಣೊರಸಿಕೊಂಡಷ್ಟೂ ಒತ್ತಿ ಒತ್ತಿ ಬರುತ್ತಿತ್ತು.

ಪ್ರಯಾಣದ ಆಯಾಸದಿಂದಲೂ, ಮನಸ್ಸಿನ ಉದ್ವೇಗದಿಂದಲೂ ಜರ್ಝರಿತಳಾಗಿ ಮೇನ್ಸ್ಯ, ಹಳ್ಳಿಯ ಮನೆಯನ್ನು ತಲುಪಿದಳು.

ಮನೆಯ ಯಜಮಾನ ಯಜಮಾನಿಯರು ತುಂಬ ಶ್ರೀಮಂತರಲ್ಲದಿದ್ದರೂ ಒಳ್ಳೆಯ ಜನ. ಮನೆಯಲ್ಲಿ ಮಕ್ಕಳ ಒಂದು ತಂಡವೇ ಇತ್ತು. ಮೂರು ಹಿರಿಯ ಗಂಡುಮಕ್ಕಳು ಹೊರಗೆ ಓದುತ್ತಿದ್ದರು. ಹಿರಿಯ ಹುಡುಗಿ ಬ್ರೊಂಕ ಮೇನ್ಸ್ಯಳ ಜೊತೆಯ ವಯಸ್ಸಿನವಳು. ಅವರಿಬ್ಬರಲ್ಲಿಯೂ ಸ್ನೇಹ ಬೆಳೆದು ಬಂತು.

ಒಂದು ದಿನ ಬೀದಿಯಲ್ಲಿ ಕೊಳಕಾದ ರೈತರ ಹುಡುಗರ ಒಂದು ತಂಡವನ್ನು ನೋಡಿದಾಗ, ಮೇನ್ಯಳಿಗೆ ಒಂದು ಯೋಚನೆ ಹೊಳೆಯಿತು. ತಮ್ಮ ಸ್ವಂತ ಭಾಷೆಯನ್ನು ಓದಲು, ಬರೆಯಲು ತಿಳಿಯದ ಈ ಪೋಲಿಷ್ ಹುಡುಗರಿಗೆ ಓದು ಕಲಿಸೋಣವೆಂದು, ಅವಳು ಬ್ರೊಂಕಳೊಡನೆ ಪ್ರಸ್ತಾಪಿಸಿದಳು. ಇದು ಸರ್ಕಾರಕ್ಕೆ ತಿಳಿದರೆ ಸೈಬೀರಿಯಾದ ಮಂಜನ್ನು ಕಾಣಬೇಕಾದೀತೆಂದು ತಿಳಿದಿದ್ದರೂ ಬ್ರೊಂಕ ಇದಕ್ಕೆ ಒಪ್ಪಿಕೊಂಡಳು. ಇವರಿಬ್ಬರೂ ಸೇರಿ ಹತ್ತು ಹದಿನೈದು ಹುಡುಗರಿಗೆ ಪೋಲಿಷ್ ಭಾಷೆಯನ್ನು ಓದಲು ಕಲಿಸಿಕೊಟ್ಟರು.

ದಿನ ಕಳೆಯುತ್ತ ಹೋದಂತೆ ಮೇನ್ಯಳ ಹೃದಯದ ಕಳವಳ ಹೆಚ್ಚುತ್ತ ಬಂದಿತು. ತಾನು ಇಲ್ಲಿ ಗವರ್ನೆಸ್ ಆಗಿ ದುಡಿಯುತ್ತಿರುವ ಸಮಯದಲ್ಲಿಯೇ ಸಾವಿರಾರು ವಿದ್ಯಾರ್ಥಿಗಳು ವಿಶ್ವವಿದ್ಯಾಲಯದಲ್ಲಿ ಸೇರಿ ಓದುತ್ತಿರುವರಲ್ಲವೆ? ಪ್ರಯೋಗಶಾಲೆಗಳಲ್ಲಿ ಕೆಲಸಮಾಡುತ್ತಿರುವರಲ್ಲವೆ? ಗಣಿತ, ಭೌತಶಾಸ್ತ್ರ, ರಸಾಯನಶಾಸ್ತ್ರ ಇವುಗಳಲ್ಲಿ ಪ್ರೌಢವಾದ ಭಾಷಣಗಳನ್ನು ಕೇಳುತ್ತಿರುವ ಅವರ ಭಾಗ್ಯ ಎಷ್ಟಿರಬಹುದು? ಪ್ಯಾರಿಸ್‌ಗೆ ಹೋಗಿ ಓದಬೇಕೆಂಬುದು ತನ್ನ ಮನಸ್ಸನ್ನು ಎಡಬಿಡದೆ ಕೊರೆಯುತ್ತಿದ್ದ ಆಸೆ. ಈ ಹಳ್ಳಿಯ ವಾಸ, ಈ ದುಡಿತ, ಬಾಳಿನ ನೀರಸವಾದ ಈ ವ್ಯವಹಾರ, ಇವೆಲ್ಲವುಗಳಿಂದ ಒಂದೇ ಸಲ ತಪ್ಪಿಸಿಕೊಂಡು, ತನ್ನ ಮನಸ್ಸನ್ನು ಸೆಳೆದು ಮೋಹಿಸುತ್ತಿದ್ದ ವಿಶ್ವವಿದ್ಯಾಲಯವನ್ನು ತನ್ನ ಬಾಳಿನಲ್ಲಿ ಎಂದಾದರೂ ಒಂದು ದಿನ ಕಾಣುವುದು ಸಾಧ್ಯವೇ? ಈ ಚಿಂತೆಗಳೆಲ್ಲ ಮೇನ್ಯಳ ಮನಸ್ಸನ್ನು ಕೊರೆಯುತ್ತಿದ್ದಂತೆಯೇ, ತನ್ನ ಬಾಳಿನ ದುಃಖಪೂರಿತವಾದ ಪರಿಸ್ಥಿತಿ ಅವಳಿಗೆ ಸ್ಪಷ್ಟವಾಗಿ ಹೊಳೆದು ತೋರುತ್ತಿತ್ತು. ವಾರ್ಸಾದಲ್ಲಿ ಮುದುಕ ತಂದೆ ತನಗಾಗಿ ಕಾಯುತ್ತಿದ್ದಾನೆ. ಪ್ಯಾರಿಸ್‌ನಲ್ಲಿ ಬ್ರೊನ್ಯ ಬಡತನದಿಂದ ತೊಳಲುತ್ತಿದ್ದಾಳೆ. ಅವಳಿನ್ನೂ ವರ್ಷಾನುಗಟ್ಟಲೆ ಓದಬೇಕು. ತಾನು ದುಡಿದು ಹಣ, ರಾಶಿ ಹಾಕುತ್ತೇನೆಂಬ ತನ್ನ ಭಾವನೆಯನ್ನು ನೆನಸಿಕೊಂಡರೆ ಅವಳಿಗೇ ನಗು ಬರುತ್ತಿತ್ತು. ಇಂತಹ ಸಮಯದಲ್ಲಿ ಹಳ್ಳಿಯಿಂದ ತಪ್ಪಿಸಿಕೊಂಡು ಹೋಗುವುದು ಎಂದಿಗಾದರೂ ಸಾಧ್ಯವೇ? ಗವರ್ನೆಸ್ ಆಗಿ ಹೊಟ್ಟೆ ಹೊರೆಯುವುದಕ್ಕಿಂತ ಹೆಚ್ಚಾಗಿ ತನ್ನ ಬಾಳಿನಲ್ಲಿ ಇನ್ನೇನೂ ಸಾಧಿ

ಸುವುದಕ್ಕೆ ಸ್ವಾಧ್ಯವಿರಲಿಲ್ಲ. ಇಂತಹ ಚಿಂತೆಗಳು ಕಾಡುತ್ತಿದ್ದಾಗ ಮೇರ್ನ್ಯ ದುಃಖದಿಂದ ಕುಸಿದು ಹೋಗುತ್ತಿದ್ದಳು.

ಮೇರ್ನ್ಯ, ಸಂಪಾದಿಸುವ ಹಣಕ್ಕೋಸ್ಕರ ಬಿಡುವಿಲ್ಲದೆ ದುಡಿಯ ಬೇಕಾಗುತ್ತಿತ್ತು. ಬೆಳಿಗ್ಗೆ ೮ ರಿಂದ ೧೧ರ ವರೆಗೆ, ಮಧ್ಯಾನ್ಹ ೨ ರಿಂದ ೭ರ ವರೆಗೆ ಅವಿಚ್ಛಿನ್ನವಾಗಿ ಕೆಲಸ ಇರುತ್ತಿತ್ತು. ಹುಡುಗರಿಗೆ ಪಾಠ ಹೇಳಿಕೊಡುವುದಂತೂ ಮೈ ಪರಚಿಕೊಳ್ಳುವಂತಹ ಕೆಲಸ. ಮೇರ್ನ್ಯ ಅಣ್ಣ ನಿಗೆ ಬರೆದ ಕಾಗದದಲ್ಲಿ ಅದರ ವಿಷಯವಾಗಿ ಹೀಗೆ ಬರೆದಳು. ' ಅವರಿಗೆ ಪಾಠ ಹೇಳುವುದೆಂದರೆ ಮರಳಿನಲ್ಲಿ ಮನೆಕಟ್ಟಿದ ಹಾಗೆ. ಒಂದು ವಿಷಯ ಕಲಿಯುವ ಹೊತ್ತಿಗೆ ಹಿಂದಿನ ದಿನದ ಪಾಠ ಅವರು ಪೂರ್ತಿಯಾಗಿ ಮರೆತು ಬಿಟ್ಟಿರುತ್ತಾರೆ. ಕೆಲವು ಸಲ ಇದು ನನಗೆ ಅಸಾಧ್ಯ ವೇದನೆಯನ್ನುಂಟು ಮಾಡುತ್ತದೆ. '

ಇಷ್ಟೆಲ್ಲ ನೋವು ಮೇರ್ನ್ಯಳ ಮನಸ್ಸನ್ನು ಹಿಂಡುತ್ತಿರುವಾಗಲೇ, ಅವಳ ಹೃದಯಕ್ಕೆ ಬರೆ ಕೊಡುವ ಇನ್ನೊಂದು ಘಟನೆಯೂ ನಡೆಯಿತು. ಮನೆಯ ಹಿರಿಯ ಮಗ ಕ್ಯಾಸಿಮಿರ್, ವಿಶ್ವವಿದ್ಯಾಲಯದಲ್ಲಿ ಓದುತ್ತಿದ್ದ ವನು ಮನೆಗೆ ಬಂದ. ಮನೆಯಲ್ಲಿ ಸುಂದರವಾದ, ಅಸಾಧಾರಣವಾದ, ಹುಡುಗಿಯೊಬ್ಬಳು ಗವರ್ನೆಸ್ ಕೆಲಸದಲ್ಲಿರುವುದನ್ನು ನೋಡಿದ ಮೇಲೆ, ಅವಳನ್ನು ಮೆಚ್ಚಿಕೊಂಡ. ತನ್ನ ಶಕ್ತಿಪೂರ್ಣವಾದ ಧ್ಯೇಯ, ಅಭಿಪ್ರಾಯ ಗಳ ಕೆಳಗೆ ದುರ್ಬಲವಾದ ಹೆಣ್ಣುಹೃದಯವನ್ನು ಅಡಗಿಸಿಕೊಂಡಿದ್ದ ಮೇರ್ನ್ಯ, ಅವನನ್ನು ಮದುವೆಯಾಗುವುದಾಗಿ ಒಪ್ಪಿಕೊಂಡಳು. ಈ ಮದು ವೆಗೆ ಅಡ್ಡಿಯೇನೂ ಇಲ್ಲವೆಂದು ಇಬ್ಬರಿಗೂ ನಂಬಿಕೆಯಿತ್ತು. ಮನೆಯಲ್ಲಿ ಸೇವೆ ಮಾಡುವವಳಾದರೂ ಮೇರ್ನ್ಯಳನ್ನು ಮನೆಯವರೆಲ್ಲ ಅಸಾಧಾರಣ ಗೌರವ ಆದರಗಳಿಂದ ಕಾಣುತ್ತಿದ್ದರು. ಕ್ಯಾಸಿಮಿರ್, ತಂದೆ ತಾಯಿಗಳ ಮುಂದೆ ಧೈರ್ಯದಿಂದ ಈ ವಿಷಯ ಪ್ರಸ್ತಾಪಿಸಿದ. ಎಲ್ಲರೂ ನಿರೀಕ್ಷಿಸ ಬಹುದಾದಕ್ಕಿಂತ ಹೆಚ್ಚಿನದೇನೂ ನಡೆಯಲಿಲ್ಲ. ತಂದೆ ಕೋಪದಿಂದ ಉರಿದು ಬಿದ್ದ, ತಾಯಿ ಮೂರ್ಛೆಹೋಗುವುದೊಂದು ಬಾಕಿ. ನಾಳೆಯೆಂದರೆ ಐಶ್ವರ್ಯವಂತರ ಹುಡುಗಿಯನ್ನು ಮದುವೆಯಾಗಬಹುದಾದ ತಮ್ಮ ಹಿರಿಯ ಹುಡುಗ ಹೀಗೆ ಮದುವೆಯಾಗುವುದೆ? ಒಂದು ಕಾಸಿಗೆ ಗತಿಯಿಲ್ಲದೆ ಇತ

ರರ ಮನೆಯಲ್ಲಿ ದುಡಿಯುವ ಹುಡುಗಿಯನ್ನು ಶ್ರೀಮಂತರು ಮದುವೆಯಾಗ ಬಹುದೇ? ಎಷ್ಟೋ ಬೋಧನೆ ಬೈಗಳಗಳಾದ ಮೇಲೆ ಕ್ಯಾಸಿಮಿರ್ ಆ ಸುದ್ದಿಯನ್ನೇ ಬಿಟ್ಟ. ತಮ್ಮ ಹೆಮ್ಮೆಗೋಸ್ಕರ ಮನೆಯ ಕೆಲಸದವಳಿಗೆ, ಯಜಮಾನ ಯಜಮಾನಿಯರು ತೋರಿಸುತ್ತಿದ್ದ, ಅದರ ಕರುಣೆಗಳು ಆವಿಯಾಗಿ ಹೋದುವು.

ಈ ದುಃಖದ ನೋಪಸಿಂದ ಮೇನ್ಯ ಹಿಂಡಿಹೋದಳು. ದುಃಖ,ಕೋಪ, ಅಪಮಾನಗಳನ್ನು ತುಂಬಿಕೊಂಡು ಅವಳ ಹೃದಯ ಕಿಡಿ ಕಾರಿತು. ತನಗಿಂತ ಎಷ್ಟೋ ವಿಧದಲ್ಲಿ ಕೀಳಾದವರಿಂದ ಹೀಗೆ ಅವಮಾನಗೊಂಡದ್ದನ್ನು ಸಹಿಸಲಾರದೆ ಅವಳು ಕುಗ್ಗಿಹೋದಳು. ಇಂತಹ ಸಂಕಟಕ್ಕೆ ಇನ್ನೆಂದಿಗೂ ಸಿಕ್ಕುವುದಿಲ್ಲವೆಂದು ಪ್ರತಿಜ್ಞೆಮಾಡಿಕೊಂಡಳು. ಈ ಒಣ ಶ್ರೀಮಂತರ ಮನೆಯಿಂದ ತಪ್ಪಿಸಿಕೊಂಡು ಹೋಗಬೇಕೆಂದು ಅವಳ ಮನಸ್ಸು ಹಾತೊರೆಯಿತು. ಆದರೆ ತಂದೆಗೋಸ್ಕರ, ಅಕ್ಕನಿಗೋಸ್ಕರ ಮೇನ್ಯ ಎಲ್ಲವನ್ನೂ ಉಸಿರೆತ್ತದೆ ನುಂಗಿದಳು. ಮುದುಕ ತಂದೆಗೆ ಇಲ್ಲದ ಈ ಹಿಂಸೆಯನ್ನು ಹಚ್ಚಿಡುವುದರಿಂದ ಏನು ಪ್ರಯೋಜನ? ಇಂತಹ ಹೆಚ್ಚು ಸಂಬಳದ ಕೆಲಸ ಬಿಟ್ಟುಬಿಟ್ಟರೆ ತನ್ನನ್ನೇ ನಂಬಿರುವ ಅಕ್ಕನ ಪಾಡೇನಾಗಬೇಕು? ಇದನ್ನೆಲ್ಲ ನೆನೆದು ಮೇನ್ಯ ತನ್ನನ್ನು ಕಾಡಿಸುತ್ತಿದ್ದ ಚಿಂತೆ, ಕೋಪಗಳೆಲ್ಲ ತನ್ನದಲ್ಲವೇನೋ ಎಂಬಂತೆ ಒದರಿ ಕೊಡವಿಬಿಟ್ಟಳು. ಆದ ತಲ್ಲಣವನ್ನೆಲ್ಲ ಒಚ್ಚಿಟ್ಟುಕೊಂಡಳು. ಆದರೂ, ಎಷ್ಟು ಪ್ರಯತ್ನಪಟ್ಟರೂ, ಈ ಸಂಕಟಗಳಿಂದ ಮೇನ್ಯ ತತ್ತರಿಸಿ ಹೋದಳು. ತನ್ನ ಚಿಕ್ಕಮ್ಮನ ಮಗಳು ಹೆನ್ರಿಯಟ್ಟಳಿಗೆ ಬರೆದ ಕಾಗದದಲ್ಲಿ ಅವಳು ಅದನ್ನು ಒಪ್ಪಿಕೊಂಡಿದ್ದಾಳೆ. 'ನನ್ನ ಭವಿಷ್ಯದ ಯೋಜನೆಗಳೆ? ಒಂದೂ ಇಲ್ಲ. ಇದ್ದರೂ, ಅತ್ಯಂತ ಸಾಧಾರಣವಾದುವುಗಳು, ಹೇಳಿಸಿಕೊಳ್ಳತಕ್ಕಂತಹವಲ್ಲ. ಆದಷ್ಟು ಪ್ರಯತ್ನಪಟ್ಟು ಯಶಸ್ವಿಯಾಗಲು ನೋಡುತ್ತೇನೆ. ಆಗದೆ ಹೋದರೆ, ಈ ನೀಚವಾದ ಪ್ರಪಂಚವನ್ನು ಒಂದೇ ಸಲ ಬಿಟ್ಟು ಹೊರಟುಹೋಗುತ್ತೇನೆ...'

ಇನ್ನೊಂದು ಕಾಗದದಲ್ಲಿ ಮೇನ್ಯ ಹೀಗೆ ಬರೆಯುತ್ತಾಳೆ. 'ಈ ಕ್ಷಣದಲ್ಲಿ ನನ್ನ ಭವಿಷ್ಯದ ಆಶೆ ಆಕಾಂಕ್ಷೆಗಳೆಲ್ಲ ಇಷ್ಟೇ. ನನ್ನ ಸ್ವಂತ ಗುಡಿಸಿಲೊಂದರಲ್ಲಿ ತಂದೆಯ ಜೊತೆಯಲ್ಲಿ ವಾಸಮಾಡಬೇಕು. ತಂದೆ ನಾನಿಲ್ಲದೆ

ತಲ್ಲಣಪಡುತ್ತಾನೆ. ತನ್ನ ಜೊತೆಯಲ್ಲಿ ನಾನಿರಬೇಕೆಂದು ಆಶಿಸುತ್ತಾನೆ. ನನಗೋಸ್ಕರ ಹಾತೊರೆಯುತ್ತಾನೆ. ಇರುವುದಕ್ಕೊಂದು ಸ್ಥಳ, ಸ್ವಾತಂತ್ರ್ಯ ಇವೆರಡಕ್ಕೋಸ್ಕರ ನನ್ನ ಅರ್ಧ ಜೀವಮಾನವನ್ನಾದರೂ ಕೊಟ್ಟೇನು..' ನನಗೆ ಬೇಕಾದ್ದೆಲ್ಲ ಇಷ್ಟೇ. ಬಾಳು ಚಿಂತೆ ಮಾಡಿ ನರಳುವಷ್ಟು ದೊಡ್ಡ ವಿಷಯವಲ್ಲ!'

ಇಂತಹ ನಿರಾಶೆಗೆ ಮೇನ್ನ ಒಳ್ಳೆಯತನದಿಂದಲೂ ಮೈಯ್ಯೊಡ್ಡಿ ನಿಂತಿದ್ದ ಬಡತನವೊಂದೇ ಕಾರಣವಲ್ಲ. ಆ ಬಡತನ ಮನೆಯವರನ್ನೆಲ್ಲ ಕಾಡಿಸುತ್ತಿತ್ತು. ಸಂಪಾದಿಸಿದ ದುಡ್ಡನ್ನೆಲ್ಲ ಅಕ್ಕನಿಗೆ ಕಳುಹಿಸಿಕೊಟ್ಟ ಮೇಲೆ, ಮೇನ್ನಳ ಹತ್ತಿರ ಸ್ವಂತಕ್ಕೋಸ್ಕರ ಕಾಸು ಉಳಿಯುವುದೇ ಕಷ್ಟವಾಗುತ್ತಿತ್ತು. ಅಣ್ಣನಿಗೆ ಕಾಗದ ಬರೆಯುವಾಗ ಅವಳು ಅದನ್ನು ಸೂಚಿಸಿದ್ದಾಳೆ, 'ಪ್ರಿಯ ಜೊಸ್ಸೆಯೊ, ಈ ಕಾಗದದ ಮೇಲೆ, ನನ್ನ ಬಳಿ ಇರುವ ಕೊನೆಯ ಸ್ಟಾಂಪನ್ನು ಹಚ್ಚುತ್ತಿದ್ದೇನೆ. ಈಗ ನನ್ನ ಬಳಿ ಒಂದೇ ಒಂದು ಪೆನ್ನಿ ಕೂಡ ಇಲ್ಲದೆ ಇರುವುದರಿಂದ ಅಕಸ್ಮಾತ್ ಎಲ್ಲಾದರೂ ಒಂದು ಸ್ಟಾಂಪು ನನಗೆ ಸಿಕ್ಕಿದ ಹೊರತು, ರಜದ ತನಕ ಬಹುಶಃ ನಿನಗೆ ಕಾಗದ ಬರೆಯಲಾಗುವುದಿಲ್ಲ.

'ಈ ಕಾಗದ ಬರೆಯುತ್ತಿರುವುದರ ನಿಜವಾದ ಉದ್ದೇಶ, ನಿನ್ನ ಹುಟ್ಟಿದ ಹಬ್ಬದ ಸಮಯದಲ್ಲಿ ನಿನಗೆ ಒಳ್ಳೆಯದನ್ನು ಹಾರೈಸುವುದಕ್ಕೆ ತಡವಾಗಿದ್ದರೆ, ಕಾಸಾಗಲಿ ಸ್ಟಾಂಪಾಗಲಿ ಇಲ್ಲದ ಸಂಕಟದಿಂದ. ಇದರಿಂದ ತುಂಬ ಹಿಂಸೆಯೇನೋ ಆಗುತ್ತದೆ. ಆದರೂ, ಅದಕ್ಕೋಸ್ಕರ ಯಾರಲ್ಲಿಯೂ ಬೇಡುವುದನ್ನು ನಾನಿನ್ನೂ ಕಲಿತಿಲ್ಲ.

'ನನ್ನ ಪ್ರಿಯ ಅಣ್ಣನಾದ ಜೊಸ್ಸೆಯೊ, ಕೆಲವು ದಿವಸಗಳ ಮಟ್ಟಿಗಾದರೂ ವಾರ್ಸಾಕ್ಕೆ ಬರಬೇಕೆಂದು, ಮನಸ್ಸು ಹಾತೊರೆದು ತುಡಿದುಕೊಳ್ಳುತ್ತದೆ. ಹೊರಗಿನ ನನ್ನ ಉಡುಪು ಹಳೆಯದಾಗಿ ಹರಿದು ಹೋಗಿರುವುದನ್ನು ನಾನು ಹೆಚ್ಚಾಗಿ ಹಚ್ಚಿಕೊಳ್ಳುವುದಿಲ್ಲ. ಆದರೆ ಒಳಗಿನ ಆತ್ಮ ಕೂಡ ನವೆದು ಸಣ್ಣಾಗಿ ಹೋಗಿದೆ.

'ಬ್ರೊನ್ಯ ನನಗೆ ಕಾಗದ ಬರೆದು ಎಷ್ಟೋ ದಿನಗಳಾಗಿ ಹೋಯಿತು. ಅವಳ ಬಳಿಯೂ ಸ್ಟಾಂಪು ಇಲ್ಲ ಎಂದೇಕಾಣುತ್ತದೆ.'

ಮನಸ್ಸನ್ನು ಹಿಂಡಿಹಾಕುತ್ತಿದ್ದ ಈ ನೋವು ಹಿಂಸೆಗಳನ್ನೆಲ್ಲ ಮೇನ್ಯ ತನ್ನ ಹೃದಯದಲ್ಲಿ ಬಚ್ಚಿಟ್ಟುಕೊಂಡು ತನ್ನ ಮನೆಯವರ ಶ್ರೇಯಸ್ಸನ್ನು ಕೋರುವ ಚಿಂತೆಯಲ್ಲಿ ತೊಡಗಿದಳು.

'....ಎಂದಾದರೂ ಒಂದು ದಿನ ಗಣ್ಯಳಾಗಬೇಕೆಂದಿದ್ದ ನನ್ನ ಆಸೆಯೆಲ್ಲ ಈಗ ಬಯಲಾದುದರಿಂದ, ನನ್ನ ಉಳಿದ ಆಸೆ ಆಕಾಂಕ್ಷೆಗಳೆಲ್ಲ ನಿನ್ನನ್ನೂ ಬ್ರೋನ್ಯಳನ್ನೂ ಆಶ್ರಯಿಸಿವೆ. ನೀವಿಬ್ಬರಾದರೂ, ದೇವರು ಧಾರಾಳವಾಗಿ ಕೊಟ್ಟಿರುವ ಸಾಮರ್ಥ್ಯಕ್ಕನುಸಾರವಾಗಿ, ನಿಮ್ಮ ಜೀವನಗಳನ್ನು ರೂಪಿಸಿಕೊಳ್ಳಬೇಕು. ನಮ್ಮ ಮನೆಯಲ್ಲಿ ಅಂತಹ ಶಕ್ತಿ ಹುದುಗಿದೆ ಎಂಬುದು ಸ್ಪಷ್ಟವಾಗಿದೆ. ಆ ಶಕ್ತಿ ಮರೆಯಾಗಿ ಹಾಳಾಗದೆ, ನಮ್ಮಲ್ಲಿ ಯಾರೊಬ್ಬರಿಂದಲಾದರೂ ಹೊರಗೆ ಕಾಣಿಸಿಕೊಳ್ಳಬೇಕು. ನನ್ನ ವಿಷಯದಲ್ಲಿ ನನಗೆ ದುಃಖ ನಿರಾಶೆ ಹೆಚ್ಚಿದಂತೆ ನಿಮ್ಮ ವಿಷಯದಲ್ಲಿ ನಂಬಿಕೆ ಬೆಳೆಯುತ್ತಿದೆ.

'ತಂದೆಗೆ, ನಿನ್ನನ್ನು ಬಳಿಯಲ್ಲಿಟ್ಟುಕೊಳ್ಳುವುದರಿಂದ ಎಷ್ಟು ಸಂತೋಷವಾಗಬಹುದು ಯೋಚಿಸು. ಅವನು ನಿನ್ನನ್ನು ಅಗಾಧವಾಗಿ ಪ್ರೀತಿಸುತ್ತಾನೆ. ಉಳಿದ ನಮ್ಮ ಮೂರು ಜನರನ್ನು ಪ್ರೀತಿಸುವುದಕ್ಕಿಂತ ಹೆಚ್ಚಾಗಿ ನಿನ್ನನ್ನು ಪ್ರೀತಿಸುತ್ತಾನೆ. ಹೆಲಾ ಮದುವೆಯಾಗಿ ಹೊರಟು ಹೋಗಿ, ನೀನೂ ವಾರ್ಸಾ ಬಿಟ್ಟು ಹೊರಟುಹೋದರೆ, ಒಂಟಿಯಾದ ತಂದೆಯ ಗತಿ ಏನಾಗಬೇಕು?' ಎಂದು ಅಣ್ಣನಿಗೆ ಕಾಗದ ಬರೆದಳು.

ಗೊತ್ತಾಗಿದ್ದ ಮದುವೆ ನಿಂತುಹೋದ ಹೆಲಾ ವಿಷಯವಾಗಿ 'ಹೆಲಾಗೆ ಎಷ್ಟು ಅಭಿಮಾನಭಂಗವಾಗಿದೆ ಎಂದು ನಾನು ಊಹಿಸಬಲ್ಲೆ. ನಿಜವಾಗಿಯೂ ಇದರಿಂದ ಗಂಡಸರ ಯೋಗ್ಯತೆ ಸ್ಪಷ್ಟವಾಗುತ್ತದೆ. ಬಡಹುಡುಗಿಯರನ್ನು ಮದುವೆಯಾಗಲು ಅವರಿಗೆ ಇಷ್ಟವಿಲ್ಲದಿದ್ದರೆ ಎಲ್ಲಾದರೂ ಹಾಳಾಗಿ ಹೋಗಲಿ. ಯಾರೂ ಅವರಿಂದ ಏನನ್ನೂ ಬೇಡುವುದಿಲ್ಲ. ಆದರೆ, ನಿರಪರಾಧಿಗಳಾದವರ ಶಾಂತಿಯನ್ನು ಅವರೇಕೆ ಕೆಡಿಸಬೇಕು?......' ಎಂದು ಬರೆದಳು.

ಎಂತೆಂತಹ ಕಷ್ಟಗಳು ಮುತ್ತಿ ಕಾಡಿದರೂ, ಮೇನ್ಯ ಓದುವುದನ್ನು ಮಾತ್ರ ಬಿಡಲಿಲ್ಲ. ವಿಶ್ವವಿದ್ಯಾಲಯದಲ್ಲಿ ಓದುವುದು ಸಾಗದೆ ಹೋಗಿ, ಕೆಲಸ ಮಾಡುವವರ ಮನೆಯಲ್ಲಿ ಅವಮಾನಪಟ್ಟು, ಬಾಳೇ ಹದಕೆಟ್ಟಿತೆಂದು

ನಿರಾಶೆಯಲ್ಲಿ ಕಂಗೆಟ್ಟಿದ್ದ ಅಂತಹ ಸ್ಥಿತಿಯಲ್ಲಿ ಅವಳನ್ನು ಓದಲು ಪ್ರಚೋದಿಸಿದ ಆ ಶಕ್ತಿ ಅಗಾಧವಾದ ಮಹಾಶಕ್ತಿ. ಮೇರ್‍ಯಳಿಗೆ ಅದೇನೂ ಹೆಚ್ಚೆಂದು ತೋರುತ್ತಿರಲಿಲ್ಲ. ಓದು, ಜ್ಞಾನಾರ್ಜನೆ ಅವಳ ಬಾಳಿಗೆ ಅಂಟಿಬಂದಿದ್ದುವು. ಸರ್ವದಾ ಮನಸ್ಸನ್ನು ಹಿಂಡುತ್ತಿದ್ದ ಚಿಂತೆಗಳಿಂದ ಎಂತಹ ಪ್ರಯತ್ನ ಮಾಡಿ ಬಾಳನ್ನೂ, ಬುದ್ಧಿಯನ್ನೂ ಬೇರೆ ಕಡೆಗೆ ತಿರುಗಿಸಿಕೊಳ್ಳುತ್ತಿದ್ದಳೆಂದು ಮೇರ್‍ಯಳೇ ಬರೆಯುತ್ತಾಳೆ.

'ನಾಸಿಲ್ಲಿಗೆ ಬಂದಾಗ ನನಗಿನ್ನೂ ಹದಿನೆಂಟು ವರ್ಷ ತುಂಬುವುದರಲ್ಲಿ ಇತ್ತು. ಇಷ್ಟರಲ್ಲಿಯೇ ಎಷ್ಟುಬಗೆಯ ಅನುಭವ ಮಾಡಿದ್ದೇನೆ! ಕೆಲವು ಸನ್ನಿವೇಶಗಳಂತೂ ನನ್ನ ಬಾಳಿನಲ್ಲಿ ಅತ್ಯಂತ ಕ್ರೂರವಾದುವುಗಳೆಂದು ನಾನು ಎಣಿಸುತ್ತೇನೆ......ಪ್ರತಿಯೊಂದೂ ನನಗೆ ತೀಕ್ಷ್ಣವಾಗಿ ಕಾಣುತ್ತದೆ. ದೇಹವನ್ನು ಹಿಂಡುವಂತೆ ತೋರುತ್ತದೆ. ಆಗ ಮನಸ್ಸನ್ನು ಕೊಡವಿ ಅದುರಿಸಿ ಎಚ್ಚರಿಸಲು ಪ್ರಯತ್ನಿಸುತ್ತೇನೆ. ನನ್ನ ಹುಟ್ಟುಸ್ವಭಾವದ ಶಕ್ತಿ ಗೆದ್ದು, ಕೆಟ್ಟ ಕನಸಿನಿಂದ ಎಚ್ಚರವಾಗುವಂತೆ ನನಗೆ ತೋರುತ್ತದೆ.... ಮೊದಲು ಧ್ಯೇಯ; ನಾವು, ವ್ಯಕ್ತಿಗಳಿಗಾಗಲೀ, ಘಟನೆಗಳಿಗಾಗಲೀ, ಎಂದೂ ಸೋತು ತಲೆ ತಗ್ಗಿಸಬಾರದು....'

ಆ ಶಕ್ತಿಪೂರ್ಣವಾದ ಧ್ಯೇಯವನ್ನು ಅನುಸರಿಸಿಯೇ ಮೇರ್‍ಯ ಕಲಕಿ ಹೋಗಿದ್ದ ಬುದ್ಧಿಯನ್ನು ಒಂದುಗೂಡಿಸಿ, ಓದುವುದನ್ನು ಮುಂದುವರಿಸಿ ಕೊಂಡು ಹೋದಳು. ಭೌತಶಾಸ್ತ್ರ, ರಸಾಯನಶಾಸ್ತ್ರ, ಗಣಿತಗಳನ್ನು ಸಂಗ್ರಹಿಸಿದ ಪುಸ್ತಕಗಳಿಂದ ಕಲಿಯಲು ಮೊದಲು ಮಾಡಿದಳು. ಗಣಿತವನ್ನು ಅಭ್ಯಾಸ ಮಾಡುತ್ತ, ತಂದೆಗೆ ಕಾಗದ ಬರೆದು, ಕಷ್ಟಗಳನ್ನೂ, ಅನುಮಾನಗಳನ್ನೂ ಪರಿಹಾರ ಮಾಡಿಕೊಂಡಳು. ಮನೆಯಲ್ಲಿ ದುಡಿದ ಮೇಲೆ ಉಳಿದ ಕಾಲದಲ್ಲಿ 'ಆಲ್‌ಜಿಬ್ರ', 'ಟ್ರಿಗ್ನಾಮಿಟ್ರಿ'ಯ ಲೆಕ್ಕಗಳನ್ನು ಮಾಡುತ್ತಿದ್ದಳು. ಎಷ್ಟು ಕಷ್ಟಪಟ್ಟರೂ ಪೂರ್ಣವಾದ ಲಾಭವೇನೂ ಮೇರ್‍ಯಳಿಗೆ ಇರಲಿಲ್ಲ. ಕಲಿಸುವುದಕ್ಕೆ ಉಪಾಧ್ಯಾಯರು, ಮುಖ್ಯವಾಗಿ ಬೇಕಾಗಿದ್ದ ಪ್ರಯೋಗಶಾಲೆ ಇವುಗಳು ಇಲ್ಲದ ಕೊರತೆ ದೊಡ್ಡ ಕೊರತೆಯಾಗಿತ್ತು. ಬೇಸರಗೊಳಿಸುವ ಇಷ್ಟೊಂದು ಅನಾನುಕೂಲಗಳಿದ್ದರೂ ಮೇರ್‍ಯ, ಓದುವುದನ್ನು ಬಿಡಲಿಲ್ಲ. ಬಿಡುವುದೆಂದರೆ ಅವಳಿಗೆ ಸಾಧ್ಯವೇ ಇರಲಿಲ್ಲ. ತನಗೆ

ದೊರೆತಿದ್ದ ವಿಜ್ಞಾನದ ಶಿಕ್ಷಣ ವಿಶ್ವವಿದ್ಯಾಲಯಕ್ಕೆ ಸೇರುವ ಮಟ್ಟಕ್ಕಿಂತ ಕಡಮೆಯೆಂದು ತಿಳಿದು, ಅವಳು, ಸಿಕ್ಕಿದ ಪುಸ್ತಕಗಳನ್ನೆಲ್ಲ ಓದುತ್ತಿದ್ದಳು. ಓದುತ್ತ ಹೋದಂತೆ, ತನ್ನ ಮನಸ್ಸು, ಗಣಿತ, ಭೌತಶಾಸ್ತ್ರಗಳ ಕಡೆಗೆ ಹೆಚ್ಚಾಗಿ ಒಲಿಯುವುದನ್ನು ತಿಳಿದುಕೊಂಡಳು.

—

## ಅಧ್ಯಾಯ ಆರು

## ಬಿಡುಗಡೆ

ಮೂರುವರ್ಷ ಗವರ್ನೆಸ್ ಆಗಿ ಕೆಲಸಮಾಡಿದ ಮೇಲೆ, ಮೇನ್ಯಳ ಕತ್ತಲೆ ತುಂಬಿದ್ದ ಬಾಳಿನಲ್ಲಿ ಬೆಳಕು ಮೂಡುತ್ತ ಬಂತು. ಹಳ್ಳಿಯ ಮನೆಯಲ್ಲಿ ಗವರ್ನೆಸ್ ಇನ್ನು ಮುಂದೆ ಬೇಕಿರಲಿಲ್ಲವಾದ್ದರಿಂದ ಅವಳು ವಾರ್ಸಾಕ್ಕೆ ಹಿಂತಿರುಗಿ ಕೆಲಸ ಹುಡುಕಬೇಕಾಯಿತು.

ಸ್ಕ್ಲೊಡೊವ್‌ಸ್ಕಿ ಕೆಲಸದಿಂದ ವಿಶ್ರಾಂತಿ ಪಡೆದ ಮೇಲೆ, ವಾರ್ಸಾ ಹತ್ತಿರದಲ್ಲಿಯೇ ಇದ್ದ ಒಂದು ಶಾಲೆಯ ಡೈರೆಕ್ಟರ್ ಆಗಿ ಕೆಲಸ ಮಾಡತೊಡಗಿದ. ಅಲ್ಲಿಯ ಸನ್ನಿವೇಶ, ವಾತಾವರಣ ಯಾವುದೂ ಮುದುಕನಿಗೆ ಒಗ್ಗಿ ಬರಲಿಲ್ಲ. ಆದರೆ ತನ್ನ ಹೆಣ್ಣುಮಕ್ಕಳಿಗೆ ಹೇಗಾದರೂ ಸಹಾಯ ಮಾಡಬೇಕೆಂದು, ಸ್ಕ್ಲೊಡೊವ್‌ಸ್ಕಿ ಆ ಕೆಲಸಕ್ಕೆ ಒಪ್ಪಿಕೊಂಡು ಬ್ರೊನ್ಯಳಿಗಾಗಿ ನಲವತ್ತು ರೂಬಲ್ ಕಳುಹಿಸತೊಡಗಿದ.

ಇಷ್ಟರಲ್ಲಿ ಬ್ರೊನ್ಯಳ ಸ್ಥಿತಿಯೂ ಹೆಚ್ಚು ಹೆಚ್ಚು ಅನುಕೂಲವಾಗುತ್ತ ಬಂದಿತ್ತು. ಅವಳು ಪರೀಕ್ಷೆಗಳಲ್ಲಿ ತಪ್ಪದೆ ತೇರ್ಗಡೆಯಾಗುತ್ತ ಬಂದಿದ್ದಳು. ಅದೇ ಪರೀಕ್ಷೆಗೆ ಓದುತ್ತಿದ್ದ ಕ್ಯಾಸಿಮಿರ್ ಡ್ಲುಸ್ಕಿಯೊಡನೆ ಅವಳ ಮದುವೆ ಗೊತ್ತಾಗುವುದರಲ್ಲಿತ್ತು.

ತನ್ನ ಬಡತನ ಕಳೆಯುತ್ತ ಬಂದಂತೆ ಬ್ರೊನ್ಯ ತಂಗಿ ಕೊಟ್ಟಿದ್ದ ಹಣ

ವನ್ನು ತೀರಿಸಲು ನೊದಲು ಮಾಡಿದಳು. ತಂದೆ ಬ್ರೊನ್ಯಳಿಗೆ ಕೊಡುತ್ತಿದ್ದ ೪೦ ರೂಬಲ್‌ಗಳಲ್ಲಿ ಎಂಟನ್ನು ಮೇನ್ಯಳಿಗಾಗಿ ತೆಗೆದಿಡುತ್ತಿದ್ದ. ಇಲ್ಲಿಂದ ಮುಂದೆ ಕಾಸಿಗೆ ಗತಿಯಿಲ್ಲದ ಮೇನ್ಯಳ ಹಣ ಕೂಡಲು ಮೊದಲಾಯಿತು.

ಮೇನ್ಯಳಿಗೆ ಹೊಸ ಕೆಲಸವೂ ಸಿಕ್ಕಿತು. ಆ ಮನೆಯಲ್ಲಿ ಇನ್ನೂ ಕೆಲಸ ಮಾಡುತ್ತಿದ್ದಾಗಲೇ ಬ್ರೊನ್ಯಳಿಂದ ಕಾಗದ ಬಂತು. ಹಿರಿಯಕ್ಕ ಉತ್ಸಾಹವನ್ನೂ ಅಕ್ಕರತೆಯನ್ನೂ ಉಕ್ಕಿಸುತ್ತ ಕಾಗದ ಬರೆದಿದ್ದಳು. ತಮ್ಮ ಭರವಸೆಯಂತೆ ಎಲ್ಲ ನಡೆದರೆ, ಮುಂದಿನ ರಜದಲ್ಲಿ ತನ್ನ ಮದುವೆ ಯಾಗುತ್ತದೆ. ಅಷ್ಟು ಹೊತ್ತಿಗೆ ತನ್ನ ಕ್ಯಾಸಿಮಿರ್ ಡಾಕ್ಟರ್ ಆಗಿರುತ್ತಾನೆ. ತಾನಿನ್ನೂ ಒಂದು ವರ್ಷ ಓದಬೇಕಾಗಿರುತ್ತದೆ. ಆಮೇಲೆ ತಾವು ಪೋಲೆಂಡ್‌ಗೆ ಹಿಂತಿರುಗಬಹುದು. ಮುಂದಿನ ವರ್ಷ ತನ್ನ ಪುಟ್ಟ ಮೇನ್ಯ ತನ್ನ ಮನೆಯಲ್ಲೇ ಇದ್ದು ಓದಬಹುದು. ಇನ್ನೊಂದು ವರ್ಷಕ್ಕೆ ತಂದೆ ಹೇಗಾದರೂ ಸಹಾಯ ಮಾಡಿಯೇ ಮಾಡುತ್ತಾನೆ. ಮೇನ್ಯ ಫೀಸಿನ ಹಣ ಮಾತ್ರ ತಂದರೆ ಸಾಕು. ಎರಡು ವರ್ಷದಲ್ಲಿ ಓದು ಮುಗಿಸಬಹುದು ಎಂದೆಲ್ಲ ವಿಶದವಾಗಿ ಬರೆದಿದ್ದಳು.

ಮೇನ್ಯ ತಕ್ಷಣ ಇದಕ್ಕೆ ಉತ್ಸಾಹದಿಂದ ಒಪ್ಪಬೇಕಾಗಿತ್ತು. ಆದರೆ ಅವಳ ಬದುಕು ಸ್ವಾಭಾವಿಕವಾದ ತನ್ನ ಹೆದ್ದಾರಿಗೆ ತಿರುಗುವ ಸಂದರ್ಭ ಇನ್ನೂ ಒದಗಿಬಂದಿರಲಿಲ್ಲ. ನೀರಸವಾದ ವಾನರ್ಾದ ಜೀವನಕ್ಕೆ ಅವಳನ್ನು ಕಟ್ಟಿಹಾಕುವ ಸನ್ನಿವೇಶಗಳು ಇನ್ನೂ ಕೆಲವಿದ್ದುವು ಮುದುಕ ತಂದೆಯನ್ನು ಒಂದೇಸಲ ಬಿಟ್ಟು ಹೋಗುವುದು ಮನಸ್ಸಿಗೆ ಸರಿತೋರಿರಲಿಲ್ಲ. ಜೀವನದಲ್ಲಿ ದುರದೃಷ್ಟಶಾಲಿಯಾಗಿದ್ದ ಕಂಗೆಟ್ಟಿದ್ದ ಹೆಲಾಳನ್ನು ನೋಡಿಕೊಳ್ಳಬೇಕಾದ್ದು ನನ್ನ ಕರ್ತವ್ಯ ಎಂದು ಮೇನ್ಯ ಅಕ್ಕನಿಗೆ ಕಾಗದ ಬರೆದಳು. ಮನೆಯ ಕಿರಿಯ ಹುಡುಗಿ ಮೇನ್ಯ ತನ್ನ ಮನೆಯವರ ಶ್ರೇಯಸ್ಸಿನ ಹೊಣೆಯನ್ನು ಯಾರೂ ಹೇಳದೆ ತಾನೇ ಹೊತ್ತಿದ್ದಳು. ಇವುಗಳ ಜೊತೆಗೆ ತನ್ನ ಸ್ವಂತದ್ದೂ ಒಂದು ಚಿಂತೆ ಇತ್ತು. ಮೇನ್ಯ ಇನ್ನೂ ತಾನು ಕ್ಯಾಸಿಮಿರ್‌ನನ್ನು ಪ್ರೀತಿಸುತ್ತೇನೆಂದು ಭಾವಿಸಿದ್ದಳು. ಇವನ್ನೆಲ್ಲ ಮನಸ್ಸಿನಲ್ಲಿಟ್ಟುಕೊಂಡು, ಮೇನ್ಯ, ತಾನು ಬರುವುದು ಸರಿಯಲ್ಲವೆಂದು ಕಾಗದ ಬರೆದಳು.

೧೮೯೧ನೇ ಸೆಪ್ಟೆಂಬರ್‌ದಲ್ಲಿ ಮೇನ್ಯ ಜಾಕೋಪೇನ್‌ನಲ್ಲಿ ರಜಾದಲ್ಲಿ

ದ್ದಾಗ ಸ್ಕ್ಲೊಡೊವ್‌ಸ್ಕಿ ಬ್ರೊನ್ಯಳಿಗೆ ಕಾಗದ ಬರೆದಿದ್ದನು. 'ನಿನ್ನ ಕ್ಯಾಸಿ-ಮಿರ್ ಆರೋಗ್ಯವಾಗಿದ್ದಾನೆಂದು ಕೇಳಿ ಸಂತೋಷವಾಯಿತು. ನೀವಿಬ್ಬರೂ ಒಬ್ಬೊಬ್ಬ ಕ್ಯಾಸಿಮಿರ್‌ನನ್ನೇ ಮದುವೆಯಾದರೆ ಏನು ತಮಾಷೆಯಾಗಿರುತ್ತದೆ!'

ಮುದುಕನಿಗೆ ತನ್ನ ಮೇನ್ಯ, ಕ್ಯಾಸಿಮಿರ್‌ನನ್ನು ಮದುವೆಯಾಗಿಯಾದರೂ, ವಾರ್ಸಾದಲ್ಲಿ ಉಳಿಯಬೇಕೆಂದು, ಒಂದು ಹಂಬಲ ಬಲವಾಗಿತ್ತು. ಆದರೆ ಜಾಕೋಪೇನ್‌ನಲ್ಲಿ ಸಮಾಚಾರ ಬೇರೆಯಾಯಿತು. ಮೇನ್ಯ, ಕ್ಯಾಸಿಮಿರ್‌ನನ್ನು ಅಲ್ಲಿ ನೋಡಿದಳು. ವ್ಯಕ್ತಿಸತ್ವವಿಲ್ಲದ ಕ್ಯಾಸಿಮಿರ್ ತಾನು ಆವಳನ್ನು ಮದುವೆಯಾಗಲು ಇದ್ದ ತೊಡಕುಗಳನ್ನೆಲ್ಲ ತಿರುಗಿ ಆವಳ ಮುಂದೆ ಬಿಚ್ಚಿಟ್ಟನು. ಯಾವಾಗಲೂ ಅದೇ ಹಾಡು. ಮೇನ್ಯ ಈ ಸಲ ಸಹಿಸಲಿಲ್ಲ. ತನ್ನ ಮನಸ್ಸಿನಲ್ಲಿ ಎಂದಿನಿಂದ ಕುದಿಯುತ್ತಿದ್ದ ಮಾತುಗಳನ್ನು ಒಟಬೊರಟಾಗಿ ಹೇಳಿ ಮುಗಿಸಿದಳು 'ನಮ್ಮ ಸ್ಥಿತಿಯನ್ನು ಸರಿಪಡಿಸುವುದಕ್ಕೆ ನಿನಗೆ ದಾರಿತೋರದೇ ಇದ್ದರೆ, ಅದನ್ನು ನಾನೇನೂ ನಿನಗೆ ಹೇಳಿ ಕೊಡಬೇಕಾದ್ದಿಲ್ಲ.'

ಇಲ್ಲಿಗೆ ಕೊನೆಯ ಸಂಬಂಧ ಕಡಿದು ಹೋಯಿತು. ಮೇನ್ಯಳ ಬಾಳಿನ ಹಂಬಲ ಕೈಗೂಡುವ ಸಮಯ ಒದಗಿತು. ಅವಳ ಮನಸ್ಸು ಆಗಲೇ ವಾರ್ಸಾದ ನೀರಸವಾದ ಬದುಕಿನಿಂದ ತಪ್ಪಿಸಿಕೊಂಡು ಹೋಯಿತು. ಮೇನ್ಯ ಅಕ್ಕನಿಗೆ ಪ್ಯಾರಿಸ್‌ಗೆ ಕಾಗದ ಬರೆದಳು. ತನ್ನನ್ನು ಮನೆಯಲ್ಲಿ ಇಟ್ಟುಕೊಳ್ಳುವುದು ಅಕ್ಕನಿಗೆ ಇಷ್ಟವೇ ಎಂದು ಕೇಳಿದಳು. ಬ್ರೊನ್ಯ ತಂಗಿಯ ಬರವನ್ನೇ ಕಾದಿದ್ದವಳು. ಅದಕ್ಕಾಗಿಯೆ ದಿನದಿನವೂ ಹಾರೈಸಿದ್ದವಳು. ಮೇನ್ಯಳೆಂದರೆ, ಈ ಹಿರಿಯಕ್ಕನಿಗೆ ಮೋಹದ ತಂಗಿ.

ಮೇನ್ಯ ಬೇಗ ಬೇಗ ಸಾಮಾನೆಲ್ಲ ಕೂಡಿಸಿದಳು. ತನ್ನಲ್ಲಿದ್ದ ಹಣವನ್ನು ಪುನಃ ಪುನಃ ಎಣಿಸಿದಳು. ವಾರ್ಸಾದಿಂದ ಪ್ಯಾರಿಸ್‌ಗೆ ಆಗುವ ಪ್ರಯಾಣದ ವೆಚ್ಚವನ್ನು ಲೆಕ್ಕಹಾಕಿದಳು. ರಷ್ಯ, ಫ್ರಾನ್ಸ್‌ಗಳಲ್ಲಿ ಮೂರನೇ ತರಗತಿಯ ರೈಲುಗಾಡಿಯೆ ಅಗ್ಗವಾದದ್ದು. ಜರ್ಮನಿಯಲ್ಲಿ ಮಾತ್ರ ನಾಲ್ಕನೇ ತರಗತಿಯೂ ಇತ್ತು. ಸ್ವಲ್ಪ ಅನಾನುಕೂಲ, ನಿಜ, ಆದರೇನು?

ಮೇನ್ಯಾಳಿಗೆ ಅದೊಂದು ಲಕ್ಷ್ಯವಲ್ಲ. ತನ್ನ ಉದ್ದೇಶಸಾಧನೆಗಾಗಿ, ಎಷ್ಟೇ ಅನಾನುಕೂಲವಿದ್ದರೂ ಸಹಿಸುವ ಜೀವ, ಅದು!

ಪ್ಯಾರಿಸ್‌ನಲ್ಲಿ ದುಡ್ಡು ಕೊಟ್ಟು ಕೊಳ್ಳಬೇಕಾದೀತೆಂದು ಹೆದರಿ ಮೇನ್ಯಾ ತನಗೆ ಬೇಕಾದ ಸಾಮಾನುಗಳನ್ನೆಲ್ಲ ವಾರ್ಸಾದಲ್ಲೇ ಒಟ್ಟುಗೂಡಿಸಿಕೊಂಡಳು. ಒರಟಾದ ದೊಡ್ಡ ಮರದ ಪೆಟ್ಟಿಗೆಯಲ್ಲಿ ಅವನ್ನೆಲ್ಲಾ ತುಂಬಿದಳು. ಜರ್ಮನಿಯ ನಾಲ್ಕನೇ ತರಗತಿಯ ಗಾಡಿಯಲ್ಲಿ ಬೇಕಾಗಬಹುದೆಂದು ಒಂದು ಮಡಿಸುವ ಕುರ್ಚಿಯನ್ನೂ ತೆಗೆದುಕೊಂಡಳು. ಎಂದಿನಂತೆ ತಂದೆ ತನ್ನ ಮುದ್ದು ಮಗಳನ್ನು ಬೀಳ್ಕೊಳ್ಳಲು ರೈಲುಗಾಡಿಯ ಹತ್ತಿರಕ್ಕೆ ಬಂದಿದ್ದ. ಗಾಡಿಹೊರಡುವ ಹೊತ್ತಾಗುತ್ತ ಬಂದಂತೆ ಮುದುಕ ತಂದೆಯನ್ನು ನೋಡುತ್ತ ನೋಡುತ್ತ ಮಗಳಿಗೆ ಮನಸ್ಸಿನಲ್ಲಿ ತಲ್ಲಣ ಹೆಚ್ಚಿತು. ಮೇನ್ಯ ತಂದೆಯ ಬಳಿಗೆ ಬಂದು ಕ್ಷಮೆ ಬೇಡುವವಳಂತೆ ಕೇಳಿಕೊಂಡಳು.

'ನಾನು ತುಂಬ ದಿನ ನಿನ್ನನ್ನು ಬಿಟ್ಟಿರುವುದಿಲ್ಲ. ಎರಡು ವರ್ಷ ಅಥವಾ ಮೂರು ವರ್ಷ ಓದು ಮುಗಿಸಿ ಕೆಲವು ಪರೀಕ್ಷೆಗಳಲ್ಲಿ ತೇರ್ಗಡೆಯಾದ ಮೇಲೆ ನಿನ್ನ ಬಳಿಗೆ ಬಂದು ಬಿಡುತ್ತೇನೆ. ನಾವಿಬ್ಬರೂ ಜೊತೆಯಾಗಿರೋಣ. ಮುಂದೆ ಎಂದೂ ಅಗಲಬೇಕಾದುದಿಲ್ಲ ಅದು ಸರಿಯಲ್ಲವೇ ಅಪ್ಪ?'

ತಂದೆ ಏನು ಹೇಳಬಲ್ಲನು? ಮಗಳನ್ನು ತಬ್ಬಿಕೊಂಡನು, ಬಿಗಿದ ಕಂಠದಿಂದ ಹೌದು, ನನ್ನ ಪುಟ್ಟ ಮಗೂ, ಬೇಗ ಬಂದು ಬಿಡು. ಚೆನ್ನಾಗಿ ಓದು; ನಿನಗೆ ಒಳ್ಳೇದಾಗಲಿ. ಎಂದನು.

ಮೇನ್ಯಾಳ ಮನಸ್ಸಿನಲ್ಲಿ ವಾರ್ಸಾಕ್ಕೆ ಹಿಂದಿರುಗಿ ಬಂದು ಉಪಾಧ್ಯಾಯಿನಿಯಾಗುವುದಕ್ಕಿಂತ ಹೆಚ್ಚಿನ ಆಸೆ ಇರಲಿಲ್ಲ ತನ್ನ ಭವಿಷ್ಯ ಅದಕ್ಕಿಂತ ಹೆಚ್ಚು ಭವ್ಯವಾಗುವುದೆಂಬ ನಿರೀಕ್ಷೆಯೂ ಇರಲಿಲ್ಲ. ಆದರೆ ಇಲ್ಲಿಂದ ಮುಂದೆ ಮೇನ್ಯಾಳ ಬಾಳು ಅರಳಿತು. ಅವಳ ಜೀವನದ ಕಿರುದಾರಿ ತಿರುಗಿ, ಅನೇಕ ಮಹಾನುಭಾವರು ತುಳಿದ ಹೆದ್ದಾರಿಗೆ ಸೇರಿಕೊಂಡಿತು. ಜ್ಞಾನ ಸಂಪಾದನೆ, ಓದು, ಅವಳ ಹುಟ್ಟಿನ ಹಕ್ಕು. ವಿಶ್ವವಿದ್ಯಾಲಯ ಸೇರಿ ಓದಬೇಕಾದ್ದು ಅವಳಿಗೆ ತೀರ ಸ್ವಾಭಾವಿಕ. ವಿಜ್ಞಾನದ ಪುಸ್ತಕಗಳನ್ನು ಓದಿ ಮುಗುಚಿಹಾಕಿ ಅರಗಿಸಿಕೊಳ್ಳಬಲ್ಲ ಅವಳ ತೀವ್ರವಾದ ಬುದ್ಧಿಶಕ್ತಿ ಸಫಲವಾಗುವ ಕಾಲ ಮೇನ್ಯಾಳಿಗೆ ಒದಗಿ ಬಂದದ್ದು ಅವಳ ೨೪ನೆಯ ವಯಸ್ಸಿನಲ್ಲಿ.

---

ಅಧ್ಯಾಯ ಏಳು

# ಪ್ಯಾರಿಸ್, ಸೋರ್ಬನ್

ಪ್ಯಾರಿಸ್‌ಗೆ ತಲುಪಿದ ಮೇಲೆ, ಮೇನ್ಯ ಅಕ್ಕನ ಮನೆಗೆ ಹೋಗಿ ಸೇರಿದಳು. ಅಕ್ಕ ಕೆಲಸದ ಮೇಲೆ ಪೋಲೆಂಡಿನಲ್ಲಿ ಕೆಲವು ವಾರಗಳು ಉಳಿಯಬೇಕಾಗಿತ್ತು. ಮನೆಯಲ್ಲಿ ಭಾವನಿಗೂ, ಮೇನ್ಯಳಿಗೂ ಹೊಸ ಪರಿಚಯ. ಇವರಿಬ್ಬರ ನಡುವೆ ಈಗ ಉಂಟಾದ ಪರಿಚಯ, ಸ್ನೇಹ ಬಾಳಿನಲ್ಲೆಲ್ಲ ನಡೆದು ಬಂತು. ಕ್ಯಾಸಿಮಿರ್ ಡ್ಲುಸ್ಕಿ ವಿಚಿತ್ರದ ವ್ಯಕ್ತಿ. ಈ ಮನುಷ್ಯ ರಷ್ಯಾದ ದೊರೆಯ ಕೊಲೆ ನಡೆದಾಗ ಪಿತೂರಿಯಲ್ಲಿ ಸೇರಿದ್ದನೆಂಬ ಅನುಮಾನ ಹೊತ್ತು ರಷ್ಯಾದಿಂದ ಓಡಿ ಬಂದಿದ್ದನು. ರಷ್ಯಾದ ಪೋಲೀಸಿನವರು, ಈ ಗುಮಾನಿಯ ವಿಷಯವನ್ನು ಫ್ರಾನ್ಸಿಗೂ ಮುಟ್ಟಿಸಿದ್ದರು. ಬ್ರೊನ್ಯ ತನ್ನ ಗಂಡನಾಗಿ ಆರಿಸಿಕೊಂಡಿದ್ದು ಇಂತಹ ಮನುಷ್ಯನನ್ನು! ಆದರೆ ಡ್ಲುಸ್ಕಿ ಪ್ರಚಂಡ ಬುದ್ಧಿವಂತ. ಗಟ್ಟಿಮುಟ್ಟಾಗಿ ದೊಡ್ಡದಾಗಿ ಬೆಳೆದಿದ್ದ ಈ ಡ್ಲುಸ್ಕಿ ತುಂಬ ಸರಳ ಸ್ವಭಾವದವನು. ಹಾಸ್ಯ ವಿನೋದಗಳಿಲ್ಲದೆ ಅವನ ಪ್ರಾಣ ನಿಲ್ಲುತ್ತಿರಲಿಲ್ಲ. ಚೇಷ್ಟೆ, ಹುಡುಗಾಟ ಅವನ ಹುಟ್ಟಿಗೆ ಬಂದದ್ದು. ಕೆಲಸ ಮಾಡಲು ಹೊರಟರೆ ಪಾದರಸದಂತಹ ಚಟುವಟಿಕೆ.

ಇಂತಹ ಭಾವನಿಗೂ, ಮೇನ್ಯಳಿಗೂ ಮನಸ್ಸು ಒಗ್ಗಿ ಬಂತು. ಬ್ರೊನ್ಯ ಪೋಲೆಂಡಿನಲ್ಲಿದ್ದಾಗ ಡ್ಲುಸ್ಕಿ ಮೇನ್ಯಳ ವಿಷಯವಾಗಿ, ಅವಳ ತಂದೆಗೆ ಕಾಗದ ಬರೆದ. ಆ ಕಾಗದ ಡ್ಲುಸ್ಕಿಯ ಸ್ವಭಾವವನ್ನು ಒಡೆದು ತೋರಿಸುತ್ತದೆ.

'....ನಮ್ಮಲ್ಲಿ ಎಲ್ಲ ಸರಿಯಾಗಿದೆ. ಮೇನ್ಯ ಚೆನ್ನಾಗಿ ಓದುತ್ತಿದ್ದಾಳೆ. ಅವಳ ಕಾಲವನ್ನೆಲ್ಲ ಸೋರ್ಬನ್‌ನಲ್ಲೇ ಕಳೆದು ಹೋಗಿ, ನಾವಿಬ್ಬರೂ ಸೇರುವುದು ಸಾಯಂಕಾಲದ ಊಟದ ಹೊತ್ತಿಗೆ. ಅವಳು ತುಂಬ ಸ್ವಾತಂತ್ರ್ಯ

ಪ್ರಿಯಳಾದ ಹುಡುಗಿ. ನೀನು ನ್ಯಾಯವಾದ ಹಕ್ಕನ್ನು ಕೊಟ್ಟು ಅವಳನ್ನು ನನ್ನ ಅಂಕೆಯಲ್ಲಿಟ್ಟಿದ್ದರೂ, ನನಗೆ ಅವಳು ಮರ್ಯಾದೆಯನ್ನಾಗಲೀ, ವಿಧೇಯತೆಯನ್ನಾಗಲೀ ಸ್ವಲ್ಪವೂ ತೋರಿಸುವುದಿಲ್ಲ. ನನ್ನ ಅಧಿಕಾರವನ್ನು ಗೌರವಿಸುವುದಿಲ್ಲ. ಅವಳನ್ನು ದಾರಿಗೆ ತರಬಹುದೆಂಬ ನಂಬಿಗೆಯೇನೋ ಇದೆ, ಆದರೆ ಇಲ್ಲಿಯ ತನಕ ನನ್ನ ಶಿಕ್ಷಣ ಕೊಡುವ ಸಾಮರ್ಥ್ಯ ಇನ್ನೂ ಸಾರ್ಥಕವಾಗಿಲ್ಲ. . . .''

ಮೇನ್ಯ ಸೆರೆಯಿಂದ ಬಿಡುಗಡೆಯಾದ ಹಕ್ಕಿಯಂತೆ ಪ್ಯಾರಿಸ್‌ಗೆ ಬಂದು ತಲುಪಿದಳು. ಇದೆಲ್ಲ ಕನಸಿನಂತೆಯೇ ತೋರುತ್ತಿತ್ತು. ತನ್ನ ಬಾಳಿನ ಹಂಬಲವಾದ ವಿಶ್ವವಿದ್ಯಾಲಯ ತನಗೆ ಹತ್ತಿರವಾಯಿತೆಂದರೆ ಅವಳಿಗೇ ನಂಬುವುದಕ್ಕೆ ಸಾಧ್ಯವಿರಲಿಲ್ಲ. ಅದೂ ಎಂತಹ ವಿಶ್ವವಿದ್ಯಾಲಯ! ಸೋರ್ಬನ್ ಪ್ರಪಂಚದಲ್ಲೆಲ್ಲ ಹೆಸರಾದದ್ದು!

ಅಕ್ಕನ ಮನೆಯಿಂದ ಸೋರ್ಬನ್ನಿಗೆ ಹೋಗಬೇಕಾದರೆ ಒಂದು ಸಲ ಗಾಡಿ ಬದಲಾಯಿಸಿ ಎರಡನೆಯ ಗಾಡಿಯಲ್ಲಿ ಹತ್ತಬೇಕು. ಗಾಡಿಯ ಮೇಲಂತಸ್ತು ಸ್ವಲ್ಪ ಅಗ್ಗ. ಅಗ್ಗವಾದ ಭಾಗ ಬೇರೆ ಇದ್ದಾಗ ಮೇನ್ಯ ಅದು ಬಿಟ್ಟು ಬೇರೆ ಎಲ್ಲಿ ಹೋದಾಳು? ಕೊರೆಯುವ ಚಳಿ, ಧೂಳು, ಮೇಲುಗಡೆ ಹೆಚ್ಚು ನಿಜ. ಆದರೇನು? ಊರು ಚೆನ್ನಾಗಿ ಕಾಣಿಸುತ್ತದೆ. ಚರ್ಮದ ಚೀಲವನ್ನು ಕೈಯಲ್ಲಿ ಹಿಡಿದು, ತಿರುಗಣೆ ಮೆಟ್ಟಿಲಿಂದ ಮೇನ್ಯ ತಲೆಸುತ್ತುವಂತೆ ಎತ್ತರವಾಗಿದ್ದ ಗಾಡಿಯ ಮೇಲುಗಡೆಗೆ ಹತ್ತಿದಳು. ಕೊರೆಯುವ ಚಳಿಗೆ ಕೆನ್ನೆಯೊಡ್ಡಿ, ಕತ್ತು ಚಾಚಿ ಸುತ್ತಲೂ ನೋಡಿದಳು. ವಿಶ್ವವಿದ್ಯಾಲಯಕ್ಕೆ ತನ್ನನ್ನು ಕರೆದೊಯ್ಯುತ್ತಿರುವ ಬೀದಿಗಳು ಇವೇ. ಯಾವ ಭಾಗ್ಯಕ್ಕಾಗಿ ಜೀವ ಹಾತೊರೆಯುತ್ತಿದ್ದಿತೋ, ಆ ಭಾಗ್ಯ ಕೈಗೆ ಎಟಕುವಷ್ಟು ಹತ್ತಿರವಾದಾಗ ಮೇನ್ಯಳ ಹೃದಯ ಸಂತೋಷದಿಂದ ಉಬ್ಬಿ ಒಡೆಯುವಂತಾಯಿತು. ಉತ್ಸಾಹ ಮಿತಿಮೀರಿತು. ಕೊನೆಗೆ ಗಾಡಿ ಸೋರ್ಬನ್ ಹತ್ತಿರ ನಿಂತಾಗ ಮೇನ್ಯ ಉತ್ಸಾಹದಲ್ಲಿ ಗಾಡಿಯಿಂದಿಳಿದು ವಿಶ್ವವಿದ್ಯಾಲಯದ ಹೆಬ್ಬಾಗಿಲ ಕಡೆಗೆ ಆತುರದಿಂದ ಓಡಿದಳು.

ವಿಶ್ವವಿದ್ಯಾಲಯದಲ್ಲಿ ಕಟ್ಟಡಗಳನ್ನೆಲ್ಲ ಸರಿಮಾಡಿ ಕಟ್ಟುತ್ತಿದ್ದರು. ಆ ಶಬ್ದ ಅಲ್ಲಿಯ ಶಾಂತಿಗೆ ಭಂಗ ತಂದಿತ್ತು. ಆದರೇನು? ಮುಂದುಗಡೆ

ಗೋಡೆಯ ಮೇಲೆ, ಪ್ರತಿವರ್ಷದಂತೆ 'ಸೋರ್ಬಾನ್ನಿನಲ್ಲಿ ಪಾಠಗಳು ನೇ ನವೆಂಬರ್ ಮೂರರಿಂದ ಪ್ರಾರಂಭವಾಗುತ್ತವೆ' ಎಂದು ನಿಚ್ಚಳವಾಗಿ ಮೂಡಿತ್ತು. ಮೇನ್ಯ ಅದನ್ನು ಉತ್ಸಾಹದಿಂದ ಓದುತ್ತ ನಿಂತಂತೆ, ಆವಳ ಮನಸ್ಸು ಆನಂದದಲ್ಲಿ ತೇಲಿಹೋಯಿತು. ತನ್ನ ಬಾಳಿನಲ್ಲಿ ಅದು ಎಂತಹ ಭವ್ಯವಾದ ಸನ್ನಿವೇಶ! ಸ್ವಂತ ಶ್ರಮದಿಂದ ಕಾಸಿಗೆ ಕಾಸು ಕೂಡಿಹಟ್ಟು ವಿಜ್ಞಾನದ ಪಾಠಗಳನ್ನು ಕೇಳುವ ಹಕ್ಕನ್ನು ಅವಳು ಸಂಪಾದಿಸಿಕೊಂಡಿದ್ದಳು. ಪ್ರಯೋಗ ಶಾಲೆಯಲ್ಲಿ ನಿಂತು, ಬೋಧಕರ ನೇತೃತ್ವದಲ್ಲಿ ಪ್ರಯೋಗಗಳನ್ನು ನಡೆಸಬಹುದು. ವಿಶ್ವವಿದ್ಯಾಲಯದಲ್ಲಿ ವಿಜ್ಞಾನದ ವಿದ್ಯಾರ್ಥಿಯಾಗಿರುವುದಕ್ಕಿಂತ ಹೆಚ್ಚಿನದೇನನ್ನು ತನ್ನ ಜೀವ ಬಯಸಬಲ್ಲುದು?

ವಿಶ್ವವಿದ್ಯಾಲಯಕ್ಕೆ ಸೇರಿದ ಮೇಲೆ ಮೇನ್ಯ ತನ್ನ ಹೆಸರನ್ನು ಬದಲಾಯಿಸಿಕೊಂಡು ಫ್ರೆಂಚ ಪದ್ಧತಿಯಂತೆ 'ಮೇರಿ ಸ್ಲೊಡೋವ್‌ಸ್ಕಿ' ಆದಳು. ಈ ತೊಡಕಾದ ಪೋಲಿಷ್ ಹೆಸರು ಯಾರ ಬಾಯಲ್ಲಿಯೂ ಸ್ಪಷ್ಟವಾಗಿ ಹೊರಡುತ್ತಿರಲಿಲ್ಲ. ಬರೀ ಮೇರಿ ಎಂದು ಕರಿಸಿಕೊಳ್ಳಲು ಮೇರಿ ಒಪ್ಪುತ್ತಿರಲಿಲ್ಲ. ಹೀಗಾಗಿ ಮೇರಿಗೆ ವಿಶ್ವವಿದ್ಯಾಲಯದಲ್ಲಿ ಜೊತೆಯ ವಿದ್ಯಾರ್ಥಿಗಳಲ್ಲಿ ಹೆಚ್ಚು ಜನ ಸ್ನೇಹಿತರಿರಲಿಲ್ಲ. ಯಾರೊಡನೆಯೂ ಅವಳು ಪಳತೆ ಬೆಳಸುತ್ತಿರಲಿಲ್ಲ. ಎಷ್ಟೋ ಸಲ ಓಡಾಡುವಾಗ ಜೊತೆಯಲ್ಲಿ ಓದುವ ಯುವಕರು ಮೇರಿಯನ್ನು ನೋಡುವರು. ಬಡತನವನ್ನು ಎತ್ತಿ ತೋರಿಸುವ ಉಡುಪನ್ನು ಧರಿಸಿ ಧೀರವಾದ ಮುಖಭಾವದಿಂದ ಕೂಡಿದ ಈ ಹುಡುಗಿ ಯಾರಿರಬಹುದೆಂದು ಆಶ್ಚರ್ಯದಿಂದ ಒಬ್ಬರ ಮುಖವನ್ನೊಬ್ಬರು ನೋಡುವರು ಆ ಪ್ರಶ್ನೆಗೆ ಉತ್ತರವೇನಾದರೂ ಸಿಕ್ಕಿದರೆ ಅದು ಇಷ್ಟು ಮಾತ್ರ. 'ಯಾರೋ ಹೊರಗಿನವಳು. ಹೆಸರು ಉಚ್ಚರಿಸಲು ಸಾಧ್ಯವಿಲ್ಲ. ಭೌತಶಾಸ್ತ್ರದ ಪಾಠಗಳು ನಡೆಯುವಾಗ ಯಾವಾಗಲೂ ಮೊದಲನೆಯ ಸಾಲಿನಲ್ಲಿ ಇರುತ್ತಾಳೆ. ಹೆಚ್ಚು ಮಾತೇ ಆಡುವುದಿಲ್ಲ.' ಮೇರಿ ಅಲ್ಲಿಂದ ದೂರ ಹೋದಂತೆ ಯಾರಾದರೂ ಆವಳ ಕೂದಲನ್ನು ನೋಡಿ 'ಸುಂದರವಾದ ಕೂದಲು' ಎನ್ನುವರು. ವಿಶ್ವವಿದ್ಯಾಲಯದಲ್ಲಿ ಸೇರಿದಮೇಲೆ ಎಷ್ಟೋ ದಿನ ಅವಳ ಜೊತೆಯವರಿಗೆ ಮೇರಿ ಸುಂದರವಾದ ಕೂದಲಿನ ಹುಡುಗಿ ಮಾತ್ರ. ಅದಕ್ಕಿಂತ ಹೆಚ್ಚಾಗಿ ಆವಳ ವಿಷಯವೇನೂ ಇತರರಿಗೆ ತಿಳಿಯದು.

ಮೇರಿಗೆ ಆ ಸಮಯದಲ್ಲಿ ಈ ಬಿಸಿರಕ್ತದ ಯುವಕರ ಪರಿಚಯ ಪಡೆಯುವ ಕುತೂಹಲವೇ ಇರಲಿಲ್ಲ. ಅವಳ ಮನಸ್ಸನ್ನು ಸೆಳೆಯುತ್ತಿದ್ದ ವ್ಯಕ್ತಿಗಳೆಂದರೆ ಸದಾ ಬಿಳೀ ನೆಕ್‌ಟೈಯನ್ನು ಧರಿಸಿ, ಮೈಮೇಲೆಲ್ಲ, ಒರೆದ ಸೀಮೆ ಸುಣ್ಣದ ಧೂಳನ್ನು ಅಂಟಿಸಿಕೊಂಡು ಗಂಭೀರವಾಗಿ ಓಡಾಡುತ್ತಿದ್ದ ದೊಡ್ಡ ದೊಡ್ಡ ಪ್ರೊಫೆಸರುಗಳು. ಆ ತಲೆಗಳಲ್ಲಿ ವಿಜ್ಞಾನದ ಸಿಧಿಯೇ ತುಂಬಿರುತ್ತಿದ್ದಿತು. ಆ ಜ್ಞಾನವನ್ನೆಲ್ಲ ಹಿರಿದು ಹಿರಿದು ರಾಶಿಹಾಕಿಕೊಂಡರೂ ಮೇರಿಯ ಆಗಿನ ಜ್ಞಾನದ ದಾಹ ಅಡಗುತ್ತಿರಲಿಲ್ಲ. ವಿಜ್ಞಾನಕ್ಕಿದ್ದ ೨೩ ಜನ ಪ್ರೊಫೆಸರುಗಳ ಪ್ರತಿಯೊಂದು ಪಾಠವನ್ನೂ ಕೇಳಬೇಕೆಂಬುದು ಮೇರಿಯ ಹಂಬಲ. ಎಂತಹ ವಿಶ್ವವಿದ್ಯಾಲಯ! ಎಂತಹ ಪ್ರೊಫೆಸರುಗಳು! ಪ್ರೊಫೆಸರ್ ಲಿಪ್‌ಮನ್ ಗಹನವಾದ ವಿಷಯಗಳನ್ನು ಚರ್ಚೆ ಮಾಡಿಮಾಡಿ ಪಾಠಹೇಳುವನು. ಜಾಟಿಗೆ ವಿಜ್ಞಾನವೆಂದರೆ ಕರತಲಾಮಲಕ. ಗಣಿತದ ಪ್ರೊಫೆಸರ್ ಪಾಲ್ ಅಪ್ಪೇಲ್ ಅಂತೂ ಮಹಾಮೇಧಾವಿ. ಸ್ಪಷ್ಟವಾದ ನಿರೂಪಣೆ ಪಾಠ ಹೇಳುವುದರಲ್ಲಿ ಅದ್ವಿತೀಯವಾದ ಶೈಲಿ. ಪಾಲ್ ಅಪ್ಪೆಲ್ ಹೊಕ್ಕನೆಂದರೆ, ಸಂತೆಮಾಳವಾಗಿದ್ದ ತರಗತಿ ಒಂದು ಕ್ಷಣದಲ್ಲಿ ನೀರವವಾಗಿ ಗಂಭೀರವಾಗುತ್ತಿತ್ತು. ಅವನ ಬಾಯಿಂದ ಒಂದು ಮಾತು ಹೊರಡುವುದಕ್ಕೆ ಮುಂಚೆಯೇ ಎಲ್ಲರ ಗಮನ ಅವನಲ್ಲಿ ನೆಡುತ್ತಿತ್ತು. ಪಾಠ ಹೇಳಲು ಪ್ರಾರಂಭಿಸಿದರೆ ವಿಜ್ಞಾನದ ಗಹನವಾದ ಭಾಗಗಳೆಲ್ಲ ಸರಳವಾಗಿ ಒಂದು ನಿಮಿಷದಲ್ಲಿ ವಿಷಯ ಅವನ ಅಧೀನವಾಗುವುದು. ಗಣಿತದ ತೊಡಕಾದ ಭಾಗಗಳೆಲ್ಲ ಅವನಿಗೆ ಆಟ. ವರ್ಣಿಸುತ್ತ ವರ್ಣಿಸುತ್ತ ಬಹಳ ಸಹಜವಾಗಿ, ಸ್ವಾಭಾವಿಕವಾಗಿ, ಗಂಭೀರವಾಗಿ ಅಪ್ಪೆಲ್ ಹೇಳುವನು. 'ಈಗ ನಾನು ಸೂರ್ಯನನ್ನು ಕೈಯಲ್ಲಿ ತೆಗೆದುಕೊಂಡು ಬಿಸಾಡುತ್ತೇನೆ....'

ಅಂತರಂಗವೆಲ್ಲ ಗಣಿತದಲ್ಲಿ ಸೆರೆಯಾಗಿ, ಮುಗ್ಧಳಾಗಿ ಕೇಳುತ್ತ ಕುಳಿತಿರುವ ಮೇರಿಗೆ ಸಂತೋಷದಿಂದ ಮೈಯಲ್ಲಿ ನವಿರೇಳುವುದು. ವಿಜ್ಞಾನಿ ಗಂಭೀರವಾಗಿ ಆಡುವ ಆ ಮಾತನ್ನು ಕೇಳಿದ ಮೇಲೆ ತಾನು ಅದಕ್ಕಾಗಿ ಪಟ್ಟ ಕಷ್ಟಗಳೆಲ್ಲ ಸಾರ್ಥಕವಾದ ಹಾಗೆ ಈ ವಿಜ್ಞಾನದ ಮುಂದೆ ಎಂತಹ ಕಾದಂಬರಿಗಳೂ ಕತೆಗಳೂ ಜಡವಾದುವುಗಳು, ಸಪ್ಪೆಯಾದುವು

ಗಳು. ವಿಜ್ಞಾನವೆಂದರೆ ಮೇರಿಗೆ ಪಂಚಪ್ರಾಣವಾಗಿ ಹೋಯಿತು. ಅದು ಅವಳ ಬಾಳನ್ನು ಸುತ್ತಿ ಹಬ್ಬಿಕೊಂಡಿತು. ಅವಳ ನರನರಗಳಲ್ಲಿ ಅದರ ಪ್ರೇಮ ಹರಿಯಿತು.

ಕೆಲವು ವಾರಗಳು ಕಳೆಯುವ ಹೊತ್ತಿಗೆ ಬ್ರೊನ್ಯ ಪ್ಯಾರಿಸ್‌ಗೆ ಹಿಂತಿರುಗಿದಳು. ಮನೆಯಲ್ಲಿ ಪುನಃ ಜೀವ ಕೂಡಿಕೊಂಡಿತು. ಕಳೆ ತುಂಬಿ ಬಂತು. ಮನೆಯಲ್ಲಿ ಊಟ ರುಚಿಯಾಗತೊಡಗಿತು. ಧೂಳು ತುಂಬಿದ್ದ ಮನೆ ಚೊಕ್ಕಟವಾಗಿ, ಅಲಂಕಾರವಾಯಿತು. ಬ್ರೊನ್ಯ ಅಂಗಡಿಗೆ ಹೋಗಿ, ಹರಾಜಿನಲ್ಲಿ ಮರದ ಸಾಮಾನುಗಳು, ಮುಂತಾದವುಗಳನ್ನೆಲ್ಲ ಕೊಂಡು ತಂದಳು. ಒಂದು ಕೋಣೆ, ರೋಗಿಗಳನ್ನು ನೋಡುವ ಕೋಣೆಯಾಯಿತು. ಗೊತ್ತಾದ ಕೆಲವು ಗಂಟೆಗಳ ಕಾಲ ಕ್ಯಾಸಿಮಿರ್ ಆ ಕೋಣೆಯನ್ನು ಆಕ್ರಮಿಸಿಕೊಂಡು, ತನ್ನ ರೋಗಿಗಳನ್ನು ನೋಡುವನು. ಉಳಿದ ಹೊತ್ತಿನಲ್ಲಿ ಬ್ರೊನ್ಯ ಹೆಂಗಸರಿಗಾಗಿ ಅಲ್ಲಿ ವೈದ್ಯ ಮಾಡುವಳು. ಇಬ್ಬರೂ ವ್ಯೈಬಗ್ಗಿಸಿ ಚಟುವಟಿಕೆಯಿಂದ ದುಡಿಯುವರು. ಸರಸರನೆ ರೋಗಿಗಳ ಮನೆಗೂ ಹೋಗಿಬರುವರು.

ಸಾಯಂಕಾಲವಾಗಿ ದೀಪಹಚ್ಚಿತೆಂದರೆ ದುಡಿದುಡಿದು ಆಯಾಸಗೊಂಡ ಇಬ್ಬರು ಡಾಕ್ಟರೂ ವಿಶ್ರಾಂತಿ ಪಡೆಯುವರು. ಎಲ್ಲ ಚಿಂತೆಗಳೂ ಮಾಯವಾಗುವುವು. ಕ್ಯಾಸಿಮಿರ್ ವಿನೋದದ ಹೊಳೆಹರಿಸುವನು. ಎಷ್ಟೇ ಬಡತನವಿರಲಿ, ಎಂತಹ ಚಿಂತೆ ಕವಿದಿರಲಿ, ಅವನ ಹಾಸ್ಯ ನಗು ಮಾತ್ರ ಮರೆಯಾಗುತ್ತಿರಲಿಲ್ಲ. ಸಾಯಂಕಾಲದ ಹೊತ್ತು ಯಾವುದಾದರೂ ನಾಟಕಶಾಲೆಯಲ್ಲಿ ಕೊನೆಯ ತರಗತಿಯ ಅಗ್ಗವಾದ ಟಿಕೆಟ್ ಕೊಂಡು ತರುವನು. ಅದಕ್ಕೂ ಕಾಸಿಲ್ಲದಿದ್ದರೆ ಮನೆಯಲ್ಲಿ ಸಾಯಂಕಾಲವೆಲ್ಲ ಪಿಯಾನೋ ಬಾರಿಸಲು ಪ್ರಾರಂಭಿಸುವನು. ಮನೆಯಲ್ಲಿ ಯಾರಾದರೂ ಸ್ನೇಹಿತರು ಇದ್ದೇ ಇರುತ್ತಿದ್ದರು.

ಒಂದು ದಿನ ಸಾಯಂಕಾಲ ಮೇರಿ ತನ್ನ ಕೋಣೆಯಲ್ಲಿ ಓದಲು ತೊಡಗಿದ್ದಾಗ, ಭಾವ ಆತುರದಿಂದ ಒಳಗೆ ಬಂದ. ಬಂದವನೇ ಮೇರಿಯನ್ನೂ ಆತುರಪಡಿಸತೊಡಗಿದ.

'ಬೇಗ, ಕೋಟು ತೊಗೋ! ನನಗೆ ಜಿಟ್ಟಿಯಾಗಿ ಟಿಕೆಟ್ ಬಂದಿದೆ! ನಾವು ಮೂರು ಜನವೂ ಸಂಗೀತಕ್ಕೆ ಹೋಗಬೇಕು.'

ಮೇರಿ ಓದಲು ಕುಳಿತುಕೊಳ್ಳುತ್ತಿದ್ದವಳು 'ಆದರೆ....' ಎಂದು ಪ್ರಾರಂಭಿಸಿದಳು. ಆವಳ ಭಾವ ಅಷ್ಟಕ್ಕೆ ಬಿಡುವವನಲ್ಲ.

'ಆದರೆ ಗೀದರೆ ಒಂದೂ ಇಲ್ಲ! ನಾನು ನಿನಗೆ ಹೇಳಿದ್ದ ಪೋಲಿಷ್ ಸಂಗೀತಗಾರ, ಪಿಯಾನೋ ಬಾರಿಸುತ್ತಾನೆ. ಜನ ಹೆಚ್ಚಾಗಿ ಟಿಕೆಟ್ ತೆಗೆದುಕೊಂಡಿಲ್ಲ. ಜಾಗವೆಲ್ಲ ಖಾಲಿ. ನಾವು ಹಜಾರವೆಲ್ಲ ತುಂಬಿಸಿ ಆ ಮನುಷ್ಯನಿಗೆ ಸಹಾಯ ಮಾಡಬೇಕು. ನಾನಾಗಲೇ ಒಂದು ದೊಡ್ಡ ತಂಡ ವನ್ನೇ ಸೇರಿಸಿದ್ದೇನೆ. ನಾವು ಕೈನೋಯುವ ವರೆಗೂ ಚಪ್ಪಾಳೆ ಬಾರಿಸಿ ಅಂತೂ ಅದು ಯಶಸ್ವಿಯಾಯಿತೆಂದು ಕಾಣುವ ಹಾಗೆ ಮಾಡಬೇಕು..'

ಈ ಡ್ಲುಸ್ಕಿ ಮೈಯಲ್ಲಿ ಉತ್ಸಾಹವಾಗಿ ಬಲವಂತ ಮಾಡಿದರೆ ಅದನ್ನು ಮೀರುವುದು ಸಾಧ್ಯವಿರಲಿಲ್ಲ. ಮೇರಿ ಪುಸ್ತಕ ಮುಚ್ಚಿ ಭಾವನ ಹಿಂದೆ ಹೊರಟಳು. ಮೂರು ಜನವೂ ಮೆಟ್ಟಲಿಳಿದು ಗಾಡಿಯನ್ನು ಹಿಡಿಯಲು ಓಡಿದರು. ಮುಕ್ಕಾಲು ಭಾಗ ಖಾಲಿಯಾಗಿದ್ದ ಹಜಾರದಲ್ಲಿ ಸಂಗೀತ ಪ್ರಾರಂಭವಾಯಿತು. ಕಣ್ಣಿನಲ್ಲಿ ಹಸಿವು ತುಂಬಿಕೊಂಡು, ಒಣಕಲು ಮುಖ ದಿಂದ ಕೂಡಿದ ಸಂಗೀತಗಾರನ ಕೈಯಲ್ಲಿ ಪಿಯಾನೋ ಜೀವದುಂಬಿತು. ಈ ಸಂಗೀತಗಾರ ಆಗಾಗ ಡ್ಲುಸ್ಕಿಯ ಮನೆಗೂ ಬರುವನು. ಅವನ ಬೆರಳು ಆಡಿತೆಂದರೆ, ಡ್ಲುಸ್ಕಿಯ ಮನೆಯ ಅಗ್ಗವಾದ ಪಿಯಾನೋ, ನಾದಮಯ-ವಾಗಿ ತೋರುವುದು. ಬಡತನದಿಂದ ಕಂಗೆಟ್ಟಿದ್ದ ಈ ಸಂಗೀತಗಾರನೇ ಮುಂದೆ ಪೋಲೆಂಡ್ ಸ್ವತಂತ್ರವಾದಾಗ ಅದರ ಮುಖ್ಯ ಮಂತ್ರಿಯಾದನು.

ಮೇರಿ ತನ್ನ ಓದಿನಲ್ಲಿ ಮಗ್ನವಾದಳು. ಮನಸ್ಸು ವಿಜ್ಞಾನದಲ್ಲಿ ತಲ್ಲೀನವಾಯಿತು. ಕಾಲೇಜಿನಲ್ಲಿ ಜೊತೆಯವರ ಪರಿಚಯವೂ ಆಯಿತು. ಪುನಃ ಪೋಲಿಷ್ ಜನರೆಲ್ಲ ಒಂದು ತಂಡವಾದರು. ಹೊರಗಿನವರೊಡನೆ ನಾಲ್ಕೈದು ಜನ ಪೋಲಿಷ್ ಜನ ಇದ್ದರೆಂದರೆ ಹಾಗೆ ತಂಡವಾಗಲೇಬೇಕಾ ಗಿತ್ತು. ಮೇರಿಯ ಈ ಸ್ವಕೀಯರೆಲ್ಲ ಸೇರಿ ನಾಟಕಗಳಾಡುವರು. ಇದರ ಲ್ಲೆಲ್ಲ ಸೇರಲು ಮೇರಿಗೆ ವಿರಾಮವಿರಲಿಲ್ಲ. ಆದರೂ ಒಂದು ನಾಟಕದಲ್ಲಿ ದೇಶಭಕ್ತಿಯಿಂದ ಕೂಡಿದ 'ಬಂಧನವನ್ನು ಕಡಿದುಕೊಂಡು ಬರುತ್ತಿರುವ

ಪೋಲೆಂಡ್' ಎಂಬ ನಾಟಕದಲ್ಲಿ ಅವಳು ಮುಖ್ಯ ಪಾತ್ರ ವಹಿಸಿದಳು. ಮೇರಿ ಆ ವಿಷಯವನ್ನು ತಂದೆಗೆ ತಿಳಿಸದೆ ಇರಲಿಲ್ಲ. ವಾರ್ಸಾದಿಂದ ಎಷ್ಟೋ ದೂರದಲ್ಲಿ ಪ್ಯಾರಿಸ್‌ನಲ್ಲಿ ಈ ಪೋಲಿಷ್ ಹೆಣ್ಣುಮಕ್ಕಳು ಸೇರಿಹೋಗಿದ್ದರೂ, ಜನ್ಮಭೂಮಿಯೂ, ಪ್ರೀತಿಯ ತಂದೆಯೂ, ಅವರನ್ನು ತಮ್ಮ ಕಡೆಗೆ ಸೆಳೆಯುತ್ತಿದ್ದರು. ಇಲ್ಲಿ ಏನು ನಡೆದರೂ ತಂದೆಗೆ ಸುದ್ದಿ ಮುಟ್ಟುತ್ತಿತ್ತು. ಪ್ಯಾರಿಸ್‌ನಂತಹ ದೊಡ್ಡ ಪಟ್ಟಣದಲ್ಲಿದ್ದುಕೊಂಡು, ಈ ಹೆಣ್ಣುಮಕ್ಕಳು ಮುದುಕನಿಗೆ ಒಂದಲ್ಲ ಒಂದು ಕೆಲಸ ಹಚ್ಚುಡುವರು. ಒಳ್ಳೆಯ 'ಟೀ' ಬೇಕಾದರೆ, ಅದು ಅವರಿಗೆ ನೇರವಾಗಿ ವಾರ್ಸಾದಿಂದ ಬರಬೇಕು. ಮನೆಗೆ ಅತ್ಯವಶ್ಯವಾದ ಸಣ್ಣ ಸಾಮಾನೊಂದು ಬೇಕಾದರೆ, ಅದು ಪ್ಯಾರಿಸ್ಸಿನಲ್ಲೂ ಸಿಕ್ಕುವುದೆಂಬ ಯೋಚನೆ ಅವರ ತಲೆಯಲ್ಲಿ ಹೊಳೆಯುತ್ತಲೇ ಇರಲಿಲ್ಲ. ಗಂಡುಸಾಗಿ ಹುಟ್ಟಿ ಮನೆಯ ಸಾಮಾನಿನ ವಿಷಯ ಹೆಚ್ಚು ತಿಳಿಯದ ತಂದೆ ಆಗ ವಾರ್ಸಾದಲ್ಲೆಲ್ಲ ಹುಡುಕಿ, ಯಾವುದು ಹದವಾಗಿದೆಯೆಂಬುದನ್ನು ಊಹಿಸಿ ಹೆಣ್ಣುಮಕ್ಕಳಿಗೆ ಕಳುಹಿಸಿಕೊಡಬೇಕು.

ಮೇರಿ ತಾನು ಎಷ್ಟು ಯಶಸ್ವಿಯಾಗಿ ಪಾತ್ರವಹಿಸಿದ್ದಳೆಂಬುದನ್ನೂ ತಂದೆಗೆ ವಿವರಿಸಿ ಬರೆದಳು. ತಂದೆಯಿಂದ ಖೇದಪೂರ್ಣವಾದ ಉತ್ತರ ಬಂತು. ಪ್ಯಾರಿಸ್‌ನಲ್ಲೂ ಅನೇಕರು ಇದರ ಮೇಲೆಲ್ಲ ಕಣ್ಣಿಟ್ಟಿರುವರೆಂದೂ, ಯಾವ ಅಪಾಯಕ್ಕೂ ಸಿಕ್ಕದೆ ವಾರ್ಸಾಕ್ಕೆ ಹಿಂತಿರುಗಿ ಬರಬೇಕಾದರೆ ಇಂತಹ ಹವ್ಯಾಸಗಳಿಗೆ ಹೋಗಬಾರದೆಂದೂ ತಂದೆ ಬರೆದಿದ್ದನು.

ಮೇರಿಗೆ ತಂದೆಯ ಮಾತಿನ ಅರ್ಥ ಪೂರ್ತಿಯಾಗಿ ಹೊಳೆಯಿತು. ಜೊತೆಗೆ ತನ್ನ ಮನಸ್ಸೂ ತನ್ನ ನಡೆವಳಿಕೆಯನ್ನು ಒಪ್ಪಲಿಲ್ಲ. ತಾನು ಕಾಸಿಗೆ ಕಾಸು ಸೇರಿಸಿ ಪ್ಯಾರಿಸ್‌ಗೆ ಬಂದದ್ದು ನಾಟಕಗಳಲ್ಲಿ ಪಾತ್ರ ವಹಿಸುವುದಕ್ಕಲ್ಲ! ತನ್ನ ಕಾಲದಲ್ಲಿ ಒಂದು ನಿಮಿಷ ಹೀಗೆ ಅನ್ಯಾಯವಾಗಿ ಕಳೆದರೆ ಅದು ತನ್ನ ಓದಿಗೆ ಮಾಡಿದ ವಂಚನೆ. ಜೊತೆಗೆ ಇನ್ನೂ ಏನೇನೊ ಯೋಚನೆಗಳು ಹೊಳೆದುವು. ಅಕ್ಕನ ಮನೆಯಲ್ಲೇನೋ ಜೀವನ ಅತ್ಯಂತ ಮಧುರವಾಗಿತ್ತು. ಆದರೆ ಇತರ ವಿಷಯಗಳು ಮನಸ್ಸನ್ನು ಓದಿನಿಂದ ತಮ್ಮ ಕಡೆಗೆ ಸೆಳೆಯುತ್ತಿದ್ದುವು. ಮನೆಯಲ್ಲಿ ಭಾವನದು ವಿಪರೀತ ಗಲಭೆ. ಸ್ನೇಹಿತರೊಡನೆ ಅವನ ವಿನೋದ, ಸಾಯಂಕಾಲವಾಯಿತೆಂದರೆ ಅವನ ಸಂಗೀತ, ಮೇರಿಯ

ಕೋಣೆಗೆ ನುಗ್ಗಿ ಹೊತ್ತು ಗೊತ್ತಿಲ್ಲದೆ ಅವನು ಗಲಭೆಯೆಬ್ಬಿಸುವುದು, ಇವನ್ನೆಲ್ಲ ತಪ್ಪಿಸುವುದು ಹೇಗೆ ಸಾಧ್ಯ? ರೋಗಿಗಳ ಗಲಾಟೆಯೂ ಮನೆಯಲ್ಲಿ ಹೆಚ್ಚಾಗಿತ್ತು. ಒಂದೊಂದು ದಿನ, ಬ್ರೊನ್ಯಳನ್ನು ಮನೆಗೆ ಕರೆದುಕೊಂಡು ಹೋಗಲು, ಅರ್ಧ ರಾತ್ರಿಗಳಲ್ಲಿ ಯಾರಾದರೂ ಬರುವರು. ಇವುಗಳ ಜೊತೆಗೆ ಮೇರಿಗೆ ಮನೆಯಿಂದ ಕಾಲೇಜಿಗೆ ಹೋಗಲು ಗಾಡಿಯು ವೆಚ್ಚವೇ ಬೇಕಾದಷ್ಟಾಗುತ್ತಿತ್ತು. ಮೇರಿ ಕೊನೆಗೆ ಸೋರ್ಬನ್ನಿನ ಹತ್ತಿರ ಲ್ಯಾಟಿನ್ ಕ್ವಾರ್ಟರ್ಸ್‌ನಲ್ಲಿ ವಾಸಮಾಡಬೇಕೆಂದು ನಿರ್ಧರಿಸಿದಳು. ಮೇರಿ ಮನೆ ಬಿಡುವುದನ್ನು ಅಕ್ಕ ಭಾವಂದಿರು ಒಪ್ಪದೆ ಕೂಗಾಡಿದರೂ ಅವಳು ತನ್ನ ಮಾತನ್ನೇ ಸಾಧಿಸಿಕೊಂಡಳು. ಬೀದಿಬೀದಿ ಅಲೆದು ಮನೆ ಗೊತ್ತು ಮಾಡಿಕೊಂಡು ಬಂದಳು. ತುಂಜದ ಬಸಿರಿ ಬ್ರೊನ್ಯ ತಂಗಿಯ ಸಾಮಾನುಗಳನ್ನೆಲ್ಲ ಕಟ್ಟಿಕೊಟ್ಟಳು. ಅಕ್ಕ, ಭಾವ ಇಬ್ಬರೂ 'ಪುಟ್ಟ ಮೇನ್ಯ'ಳನ್ನು ಹೊಸ ಸ್ಥಳದ ತನಕ ಜೊತೆಯಲ್ಲಿ ಹೋಗಿ ಬಿಟ್ಟುಬಂದರು.

---

ಅಧ್ಯಾಯ ಎಂಟು

## ಲ್ಯಾಟಿನ್ ಕ್ವಾರ್ಟರ್ಸ್

●

ಮೇರಿಗೆ, ಇಲ್ಲಿ ತನ್ನ ಸ್ವಂತ ಕೋಣೆಯಲ್ಲಿ ಹೊಸ ಜೀವನ ಪ್ರಾರಂಭವಾಯಿತು. ವಿದ್ಯಾರ್ಥಿನಿಯಾಗಿ, ಮೂರು ವರ್ಷಗಳ ದೀರ್ಘಕಾಲ ಮೇರಿ ಇಲ್ಲಿ ನಡೆಸಿದ್ದು ಉಗ್ರ ತಪಸ್ಸು. ಆ ಏಕಾಗ್ರತೆಯಲ್ಲಿ, ಆ ಧ್ಯಾನಲೀನತೆಯಲ್ಲಿ ಮೇರಿಯ ಇರವು ಕೊಚ್ಚಿ ಹೋಗಿತ್ತು. ಓದಿನಲ್ಲಿ, ವಿಜ್ಞಾನದಲ್ಲಿ ಅವಳ ಬಾಳಿನ ಇತರ ಭಾಗಗಳು ಕರಗಿ ಹೋಗಿದ್ದುವು. ಜ್ಞಾನದ ದಾಹ ಅಡಗುವ ವರೆಗೂ, ಅವಳ ಮನಸ್ಸಿನಲ್ಲಿ ಬೇರೆ ಆಸೆಗೆ, ಭಾವನೆಗೆ ಎಡೆಯಿರಲಿಲ್ಲ. ಆ ದಾಹ ತಾನೆ ಎಂತಹ ತೀಕ್ಷ್ಣವಾದದ್ದು, ತೀವ್ರವಾದದ್ದು!

ಮನುಷ್ಯ ಶತಮಾನಗಳಗಟ್ಟಲೆಯಿಂದ ಅರಿತ ಜ್ಞಾನವನ್ನೆಲ್ಲ ತನ್ನ ತಲೆಯಲ್ಲಿ ತುಂಬಿಕೊಳ್ಳಲು ಮೇರಿ ಸಿದ್ಧವಾಗಿದ್ದಳು. ಆ ಆಸೆಯನ್ನು ಮನಸ್ಸಿನಲ್ಲಿ ಹುದುಗಿಸಿಕೊಂಡು, ಆ ಬಡ ಪೋಲಿಷ್ ಹುಡುಗಿ ಮಾಡಿದ ಸಾಧನೆ ಅದ್ಭುತವಾದದ್ದು !

ಇಷ್ಟು ದಿನ ಭಾವನ ಮನೆಯಲ್ಲಿರುವ ತನಕ ಮೇರಿಗೆ, ಊಟದ ಮತ್ತು ಕೋಣೆಯ ಬಾಡಿಗೆಯ ವೆಚ್ಚ ಇರಲಿಲ್ಲ. ತನ್ನ ಸ್ವಂತ ಸಂಪಾದನೆಯ ಹಣ, ತಂದೆ ಕಳುಹಿಸಿಕೊಡುತ್ತಿದ್ದ ಅಲ್ಪಸ್ವಲ್ಪ. ಇವೆಲ್ಲ ಸೇರಿದರೆ, ಅವಳಿಗೆ ತಿಂಗಳಿಗೆ ಒದಗುತ್ತಿದ್ದ ಹಣ ಬರೀ ನಲವತ್ತು ರೂಬಲ್‌ಗಳು. ಇಷ್ಟರಲ್ಲಿ ಎಲ್ಲ ಮುಗಿಯಬೇಕಾಗುತ್ತಿತ್ತು. ಲ್ಯಾಟಿನ್ ಕ್ವಾರ್ಟರ್‌ನಲ್ಲಿ ವಾಸಿಸುತ್ತಿದ್ದ ಇತರ ಎಷ್ಟೋ ವಿದ್ಯಾರ್ಥಿಗಳೂ ಇಂತಹ ಶ್ರೀಮಂತರೇ ! ಆದರೆ ಅವರೆಲ್ಲ ಇಬ್ಬರು ಮೂವರಾಗಿ ಒಟ್ಟಿಗೆ ಇದ್ದು ಒಟ್ಟಿಗೆ ಊಟಮಾಡುತ್ತಿದ್ದರು. ಒಂಟಿಗರಾದ ಇತರರು ತಾವೇ ಅಡಿಗೆ ಮಾಡಿಕೊಳ್ಳುತ್ತಿದ್ದರು. ಮೇರಿಗೆ ಒಂಟಿಯಾಗಿರುವುದು ಮನಸ್ಸಿಗೆ ಒಪ್ಪಿತ್ತು. ಆದರೆ ಅಡಿಗೆ ಮಾಡುವುದಕ್ಕೆ ವಿರಾಮವಿರಲಿಲ್ಲ. ಅಡಿಗೆ ಮಾಡಲು ಬರುತ್ತಲೂ ಇರಲಿಲ್ಲ. ಭೌತಶಾಸ್ತ್ರವನ್ನಾಗಲಿ, ಗಣಿತವನ್ನಾಗಲಿ ಕಲಿಯಬಹುದಾದ ಹೊತ್ತನ್ನು ಅಡಿಗೆ ಬೇಯಿಸುವುದರಲ್ಲಿ ಕಳೆಯುವುದೆಂದರೆ! ಊಟದ ಸುಖ, ನಿದ್ರೆ, ವಿರಾಮ, ನಾಲಗೆಯ ರುಚಿ ಇವೆಲ್ಲ ಅವಳಿಗೆ ಮರೆತು ಹೋಗಿದ್ದುವು. ಓದೊಂದು ಬಿಟ್ಟರೆ ಅವಳ ಭಾಗಕ್ಕೆ ಇತರ ವಿಷಯಗಳು ಯಾವುದೂ ಇರಲಿಲ್ಲ. ಮಾಡಿ ತಿನ್ನುವುದಕ್ಕೆ ವಿರಾಮವಿರಲಿಲ್ಲ. ಕಾಲಕಳೆಯದೆ ಸುಖವಾಗಿ ತಿನ್ನುವುದಕ್ಕೆ ಹಣವಿರಲಿಲ್ಲ. ಆದರೆ ಇದೆಲ್ಲ ಮೇರಿಯ ಮನಸ್ಸಿಗೆ ಹತ್ತುತ್ತಿರಲಿಲ್ಲ. ತನ್ನಲ್ಲಿದ್ದ ಹಣಕ್ಕೆ ಸರಿಯಾಗಿ ಅವಳು ವೆಚ್ಚವನ್ನು ಅಳವಡಿಸಿಕೊಂಡಳು. ಹುಡುಕಿ ಹುಡುಕಿ ಇತರ ಗಲಭೆಗಳು ಸೋಕದ ಒಂದು ಕೋಣೆಯನ್ನು ಗೊತ್ತುಮಾಡಿಕೊಂಡಳು. ಆಳುಗಳ ಕೋಣೆಯಂತಿದ್ದ ಮನೆಯ ಆರನೆಯ ಅಂತಸ್ತಿನ ಆ ಕೊಠಡಿಯಲ್ಲಿ ಬೆಂಕಿ ಉರಿಸಲು ಜಾಗವಿರಲಿಲ್ಲ, ನೀರಾಗಲೀ ದೀಪವಾಗಲೀ ಇರಲಿಲ್ಲ. ಮೇರಿ ಆ ಕೋಣೆಗೆ ತನ್ನ ಸಾಮಾನುಗಳನೆಲ್ಲ ಸಾಗಿಸಿದಳು. ಒಂದು ಸಣ್ಣ ಮೇಜು, ಒಂದು ಕುರ್ಚಿ, ನೀರು ಹಿಡಿದಿಟ್ಟುಕೊಳ್ಳಲು ಒಂದು ಹೂಜಿ, ಮುಂತಾದ ಸಾಮಾನುಗಳೆಲ್ಲ ಅಲ್ಲಿ ತುಂಬಿದುವು.

ಅಪರೂಪವಾಗಿ ಯಾರಾದರೂ ಸ್ನೇಹಿತರು ಒಂದು ತನಗೆ ಕುರ್ಚಿಯಿಲ್ಲದಿದ್ದರೆ ಮೇರಿ ಒಟ್ಟೆಗಳೆಲ್ಲ ತುಂಬಿದ ಪೆಟ್ಟಿಗೆಯನ್ನು ಎಳೆದುಕೊಂಡು ಅದರ ಮೇಲೆ ಕುಳಿತುಕೊಳ್ಳುತ್ತಿದ್ದಳು. ಯಾವ ಕೆಲಸಕ್ಕಾಗಿಲೀ ಸೇವಕರನ್ನು ಇಟ್ಟುಕೊಳ್ಳುವದಕ್ಕೆ ಹಣ ಸಾಲುತ್ತಿರಲಿಲ್ಲ. ಎಂತಹ ಚಳಿಮಳೆಯಲ್ಲಿಯೂ ಮೇರಿ ಸೋರ್ಬಾನ್ನಿಗೆ ನಡೆದೇ ಹೋಗುತ್ತಿದ್ದಳು ಅದೊಂದು ದೊಡ್ಡ ಉಳಿತಾಯ. ಇದ್ದಿಲು ಉಪಯೋಗಿಸುವುದನ್ನು ಆದಷ್ಟು ಕಡಮೆ ಮಾಡಿದಳು. ಚಳಿಗಾಲದಲ್ಲಿ ಒಂದೆರಡು ಚೀಲ ಇದ್ದಿಲನ್ನು ಕೊಂಡರೆ, ಅದನ್ನು ಸ್ವಲ್ಪ ಸ್ವಲ್ಪವಾಗಿ ಬಕೆಟ್‌ನಲ್ಲಿ ತುಂಬಿಕೊಂಡು, ಆರನೆಯ ಅಂತಸ್ತಿಗೆ, ಏದುತ್ತ ಏದುತ್ತ ಸಾಗಿಸುವಳು. ಎಣ್ಣೆ ಉಳಿಸುವುದಕ್ಕೋಸ್ಕರ ರಾತ್ರಿ ಹತ್ತು ಗಂಟೆಯ ತನಕ ಪುಸ್ತಕ ಭಂಡಾರದಲ್ಲಿ ಕೆಲಸ ಮಾಡುವಳು. ಆಮೇಲೆ, ಮನೆಯಲ್ಲಿ ದೀಪ ಉರಿಯಬೇಕಾದ್ದು ರಾತ್ರಿ ಎರಡು ಗಂಟೆಯ ತನಕ ಮಾತ್ರ. ಇದ್ದಿಲು ಹೆಚ್ಚು ವೆಚ್ಚವಾದೀತೆಂದು ಹೆದರಿ ಚಳಿಗಾಲದಲ್ಲಿಯೂ ಬೆಂಕಿ ಉರಿಸುತ್ತಿರಲಿಲ್ಲ. ಆ ಕೊರೆಯುವ ಚಳಿಯಲ್ಲಿ ಲೆಕ್ಕ ಮಾಡುತ್ತ ಮಾಡುತ್ತ ಮೇರಿಯ ಕೈಬೆರಳುಗಳು ಕೋರಿಹೋಗಿ ಸೆಟೆತುಕೊಂಡು ಬಿಡುವುವು. ಹಸಿವು, ಚಳಿ ಎಂಬ ಭಾವನೆಗಳನ್ನೆಲ್ಲ ಅವಳು ಮನಸ್ಸಿನಿಂದ ಅಟ್ಟಿಬಿಡುವಳು. ವಾರವಾರಗಟ್ಟಲೆ ಆಹಾರವೆಂದರೆ ಒಣ ಬ್ರೆಡ್ ಬೆಣ್ಣೆ ಮತ್ತು ಟೀ. ಎಂದಾದರೊಂದು ದಿನ ಕೆಲವು ಹಣ್ಣುಗಳನ್ನು ತಿಂದರಾಯಿತು. ಆರೋಗ್ಯವನ್ನು ಕಾಪಾಡಿಕೊಳ್ಳುವುದಕ್ಕೆ ಮಾಂಸವಾಗಲೀ, ಸೂಪ್ ಆಗಲೀ ಬೇಕಾಗಿತ್ತು. ಆದರೆ ಮೇರಿಗೆ ಸೂಪ್ ಮಾಡುವುದಕ್ಕೆ ಬಾರದು. ಅದನ್ನು ಕಲಿತುಕೊಳ್ಳುವ ಇಷ್ಟವೂ ಇರಲಿಲ್ಲ. ಮೇರಿಗೆ ಬರುತ್ತಿದ್ದ ಒಂದೇ ಒಂದು ಕಲೆಯೆಂದರೆ ಅದು ಹೊಲಿಗೆ. ಅದೂ ಶಾಲೆಯಲ್ಲಿ ಅರಿತು ಮರೆತದ್ದು. ಮೇರಿ ಯಾವುದಾದರೂ, ಅಗ್ಗವಾದರೂ ಚೆನ್ನಾಗಿದ್ದ ಬಟ್ಟೆಗಳನ್ನು ಕೊಂಡು ಹೊಲಿದು ಧರಿಸಬಹುದಾಗಿತ್ತು. ಮೇರಿಗೆ ಆ ಕಡೆಗೆ ಮನಸ್ಸೇ ಹೋಗುತ್ತಿರಲಿಲ್ಲ. ಹೆಂಗಸರು ಸುಲಭವಾಗಿ ಮರುಳಾಗುವ ಬೆಡಗುಬಿನ್ನಾಣ, ಸೊಗಸು ಶೃಂಗಾರಗಳ ಆಸೆ ಅವಳ ಮನಸ್ಸಿನಲ್ಲಿಯೂ ಸುಳಿಯುತ್ತಿರಲಿಲ್ಲ. ಅವಳು ಉಪಯೋಗಿಸುತ್ತಿದ್ದುದು, ವಾರ್ಸಾದಿಂದ ತಂದಿದ್ದ ಒರಟು ಉಡುಪುಗಳನ್ನೇ! ಇಷ್ಟಾದರೂ ಮೇರಿ ಬಹಳ ಸುಂದರ

ಳಾಗಿದ್ದಿರಬೇಕು ಈ ಸಾಧು ಸ್ವಭಾವದ ಪೋಲಿಷ್ ಹುಡುಗಿಯನ್ನು ಜೊತೆಯುವರೆಲ್ಲ ಪ್ರೀತಿಸುತ್ತಿದ್ದರು. ಅವರಲ್ಲಿ ಡೈಡಿನ್‌ಸ್ಕಾ ಎಂಬೊಬ್ಬಳು ಮೇರಿಯ ಬೆಂಗಾವಲದ ಕೆಲಸ ಯಾರೂ ಹೇಳದೆ ತಾನೇ ಸ್ವಂತ ವಹಿಸಿಕೊಂಡಿದ್ದಳು. ಒಂದು ಸಲ ಮೇರಿಯನ್ನು ಮೆಚ್ಚಿ ಅವಳ ಹಿಂದೆ ಬರುತ್ತಿದ್ದ ಒಂದು ಗುಂಪು ಫ್ರೆಂಚ್ ಯುವಕರನ್ನು ಅವಳು ತನ್ನ ಕೊಡೆಯನ್ನು ಎತ್ತಿ ಹೊಡೆಯುವೆನೆಂದು ಹೆದರಿಸಿ ಓಡಿಸಿದಳು. ಮೇರಿಗೆ ಈ ಯುವಕರ ಚಲ್ಲಾಟ ಬೇಕೂ ಇರಲಿಲ್ಲ; ಅವಳು ಅದನ್ನು ಗಮನಿಸುತ್ತಲೂ ಇರಲಿಲ್ಲ. ಪ್ರೇಮ ಮದುವೆ ಈ ವಿಷಯಗಳಿಗೆ ಅವಳ ಹೃದಯದಲ್ಲಿ ಎಡೆಯಿರಲಿಲ್ಲ ಭೌತ ಶಾಸ್ತ್ರ, ಗಣಿತದ ಮೇಲಿನ ಗಾಢವಾದ ಪ್ರೀತಿ ಆ ವಿಲಕ್ಷಣವಾದ ಹೃದಯವನ್ನೆಲ್ಲ ತುಂಬಿ ಬಿಟ್ಟಿತ್ತು. ಜೀವನದ ಆಸೆ, ಗುರಿ ಅಂತರಂಗದಲ್ಲಿ ಸ್ಪಷ್ಟವಾಗಿ ಮೂಡಿತ್ತು. ಅದನ್ನು ನೆರವೇರಿಸುವೆನೆಂಬ ಧೀರವಾದ ಪ್ರತಿಜ್ಞೆ ದೃಢವಾಗಿತ್ತು. ಇದನ್ನೆಲ್ಲ ಸಾಧಿಸುವ ಆ ಬುದ್ಧಿ ತೀವ್ರವಾಗಿತ್ತು. ಮೇರಿ ತನ್ನ ಅಭೀಷ್ಟವೆರಡನ್ನೂ ಸಾಧಿಸಿಕೊಂಡಳು. ೧೮೯೩ ರಲ್ಲಿ ಭೌತಶಾಸ್ತ್ರದಲ್ಲಿಯೂ ೧೮೯೪ ರಲ್ಲಿ ಗಣಿತದಲ್ಲಿಯೂ ಮೇರಿಯು ಮಾಸ್ಟರ ಡಿಗ್ರಿಯನ್ನು ಸಂಪಾದಿಸಿದಳು.

ಆ ಅವಿಶ್ರಾಂತವಾದ ಪರಿಶ್ರಮ, ಓದುಗಳ ಮಧ್ಯೆ ಮೇರಿಯೇನೋ ಹಸಿವು, ನಿದ್ರೆ, ವಿರಾಮ ಇವುಗಳನ್ನೆಲ್ಲ ಮನಸ್ಸಿನಿಂದ ಅಟ್ಟಿಬಿಟ್ಟಿದ್ದಳು. ಆದರೆ, ಶರೀರ ದಿನದಿನಕ್ಕೆ ಜರ್ಜರಿತವಾಗಿ ಹೋಯಿತು. ಗಟ್ಟಿಮುಟ್ಟಾಗಿ ವಾರ್ಸಾದ ರೈಲುಗಾಡಿಯಲ್ಲಿ ಹತ್ತಿದ್ದ ದೃಢಕಾಯದ ಪೋಲಿಷ್ ಹುಡುಗಿ ಈಗ ಸಣ್ಣಾಗಿ ಸೊರಗಿಹೋಗಿದ್ದಳು. ಲೆಕ್ಕ ಮಾಡಿಮಾಡಿ ಮೇಜಿನಿಂದ ಎದ್ದಳೆಂದರೆ ತಲೆ ತಿರುಗಲು ಪ್ರಾರಂಭಿಸುವುದು. ಒಂದೆರಡು ಸಲ ಕಷ್ಟಪಟ್ಟು ಹಾಸಿಗೆಯ ತನಕ ಹೇಗೋ ಹೋದಕೂಡಲೆ ಅಲ್ಲಿ ಮೂರ್ಛೆ ಬೀಳುವಳು. ಎಚ್ಚರವಾದ ಮೇಲೆ ತನಗೇಕೆ ಹೀಗಾಯಿತೆಂದು ಮೇರಿ ಆಶ್ಚರ್ಯಪಡುವಳು. ಹೊಟ್ಟೆಗೆ ಸಾಲದೆಂಬ ವಿಷಯ ಮಾತ್ರ ಮೇರಿಗೆ ಹೊಳೆಯುತ್ತಿರಲಿಲ್ಲ. ತನಗೇನೋ ರೋಗ ಎಂದು ಭಾವಿಸಿಕೊಳ್ಳುವಳು. ಆ ರೋಗ ತನ್ನ ಶರೀರಕ್ಕಲ್ಲವೇನೋ ಎಂಬಂತೆ ಅದನ್ನು ಮನಸ್ಸಿನಿಂದ ಒತ್ತರಿಸಿಬಿಡುವಳು ಒಂದೊಂದು ಸಲ ಅಕ್ಕನನ್ನು ನೋಡಲು ಹೋದಾಗ, ಭಾವನ

ಮತ್ತು ಅಕ್ಕನ ಪ್ರಶ್ನೆಗಳಿಗೆಲ್ಲ ಸಮರ್ಪಕ ಉತ್ತರಕೊಡುವಳು. ಏಕೆ ಹೀಗಿದ್ದೀಯೆ ಎಂದರೆ ಓದು ಹೆಚ್ಚು ಎನ್ನುವಳು. ತನ್ನ ವಿಷಯವನ್ನು ಎತ್ತಗೊಡದೆ ಅಕ್ಕನ ಮಗುವಿನೊಡನೆ ಆಡಲು ತೊಡಗುವಳು. ಮೇರಿಯ ಹಸಿವು ನಿಶ್ಶಕ್ತಿ ಎಷ್ಟಕ್ಕಿಟ್ಟುಕೊಂಡಿದೆ ಎನ್ನುವುದು ಅಕ್ಕನಿಗಾಗಲಿ, ಭಾವನಿಗಾಗಲಿ ತಿಳಿಯಲಿಲ್ಲ. ಅದು ತಿಳಿಯುತ್ತಲೂ ಇರಲಿಲ್ಲ.

ಒಂದು ದಿನ ಮೇರಿ ಅವಳ ಜೊತೆಯವರ ಮುಂದೆಯೇ ಮೂರ್ಛೆ ಹೋದಳು. ಜೊತೆಯ ಸ್ನೇಹಿತರು ಇಬ್ಬರು ಡಾಕ್ಟರರಿಗೂ ಸುದ್ದಿ ಮುಟ್ಟಿಸಿದರು. ಎರಡು ಗಂಟೆ ಕಳೆಯುವ ವೇಳೆಗೆ ಭಾವ ಮೇರಿಯ ಕೋಣೆಗೆ ಓಡೋಡಿ ಬಂದ. ಆ ಮೊಂಡ ಪೋಲಿಷ್ ಹುಡುಗಿ ಆಗಲೇ ಮೇಜಿನ ಮುಂದೆ ಕುಳಿತು ಪಾಠ ಓದುತ್ತಿದ್ದಳು. ಭಾವ ಕಾಯಿಲೆಯೇನಿರಬಹುದೆಂದು ಮೇರಿಯನ್ನು ಪರೀಕ್ಷೆ ಮಾಡಿ ನೋಡಿದ. ಅದಕ್ಕಿಂತ ಚೆನ್ನಾಗಿ ಕೋಣೆಯನ್ನೆಲ್ಲ ಪರೀಕ್ಷೆ ಮಾಡಿ ನೋಡಿದ ಚೊಕ್ಕಟವಾದ ತಟ್ಟೆಗಳು, ಒಂದು ಟೀ ಪೊಟ್ಟಣವನ್ನುಳಿದು ತಿನ್ನುವ ಸಾಮಾನು ಏನೂ ಇಲ್ಲದುದು, ಇವೆಲ್ಲ ದೃಷ್ಟಿಗೆ ಬೀಳುವ ಹೊತ್ತಿಗೆ ಅವನಿಗೆ ಕಾಯಿಲೆಯ ವಿಚಾರ ಪೂರ್ತಿ ಅರ್ಥವಾಯಿತು. ಕೂಡಲೆ ಭಾವ ಮೇರಿಯನ್ನು ಕೇಳಿದ:

'ಇವೊತ್ತು ಏನು ತಿಂದೆ?'

'ಇವತ್ತೇ?......ಗೊತ್ತಿಲ್ಲ. ಈಗ ಸ್ವಲ್ಪ ಹೊತ್ತಿಗೆ ಮುಂಚೆ ಊಟ ಮಾಡಿದೆ.'

'ಏನು ಊಟ ಮಾಡಿದೆ?'

'ಕೆಲವು ಚೆರಿಹಣ್ಣುಗಳು....ಇನ್ನೂ ಏನೇನೋ.'

ಭಾವ ಬಿಡಲಿಲ್ಲ, ಎಲ್ಲವನ್ನೂ ಮೇರಿಯ ಬಾಯಿಂದಲೇ ಹೊರಡಿಸಿದ. ಹಿಂದಿನ ದಿನ ಸಾಯಂಕಾಲದಿಂದ ಮೇರಿ ತಿಂದುದು ಒಂದು ಕಂತೆ ಮೂಲಂಗಿ ಮತ್ತು ಅರ್ಧ ಪೌಂಡು ಚೆರಿಹಣ್ಣು. ಹಿಂದಿನ ರಾತ್ರಿ ಎಚ್ಚರವಾಗಿದ್ದದ್ದು ರಾತ್ರಿ ಮೂರುಗಂಟೆಯ ವರೆಗೆ. ಕೇವಲ ನಾಲ್ಕು ಗಂಟೆಗಳ ಕಾಲ ನಿದ್ದೆ ಮಾಡಿ, ಸೋರ್ಬನ್ನಿಗೆ ಹೋಗಿಬಂದು, ಉಳಿದಿದ್ದ ಮೂಲಂಗಿಯನ್ನು ತಿಂದು ಮುಗಿಸಿದ್ದಳು. ಆಮೇಲೆ ಮೂರ್ಛೆಹೋದಳು.

ಡ್ಲುಸ್ಕಿ ಉದ್ಬುದ್ಧವಾಗಿ ಬೋಧನೆ ಮಾಡುತ್ತ ನಿಲ್ಲಲಿಲ್ಲ. ಕಣ್ಣಿನಲ್ಲಿ

ಆಯಾಸ ತುಂಬಿಕೊಂಡು ತನ್ನ ಕಡೆಗೆ ದೃಷ್ಟಿಯೆತ್ತಿ ನಸುನಗುತ್ತಿದ್ದ ಮೇರಿಯನ್ನು ನೋಡುತ್ತ ನೋಡುತ್ತ ಅವನಿಗೆ ಅವಳ ಮೇಲಿನ ಕೋಪ ನೆತ್ತಿಗೆ ಏರಿತ್ತು. ತನ್ನ ಮೇಲೂ ಕೋಪ ಕೆಂಡವಾಗಿತ್ತು. ಮುದುಕ ಸ್ಕ್ಲೊಡೊವ್‌ಸ್ಕಿ ತನ್ನ 'ಪುಟ್ಟ ಮೇನ್ಯ'ಳನ್ನು ನೋಡಿಕೊಳ್ಳಲು ಅಳಿಯನಿಗೆ ಒಪ್ಪಿಸಿರುವಾಗ ತಾನು ಹೀಗೇ ಆ ಹುಡುಗಿಯನ್ನು ನೋಡಿಕೊಳ್ಳುವುದು? ಬೇಡ ಬೇಡ ಎಂದು ಹೇಳುತ್ತಿದ್ದ ಮೇರಿಯ ಮಾತುಗಳಿಗೆ ಕಿವಿಗೊಡದೆ ಕ್ಯಾಸಿಮಿರ್, ಅವಳ ಕೈಯಲ್ಲಿ ಅವಳ ಕೋಟನ್ನೂ ಹ್ಯಾಟನ್ನೂ ತುರುಕಿ, ಮುಂದಿನ ವಾರಕ್ಕೆ ಬೇಕಾಗುವ ಪುಸ್ತಕಗಳನ್ನೂ ಕಾಗದಗಳನ್ನೂ ತೆಗೆದುಕೊಂಡು ಹೊರಡೆಂದು ಆಜ್ಞಾಪಿಸಿದ. ಮಾತನ್ನೇನೂ ಆಡದೆ, ಮನೆಗೆ ಅವಳನ್ನು ಕರೆದುಕೊಂಡು ಹೊರಟ. ಬಾಗಿಲಿಗೆ ಬರುತ್ತಲೇ ಬ್ರೊನ್ಯಳನ್ನು ಕೂಗಿದ.

ಇಪ್ಪತ್ತು ನಿಮಿಷ ಕಳೆಯುವ ಹೊತ್ತಿಗೆ ಮೇರಿ ಭಾವ ಕೊಟ್ಟ ಔಷಧಗಳನ್ನೆಲ್ಲ ಕುಡಿದಳು. ದಡಬಡನೆ ಅಡಿಗೆಮನೆಗೆ ಹೋಗಿದ್ದ ಬ್ರೊನ್ಯ ತಟ್ಟೆತಟ್ಟೆಗಳಲ್ಲಿ ತಿನ್ನುವುದಕ್ಕೆ ತಂದಿಟ್ಟಳು. ಆ ರಾತ್ರಿ ಬ್ರೊನ್ಯಳೇ ತಂಗಿಯ ಕೋಣೆಗೆ ಹೋಗಿ ಹನ್ನೊಂದು ಗಂಟೆಗೆ ಸರಿಯಾಗಿ ದೀಪ ಆರಿಸಿದಳು. ಅನೇಕ ದಿನ ಅಕ್ಕನ ಮನೆಯಲ್ಲಿ ಹೊಟ್ಟೆತುಂಬ ಊಟ ಮಾಡಿ, ಕಣ್ಣು ತುಂಬ ನಿದ್ರೆ ಮಾಡಿದ ಮೇಲೆ ಮೇರಿಗೆ ಶಕ್ತಿ ಕೂಡಿಕೊಂಡಿತು. ಹತ್ತಿರ ಹತ್ತಿರವಾಗುತ್ತಿದ್ದ ಪರೀಕ್ಷೆಯ ಚಿಂತೆ ಹತ್ತಿದ್ದ ಮೇರಿ, ಆರೋಗ್ಯ ಸರಿಯಾಗಿ ನೋಡಿಕೊಳ್ಳುವೆನೆಂದು ಮಾತುಕೊಟ್ಟು ಪುನಃ ತನ್ನ ಕೋಣೆಗೆ ಹೊರಟಳು. ಮಾತುಕೊಟ್ಟದ್ದೆಷ್ಟೋ ಅಷ್ಟೇ. ಮಾರನೆಯ ದಿನದಿಂದಲೇ ಆಹಾರದ ಮೊದಲಿನ ಕ್ರಮವೇ ಸರಿಯಾಗಿ ಪ್ರಾರಂಭವಾಯಿತು

ಓದು, ಕೆಲಸ ಮೊದಲಿಗಿಂತ ಹೆಚ್ಚಾಯಿತು. ಪ್ರಯೋಗಶಾಲೆಯಲ್ಲಿ ನಿಂತು, ಸೂಕ್ಷ್ಮವಾದ ಪ್ರಯೋಗಗಳನ್ನು ಹದ ತಪ್ಪದಂತೆ ಮಾಡುವುದು ಅಭ್ಯಾಸವಾಯಿತು. ಕೆಲವು ದಿವಸಗಳಲ್ಲಿಯೇ ಮೇರಿ, ಪ್ರೊಫೆಸರ್ ಲಿಪ್‌ಮನ್‌ನ ನೇತೃತ್ವದಲ್ಲಿ ಸಣ್ಣ ಸಣ್ಣ ಸಂಶೋಧನೆಗಳಲ್ಲಿ ತೊಡಗಿದಳು. ಪ್ರಯೋಗಶಾಲೆಯ ವಾತಾವರಣ ಅವಳ ಜೀವಕ್ಕೆ ಒಗ್ಗಿತ್ತು. ಮೇಜಿನ ಮುಂದೆ ನಿಂತು ಮೈಯೆಲ್ಲ ಕಣ್ಣಾಗಿ, ಗಮನವನ್ನೆಲ್ಲ ಪ್ರಯೋಗಗಳಲ್ಲಿ ಕೇಂದ್ರೀಕರಿಸಿ, ಫಲಿತಾಂಶವನ್ನು ನಿರೀಕ್ಷಿಸುವುದು, ಅವಳ ಕೊನೆಯ ದಿನದ

ತನಕ ಅವಳಿಗೆ ಪ್ರಿಯವಾಗಿತ್ತು. ಗಣಿತ, ಭೌತಶಾಸ್ತ್ರಗಳ ಜೊತೆಗೆ, ಮೇರಿ ಫ್ರೆಂಚ್ ಭಾಷೆಯನ್ನೂ ಚೆನ್ನಾಗಿ ಕಲಿತಳು. ಇತರ ಪೋಲಿಷ್ ವಿದ್ಯಾರ್ಥಿಗಳಂತೆ ಹರುಕುಮುರುಕಾಗಿ ಫ್ರೆಂಚ್ ಭಾಷೆಯಲ್ಲಿ ಮಾತಾಡುವುದಕ್ಕೆ ಅವಳ ಮನಸ್ಸು ಒಪ್ಪುತ್ತಿರಲಿಲ್ಲ.

ಜುಲೈ ತಿಂಗಳಲ್ಲಿ ಪರೀಕ್ಷೆ ಪ್ರಾರಂಭವಾಯಿತು. ಪರೀಕ್ಷೆಗೆ ಕುಳಿತಿದ್ದವರು ಮೂವತ್ತು ಜನ ವಿದ್ಯಾರ್ಥಿಗಳು. ಪರೀಕ್ಷೆಯ ಪ್ರಶ್ನೆಪತ್ರಿಕೆ ಕೈಗೆ ಬಂದಿತೆಂದರೆ, ಮೇರಿಗೆ, ಭಯ, ಗಾಬರಿ! ಅಕ್ಷರಗಳೆಲ್ಲ ಕಾಗದದ ಮೇಲೆ ಕುಣಿಯುವಂತೆ ತೋರುತ್ತಿತ್ತು. ಎಷ್ಟೋ ನಿಮಿಷಗಳ ಹೊತ್ತು ಅದನ್ನು ಓದಲಾರದೆ ಮೇರಿ ಕುಳಿತಿರುತ್ತಿದ್ದಳು. ಪರೀಕ್ಷೆ ಮುಗಿದು ಫಲಿತಾಂಶಕ್ಕೆ ಎಷ್ಟೋ ದಿನ ಕಾದ ಮೇಲೆ, ಆ ದಿನ ಓಡಿ ಬಂತು. ಆ ದಿನ ಮೇರಿ, ವಿದ್ಯಾರ್ಥಿಗಳೂ, ಅವರ ಮನೆಯವರೂ ಕಿಕ್ಕಿರಿದು ತುಂಬಿದ್ದ ಹಜಾರದಲ್ಲಿ ನುಸಿದು-ಕೊಂಡು ಹೋಗಿ ನಿಂತಳು. ಆ ನೂಕು ನುಗ್ಗಲಾಟದಲ್ಲಿ ಅಲ್ಲಿಂದಲ್ಲಿಗೆ ತಳ್ಳಿಸಿಕೊಂಡು, ಪರೀಕ್ಷಕನ ಬರವನ್ನೇ ಕಾತರದಿಂದ ಕಾಯುತ್ತಿದ್ದಳು. ಪರೀಕ್ಷಕ ಬಂದು, ತೇರ್ಗಡೆಯಾದವರ ಹೆಸರುಗಳನ್ನು ಅವರವರು ಸಂಪಾದಿಸಿದ್ದ ಸ್ಥಾನಗಳ ಕ್ರಮದಲ್ಲಿ ಓದಬೇಕಾಗಿತ್ತು. ಕೊನೆಗೆ ಪರೀಕ್ಷಕನು ಬಂದು ನಿಂತ. ನೀರವವಾಗಿ, ಗಂಭೀರವಾಗಿದ್ದ ಹಜಾರದಲ್ಲಿ ಮೊದಲ ಹೆಸರು ಸ್ಪಷ್ಟವಾಗಿ ಕೇಳಿಸಿತು: ' ಮೇರಿ ಸ್ಕ್ಲೊಡೊವ್‌ಸ್ಕ '. ಅದ್ಭುತವಾದ ಸಾಧನೆಗೆ ತಕ್ಕಂತಹ ಸಿದ್ಧಿ ದೊರಕಿತ್ತು.

ಮೇರಿಯ ಮನಸ್ಸಿನ ಉದ್ವೇಗವನ್ನು ಯಾರೂ ಊಹಿಸಲು ಸಾಧ್ಯವಿರಲಿಲ್ಲ. ಜೊತೆಯವರ ಅಭಿನಂದನಗಳಿಂದ ತಪ್ಪಿಸಿಕೊಂಡು ಅವಳು ಅಲ್ಲಿಂದ ಓಡಿಹೋದಳು. ಮೂರು ತಿಂಗಳು ಪೋಲೆಂಡಿನಲ್ಲಿರುವ ಸುಯೋಗ ಒದಗಿ ಬಂದಿತ್ತು. ಮೇರಿ ಮನೆಯ ಸಾಮಾನುಗಳನ್ನೆಲ್ಲ ಗುರುತಿನವರೊಬ್ಬರಿಗೆ ಒಪ್ಪಿಸಿದಳು. ಆ ಸಾಮಾನುಗಳ ಬೆಲೆಯೂ ಇಪ್ಪತ್ತು ಫ್ರಾಂಕುಗಳಿಗಿಂತ ಹೆಚ್ಚಾಗಿರಲಿಲ್ಲ. ಇಷ್ಟುದಿನ ಎಚ್ಚರಿಕೆಯಿಂದ ಕಾಪಾಡಿಕೊಂಡಿದ್ದ ಎಲ್ಲ ಹಣವನ್ನೂ ಮನೆಯವರಿಗಾಗಿ ಪ್ಯಾರಿಸ್ ಸಾಮಾನುಗಳನ್ನು ಕೊಳ್ಳುವುದರಲ್ಲಿ ಕಳೆದಳು. ಕೊನೆಗೆ ಮೇರಿ ಒಂದು ಕಾಸನ್ನೂ ಬಳಿಯಲ್ಲಿಟ್ಟುಕೊಳ್ಳದೆ ರೈಲುಗಾಡಿಯನ್ನು ಹತ್ತಿದಳು. ವಾರ್ಸಾದಲ್ಲಿ, ಮುದುಕ ತಂದೆ, ಹೆಲಾ,

ಜೋಸೆಫ್ ಇವರೆಲ್ಲ ಇರುವಾಗ ಅವಳಿಗೇನು ಯೋಚನೆ? ಅಲ್ಲಿ ಮನೆಗೆ ಹೋದ ಮೇಲೆ, ಒಣಗಿ ಕಡ್ಡಿಯಾಗಿದ್ದ ಮೇರಿಯನ್ನು ನೋಡುತ್ತಲೇ ಎಲ್ಲರಿಗೂ ಕೋಪ ಬಂತು. ಆ ಕೋಪದಲ್ಲಿ ಪ್ರತಿಯೊಬ್ಬರೂ ಮೇರಿಯ ಹೊಟ್ಟೆಗೆ ಆದಷ್ಟು ಆಹಾರವನ್ನು ಗಿಡಿಯುವ ಪ್ರತೀಕಾರವನ್ನು ಕೈಗೊಂಡರು. ಮೇರಿ ಪುನಃ ಪ್ಯಾರಿಸ್‌ಗೆ ಬರುವ ವೇಳೆಗೆ ಹೇರಳವಾಗಿ ತಿಂದು ತಿಂದು ಇರಬೇಕಾಗಿದ್ದಕ್ಕಿಂತ ಕೊಂಚ ಹೆಚ್ಚು ದಪ್ಪವಾಗಿಯೇ ಇದ್ದಳು.

ಆದರೆ ಪ್ರತಿಸಲ ಊರಿಗೆ ಹೋಗಿ ಪ್ಯಾರಿಸ್‌ಗೆ ಹಿಂತಿರುಗುವಾಗಲೂ ಕಾಸಿಲ್ಲದ ಚಿಂತೆ ಎಡೆಬಿಡದೆ ಹತ್ತುತ್ತಿತ್ತು. ಅವಳು ಕೂಡಿಹಾಕಿದ್ದ ಹಣ ದಿನದಿನಕ್ಕೆ ಕರಗುತ್ತಿತ್ತು. ತಂದೆ ಇವಳಿಗೆ ಹಣ ಕಳುಹಿಸಲು ಎಷ್ಟೊಂದು ಹೆಣಗುತ್ತಿದ್ದನೆಂಬುದನ್ನು ವಾರ್ಸಾಕ್ಕೆ ಹೋದಾಗಲೆಲ್ಲ ಮೇರಿಗೆ ತಿಳಿಯುತ್ತಿತ್ತು. ಆ ಮನುಷ್ಯ ಕೈತುಂಬ ಹಣ ಸಂಪಾದಿಸುವ ಯೋಗ್ಯತೆಯನ್ನು ಯಾವಾಗಲೂ ಪಡೆಯಲಿಲ್ಲ. ಮಗಳಿಗೆ ಹಣ ಕಳುಹಿಸಲು ಸ್ಕ್ಲೊಡೊವ್‌ಸ್ಕಿ ಎಷ್ಟೋ ಒಪ್ಪ ಮಾಡಬೇಕಾಗುತ್ತಿತ್ತು. ೧೮೯೩ರಲ್ಲಿ ಪ್ಯಾರಿಸ್‌ಗೆ ಹೊರಡುವಾಗ ಮೇರಿಗೆ ಈ ಸಂಕಟ ಸಹಿಸಲಾರದಷ್ಟಾಯಿತು. ಪುನಃ ಓದಲು ಹೋಗಬಾರದೆಂದೇ ನಿರ್ಧರಿಸುವ ಹೊತ್ತಿಗೆ ಅನಿರೀಕ್ಷಿತವಾಗಿ ಸಹಾಯ ಒದಗಿ ಬಂತು. ಮೇರಿಗೆ ಭವ್ಯವಾದ ಭವಿಷ್ಯವುಂಟೆಂದು ನಂಬಿದ್ದ ಡೈಡಿನ್‌ಸ್ಕ, ಅಲೆಕ್ಸಾಂಡ್ರಾವಿಚ್ ವಿದ್ಯಾರ್ಥಿವೇತನವನ್ನು ಅವಳಿಗೆ ದೊರಕಿಸುವುದಕ್ಕೋಸ್ಕರ ವಿಶ್ವಪ್ರಯತ್ನ ಮಾಡಿ ಜಯಶಾಲಿಯಾಗಿದ್ದಳು. ೬೦೦ ರೂಬೆಲ್ಲುಗಳು ತಾನಾಗಿ ಒದಗಿದುವು. ಅದನ್ನು ಕೇಳಿ ಮೇರಿಗಾದ ಸಂತೋಷ ಅಷ್ಟಿಷ್ಟಲ್ಲ. ಪ್ಯಾರಿಸ್‌ನ್ನು ಇನ್ನು ಕಾಣಲಾರೆನೆಂದಿದ್ದವಳು ಪ್ಯಾರಿಸ್‌ಗೆ ಓಡೋಡಿ ಬಂದಳು. ಕನಸು ಮನಸಿನಲ್ಲಿ ನೆನೆಸದೆ ಸಿಕ್ಕಿದ ಹಣದಲ್ಲಿ ಮೇರಿ ಒಂದು ಕಾಸನ್ನೂ ಅನ್ಯಾಯವಾಗಿ ಕಳೆಯಲಿಲ್ಲ. ಮುಂದೆ ಕೆಲವರ್ಷಗಳಾದ ಮೇಲೆ ಮೊತ್ತಮೊದಲು ಸಂಪಾದನೆ ಪ್ರಾರಂಭವಾದ ಕೂಡಲೆ ಮೇರಿ, ೬೦೦ ರೂಬಲ್‌ಗಳನ್ನು ಕೂಡಿಟ್ಟು ಆ ವಿದ್ಯಾರ್ಥಿವೇತನದ ನಿಧಿಗೆ ಹಿಂದಕ್ಕೆ ಕೊಟ್ಟಳು. ಆ ಕಾರ್ಯದ ಹಿಂದಿದ್ದ ಭಾವನೆ ಉದಾತ್ತವಾದದ್ದು. ಆ ವೇತನ ತನಗೆ ಕೊಟ್ಟ ಗೌರವದ ಸಾಲ, ಅದನ್ನು ಹಿಂದಕ್ಕೆ ಕೊಟ್ಟು ಇನ್ನೊಬ್ಬ ಬಡ ವಿದ್ಯಾರ್ಥಿನಿಗೆ ಸಹಾಯವಾಗದೆ ಹೋದರೆ, ತನ್ನ ಆತ್ಮಕ್ಕೆ

ಮಾಡಿದ ವಂಚನೆ ಅದು, ಎಂದು ಮೇರಿ ನಿರ್ಧರಿಸಿದಳು. ಸಮಿತಿಯ ಕಾರ್ಯದರ್ಶಿಯೇನೋ, ತನ್ನ ಬಾಳಿನಲ್ಲಿ ಹಿಂದೆಂದೂ ನಡೆಯದ ಇಂತಹ ಘಟನೆಯನ್ನು ನೋಡಿ ಆಶ್ಚರ್ಯದಿಂದ ಕಕ್ಕಾಬಿಕ್ಕಿಯಾದನು.

ಪ್ಯಾರಿಸ್‌ನಲ್ಲಿ ಸ್ವತಂತ್ರ ಜೀವನವನ್ನು ನಡೆಸುತ್ತ, ಈ ಬಡ ಪೋಲಿಷ್ ಹುಡುಗಿ ಕಳೆದ ನಾಲ್ಕು ವರ್ಷಗಳು ಸತ್ವಪೂರ್ಣವಾದುವುಗಳು. ಬಾಳಿನ ಎಡರು-ತೊಡರುಗಳು ನಾ ಮುಂದು ತಾ ಮುಂದೆಂದು ಅಡ್ಡಗಟ್ಟುತ್ತಿದ್ದಾಗ, ಮೇರಿ ಅವುಗಳ ಮುಂದೆ ಅದ್ಭುತವಾದ ಹೋರಾಟ ನಡೆಸಲೇಬೇಕಾಗುತ್ತಿತ್ತು. ಗಂಡುಸಿನ, ಶಕ್ತಿ ದೃಢತೆಗಳು ಈ ಹೆಣ್ಣುಹೃದಯದಲ್ಲಿ ಮನೆ ಮಾಡಿದ್ದುವು. ಇಲ್ಲದಿದ್ದರೆ ನಾಲ್ಕು ವರ್ಷಗಳ ಕಡುಕಷ್ಟವಾದ ಅವಧಿಯಲ್ಲಿ ಮೇರಿ ಯಶಸ್ವಿಯಾಗುತ್ತಿರಲಿಲ್ಲ!

ಒಂದೊಂದು ಸಲ ಕಾಯಿಲೆ ಬಂದುಬಿಟ್ಟರೆ ಹುಡುಗಿ, ಒಂಟಿಯಾಗಿ, ಗುಟ್ಟಾಗಿ ಅವನ್ನೆಲ್ಲ ಅನುಭವಿಸುತ್ತಿದ್ದಳು. ಇದ್ದ ಒಂದು ಜೊತೆ ಜೋಡನ್ನು, ಸವೆದು ಕೆಟ್ಟುಹೋಗುವ ತನಕ ಉಪಯೋಗಿಸುವಳು. ಪೂರ್ತಿಯಾಗಿ ಉಪಯೋಗಕ್ಕೆ ಬಾರದಂತಾದ ಮೇಲೆ, ಹೊಸ ಜೋಡನ್ನು ಕೊಳ್ಳುವ ಒಂದು ಅಲ್ಪವಾದ ವಿಷಯ,ಒಂದು ದೊಡ್ಡ ತಳಮಳವನ್ನೇ ಹತ್ತಿಸುತ್ತಿತ್ತು. ಹೊಸ ಸಾಮಾನಿಗೆ ಹಣದ ಹೆಚ್ಚು ಭಾಗ ವೆಚ್ಚವಾಗಿ ಹೋದ ಮೇಲೆ, ಅದನ್ನು ಸರಿಮಾಡಲು, ಉರಿಸುವ ಎಣ್ಣೆಯಲ್ಲಾಗಲಿ, ತಿನ್ನುವ ಆಹಾರದಲ್ಲಾಗಲಿ, ಹಿಡಿತ ಮಾಡಿ ಕಾಸು ಉಳಿಸಬೇಕು. ಚಳಿಗಾಲದ ದಿನಗಳಲ್ಲಿ ಒಂದೊಂದು ಸಲ ಕೊರೆತ ಹೆಚ್ಚಾಗಿ ಹೋಗುವುದು. ಬೆಂಕಿಯ ಸುದ್ದಿಯಿಲ್ಲದ ಆ ಆರನೆಯ ಅಂತಸ್ತಿನ ಕೋಣೆಯಲ್ಲಿ ಮೂಳೆಗಳನ್ನು ಕೊರೆಯುವ ಚಳಿಯಲ್ಲಿ ಮೇರಿಯ ದೇಹ ನಡುಗಿಹೋಗಿ ಹಲ್ಲು ಕಟಕಟ ಎನ್ನುವುದು. ಕೊರೆತ ಮೈಯೊಳಗೆ ಹೊಕ್ಕು ನರನರಗಳನ್ನು ಅದುರಿಸುವುದು. ನಿದ್ರೆಯೂ ಬಾರದೆ ಮೇರಿ ತಲ್ಲಣಿಸುವಳು. ಇಂತಹ ಸಮಯದಲ್ಲಿ, ಹೂಜೆಯಲ್ಲಿನ ನೀರು ನಿಧಾನವಾಗಿ ಗಡ್ಡೆಗಟ್ಟುತ್ತಿರುವಾಗ, ಮೇರಿ ಎದ್ದು ತನ್ನ ಹೊದ್ದಿಕೆಯ ಜೊತೆಗೆ, ಪೆಟ್ಟಿಗೆಯೊಳಗಿರುವ ತನ್ನ ಬಟ್ಟೆಗಳನ್ನೆಲ್ಲ ಮೈಮೇಲೆ ಹೇರಿಸಿಕೊಳ್ಳುವಳು. ಕೊನೆಗೆ ಕೈಚಾಚಿ ಇದ್ದ ಒಂದು ಕುರ್ಚಿಯನ್ನೆಳೆದು ಅದನ್ನೂ

ವ್ಯೆಪೋಲೆ ಹೇರಿಕೊಂಡು, ಚಳಿ ಕಡಮೆಯಾಯಿತೆಂದು ಭಾವಿಸಿಕೊಳ್ಳುತ್ತ ನಿದ್ರೆಗಾಗಿ ಕಾಯುವಳು.

ಇಂತಹ ದಾರುಣವಾದ ವೇದನೆಗಳು, ಮೇರಿಯನ್ನು ಅಧೀರಳನ್ನಾಗಿ ಮಾಡುತ್ತಿರಲಿಲ್ಲವೆ? ತನ್ನಂತಹ ಎಷ್ಟೋ ಹುಡುಗಿಯರು, ಸುಖದಲ್ಲಿ ಬಾಳನ್ನು ಅದ್ದಿ ಮುಳುಗಿಸುತ್ತಿರುವಾಗ, ತಾನು ಹೀಗೆ ಒಬ್ಬೊಂಟಿಗಳಾಗಿ, ಅವಿಶ್ರಾಂತವಾಗಿ ಹೋರಾಡುತ್ತಿದ್ದುದು, ಅಸೂಯೆಯನ್ನಾಗಲಿ, ನೋವನ್ನಾಗಲಿ ಹುಟ್ಟಿಸುತ್ತಿರಲಿಲ್ಲವೆ? ಈ ನಾಲ್ಕು ವರ್ಷಗಳ ವಿಶ್ವವಿದ್ಯಾಲಯದ ಬದುಕು, ಮೇರಿಯ ಬಾಳಿನಲ್ಲಿ ಸರ್ವದಾ ಸುಖದ ದಿನಗಳಲ್ಲ! ದಿಗಂತವನ್ನು ಮುಟ್ಟುವ ಕೀರ್ತಿ, ಎಣೆಯಿಲ್ಲದ ಸುಖ, ಸಂತೋಷಗಳು, ಅವಳಿಗಾಗಿ ಮುಂದೆ ಕಾದಿದ್ದುವು. ಆದರೂ ತನ್ನ ಜೀವನದಲ್ಲೆಲ್ಲ ಈ ನಾಲ್ಕು ವರ್ಷಗಳು ಪೂರ್ಣವಾಗಿ ತೃಪ್ತಿಕರವಾದುವುಗಳೆಂಬ ಭಾವನೆ ಮೇರಿಯ ಮನಸ್ಸಿನಲ್ಲಿ ಬಲವಾಗಿ ಬೇರೂರಿತ್ತು. ಬಾಳಿನ ಕೊನೆಯ ದಿನದ ತನಕ ವಿದ್ಯಾರ್ಥಿಯಾಗಿಯೇ ಉಳಿದ ಮೇರಿಗೆ, ಈ ದಿನಗಳಿಗಿಂತ ಬೇರೆ ದಿನಗಳು ಹೇಗೆ ತೃಪ್ತಿಯನ್ನು ಕೊಟ್ಟಾವು? ಆರನೆಯ ಅಂತಸ್ತಿನ ಸಣ್ಣ ಕೋಣೆಯಲ್ಲಿ ಮಂಕು ದೀಪದ ಮುಂದೆ ಕುಳಿತು, ದುಡಿದುಡಿದು, ನಡೆಸಿದ ಅದ್ಭುತವಾದ ಕಹಿಯಾದ, ತನ್ನ ಬದುಕಿನಲ್ಲಿ ಸೌಂದರ್ಯದ ಭಾಗವೆಂದು ಆ ವಿಜ್ಞಾನಿಗೆ ತೋರಿದುದು ಸಹಜವೇ! ತನ್ನಂತೆ ಬಡತನದಲ್ಲಿ ಕಾಲಕಳೆದು, ತನ್ನಂತೆ ಹೋರಾಟ ನಡೆಸಿದ, ಮೇಧಾವಿಗಳಾದ ವಿಜ್ಞಾನಿಗಳ ಸಾಲಿಗೆ ಅದೃಶ್ಯಸಂಬಂಧವೊಂದು ತನ್ನನ್ನೂ ಸೇರಿಸುತ್ತಿದೆಯೆಂದು ಮೇರಿ ಭಾವಿಸಿಕೊಳ್ಳುವಳು. ಹೃದಯದಲ್ಲಿ ಒಂದೇ ಒಂದು ಗುರಿ ಸ್ಪಷ್ಟವಾಗಿ ಮೂಡಿರುವಾಗ, ಇಟ್ಟ ಹೆಜ್ಜೆ ಪ್ರತಿಯೊಂದು ಅದೇ ದಿಕ್ಕಿನಲ್ಲಿ ಮುಂದುವರಿಯುತ್ತಿರುವಾಗ, ಅಂತರಂಗ ಇತರ ಯಾವ ವಿಷಯಕ್ಕೂ ಎಡೆಗೊಡದೆ, ಓದಿನಲ್ಲಿ ತಲ್ಲೀನವಾಗಿರುವಾಗ, ಬಾಳಿನಲ್ಲಿ ಇತರ ಆಸೆ ಆಕಾಂಕ್ಷೆಯೊಂದೂ ತಲೆಹಾಕದೆ ಇರುವಾಗ, ಜ್ಞಾನಾರ್ಜನೆಗೋಸ್ಕರ ಕಳೆದ ಬಾಳಿನ ದಿನಗಳು ಹೊಟ್ಟೆಗಿಲ್ಲದಿದ್ದರೇನು, ಸಂಪೂರ್ಣವಾದ ಬದುಕು. ಈ ಹೊಟ್ಟೆಗಿಲ್ಲದ ಬಡತನ ಮೇರಿಯ ಮನಸ್ಸಿನಲ್ಲಿ ಹೆಮ್ಮೆಯ ವಿಷಯ.

—

ಅಧ್ಯಾಯ ಒಂಬತ್ತು

# ಪಿಯರಿ ಕ್ಯೂರಿ



ಮೇರಿ ತನ್ನ ಭವಿಷ್ಯದ ವಿಷಯದಲ್ಲಿ ದೃಢಮನಸ್ಕಳಾಗಿದ್ದಳು. ಜೀವ ಮೋಹಿಸಿ ಸೋತು ಮರುಳಾಗಿದ್ದ ವಿಜ್ಞಾನ ಬಾಳಿನಲ್ಲಿ ಹೆಚ್ಚು ಭಾಗವನ್ನು ಆಕ್ರಮಿಸಿಬಿಟ್ಟಿತ್ತು. ಮೇರಿ ಭೌತಶಾಸ್ತ್ರಗಳಲ್ಲಿ ಡಿಗ್ರಿ ಪಡೆದು, ಇನ್ನೇನು, ಕೆಲವು ತಿಂಗಳುಗಳಲ್ಲಿಯೇ ಗಣಿತದಲ್ಲಿಯೂ ಡಿಗ್ರಿ ಸಂಪಾದಿಸುವವಳಾಗಿದ್ದಳು. ವಿಜ್ಞಾನವನ್ನುಳಿದು ಇನ್ನಿತರ ಭಾವನೆಗಳೆಂದರೆ, ಮನೆಯವರ ಮೇಲಿನ ಮನಃಪೂರ್ವಕವಾದ ಪ್ರೀತಿ ಮತ್ತು ದೇಶಭಕ್ತಿ. ಆ ದೇಶಭಕ್ತಿ ಪ್ರತಿಯೊಬ್ಬ ಪೋಲನ ರಕ್ತದಲ್ಲಿಯೂ ಬೆರೆತುಹೋಗಿತ್ತು. ಇದಿಷ್ಟಲ್ಲದೆ ಇತರ ಪ್ರೇಮವಾಗಲಿ, ಮದುವೆಯಾಗಲಿ, ತನ್ನ ಬದುಕಿನಲ್ಲಿ ಕಾಲಿಡಲಾಗದೆಂದು ಮೇರಿ ದೃಢಸಂಕಲ್ಪ ಮಾಡಿದ್ದಳು. ಕ್ರೂರಗಳಾದ ಗಂಡುಸರು ಬಡಹುಡುಗಿಯರನ್ನು ಪ್ರೀತಿಸುವುದೆಂದರೆ ಇಲ್ಲದ ಮಾತು ಎಂದು ನಂಬಿದ್ದಳು. ಆ ಭಾವನೆಯನ್ನು ಹುಟ್ಟಿಸಿದ್ದ, ಶ್ರೀಮಂತ ಕ್ಯಾಸಿಮಿರ್‌ನ ಸಹವಾಸ ಇನ್ನೂ ನೆನಪಿನಿಂದ ಅಳಿಸಿಹೋಗಿರಲಿಲ್ಲ. ಯುವಕರೊಡನೆಯೇ ಹೊಕ್ಕು ಬಳಸುತ್ತಿದ್ದ ಇಪ್ಪತ್ತಾರುವರ್ಷದ ಸುಂದರಿಯಾದ ಮೇರಿ ಒಬ್ಬರ ಕಡೆಗೂ ಕಣ್ಣೆತ್ತಿ ನೋಡದೆ ಇದ್ದುದು ಇದಕ್ಕಾಗಿಯೇ! ಇಂತಹ ದೃಢ ಸಂಕಲ್ಪವನ್ನು ಮುರಿದು ಅವಳನ್ನು ತನ್ನ ಕಡೆಗೆ ಒಲಿಸಿಕೊಳ್ಳಲು, ಮೇರಿಯಷ್ಟೇ ವಿಲಕ್ಷಣನಾದ, ಅದ್ಭುತ ಮೇಧಾವಿಯಾದ ವ್ಯಕ್ತಿಯೊಬ್ಬ ಕಾದಿದ್ದ. ಪಿಯರಿಕ್ಯೂರಿ ಪ್ರಚಂಡ ಪ್ರತಿಭಾಶಾಲಿಯಾದ ಫ್ರೆಂಚ್ ವಿಜ್ಞಾನಿ ತಲೆತಲಾಂತರಗಳಿಂದಲೂ, ವಿಜ್ಞಾನಿಗಳೆನಿಸಿ ಪ್ರಸಿದ್ಧವಾಗಿದ್ದ ಮನೆತನದಲ್ಲಿ ಹುಟ್ಟಿದವನು. ತಂದೆ ಜೀವನೋಪಾಯಕ್ಕೆ ಡಾಕ್ಟರ್ ಆಗಿದ್ದರೂ ವಿಜ್ಞಾನ

ದಲ್ಲಿ ಪಿಯರಿ, ಶಾಲೆಗೆ ಹೋಗದಿದ್ದರೂ ಬೆಜಿಪ ಎಂಬ ಉಪಾಧ್ಯಾಯನ ಕೈಕೆಳಗೆ ಓದಿ ತನ್ನ ೧೮ನೇ ವಯಸ್ಸಿನಲ್ಲಿ ಭೌತಶಾಸ್ತ್ರದ ಮಾಸ್ಟರ್ಸ್ ಡಿಗ್ರಿಯನ್ನು ಪಡೆದಿದ್ದರೂ ಆಸಕ್ತಿಯುಳ್ಳವನು. ಅಣ್ಣ ಜಾಕ್ವೆಸ್‌ನೂ, ತಮ್ಮ ಪಿಯರಿಯೂ ವಿಜ್ಞಾನಕ್ಕೋಸ್ಕರ ಒಡುಕನ್ನು ಮೀಸಲಾಗಿಟ್ಟವರು. ಅಣ್ಣ ತಮ್ಮಂದಿರಿಬ್ಬರೂ, ಎಷ್ಟೋ ಸಂಶೋಧನೆಗಳನ್ನು ಮಾಡಿ ಪ್ರಕಟಿಸಿದ್ದರು. ಆದರೆ ಈಚೆಗೆ, ಬೇರೆ ಊರಿನಲ್ಲಿ ಜಾಕ್ವೆಸ್ ಪ್ರೊಫೆಸರ್ ಆದಾಗಿನಿಂದ ಅಣ್ಣ ತಮ್ಮಂದಿರು ಬೇರೆಯಾಗಿದ್ದರು. ಪಿಯರಿ ಕ್ಯೂರಿ ಪ್ಯಾರಿಸ್ ಶಾಲೆಯೊಂದ ರಲ್ಲಿ ಭೌತಶಾಸ್ತ್ರ, ರಸಾಯನ ಶಾಸ್ತ್ರಗಳ ಮುಖ್ಯ ಅಧ್ಯಾಪಕನಾಗಿದ್ದ. ವಿಜ್ಞಾನದ ಸಂಶೋಧನೆಗಳಲ್ಲಿ ಬಿಡುವಿಲ್ಲದೆ ತೊಡಗಿರುತ್ತಿದ್ದ. ಪಿಯರಿ ಕ್ಯೂರಿ ಎಷ್ಟು ಪ್ರತಿಭಾಶಾಲಿಯೋ, ಅಷ್ಟೇ ಉದಾತ್ತ ಸ್ವಭಾವದವನು. ಹಣವನ್ನಾಗಲಿ, ಕೀರ್ತಿಯನ್ನಾಗಲಿ ಅವನು ಎದುರುನೋಡುತ್ತಿರಲಿಲ್ಲ. ಹೆಚ್ಚು ಹಣ ಬರಬಹುದಾದ ಸಂದರ್ಭಗಳು ತಾವಾಗಿ ಮುಂದೆ ಬಂದಾಗ ಈ ಹುಚ್ಚು ವಿಜ್ಞಾನಿ ಅವುಗಳನ್ನೆಲ್ಲ ದೂರೀಕರಿಸಿದ್ದ. ಆದ್ದರಿಂದಲೇ, ಇಂಗ್ಲೆಂಡ್ ಮುಂತಾದ ಹೊರದೇಶಗಳಲ್ಲಿ, ಲಾರ್ಡ್ ಕೆಲ್ವಿನ್ ಫ್ರಾನ್ಸ್‌ನಲ್ಲಿ ಪಿಯರಿ ಕ್ಯೂರಿಯನ್ನು ಕಂಡಾಗ ಸಣ್ಣ ಸಂಬಳದ ಮೇಲೆ ತನ್ನ ಕಾಲವನ್ನೆಲ್ಲ ವಿನಿಯೋಗಿಸುತ್ತ, ಕೀರ್ತಿಯನ್ನು ಪಡೆಯಲು ಒಪ್ಪದೆ ಹೋದ ಈ ಅಸಾಧಾರಣ ಮನುಷ್ಯನನ್ನು ನೋಡಿ ಆಶ್ಚರ್ಯಗೊಂಡ. ಇಂತಹ ವ್ಯಕ್ತಿ ಮೇರಿಗೆ ಗಂಟುಬೀಳಬೇಕಾದ್ದು ಬಹಳ ಸಹಜ.

ಪಿಯರಿ ಕ್ಯೂರಿ ಮೇರಿಗೋಸ್ಕರವೇ ಕಾದಿದ್ದನೆಂದರೆ ಅದು ಹೆಚ್ಚಿನ ಮಾತೇನೂ ಅಲ್ಲ. ಮೇರಿಯಲ್ಲದೆ ಇತರರು ಯಾರನ್ನೂ ಅವನು ಮದುವೆಯಾಗುವುದು ಸಾಧ್ಯವಿರಲಿಲ್ಲ. ಮೇರಿ ಸಣ್ಣ ಹುಡುಗಿಯಾಗಿದ್ದು ಸೋರ್ಬನ್ನಿನ ಕನಸು ಕಾಣುತ್ತಿದ್ದ ದಿನಗಳಲ್ಲೇ, ಅದೇ ಸೋರ್ಬನ್ನಿನಿಂದ ಮನೆಗೆ ಹಿಂತಿರುಗಿದ್ದ ಕ್ಯೂರಿ ತನ್ನ ಡೈರಿಯಲ್ಲಿ ಹೀಗೆ ಬರೆದುಕೊಂಡಿದ್ದ '...... ಹೆಂಗಸು ಜೀವನದಲ್ಲಿ ಸರಿಯಾದ ಬದುಕಿಗೋಸ್ಕರ ಗಂಡಸರಿಗಿಂತ ಎಷ್ಟೋ ಹೆಚ್ಚಾಗಿ ಆಸೆಪಡುತ್ತಾಳೆ. ಪ್ರತಿಭಾಶಾಲಿಗಳಾದ ಹೆಂಗಸರು ಇರುವುದು ಅಪರೂಪ. ರಹಸ್ಯವಾದೊಂದು ಪ್ರೇಮದಿಂದ ಪ್ರಚೋದಿತರಾಗಿ, ನಾವು ಪ್ರಕೃತಿಗೆ ವಿರುದ್ಧವಾದ ಮಾರ್ಗವನ್ನು ಹಿಡಿಯಬೇಕಾದರೆ,

ಬುದ್ಧಿಯನ್ನೆಲ್ಲ ಜನದಿಂದ ದೂರವಾಗುವ ಯಾವುದಾದರೂ ಕೆಲಸವೊಂದ ರಲ್ಲಿ ಕೇಂದ್ರೀಕರಿಸಬೇಕಾದರೆ, ನಾವು ಹೆಂಗುಸರ ಎದುರಾಗಿ ಹೋರಾಡ ಬೇಕಾಗುತ್ತದೆ. ತಾಯಿಗೆ ಎಲ್ಲಕ್ಕಿಂತ ಹೆಚ್ಚಾಗಿ ತನ್ನ ಮಗುವಿನ ಪ್ರೀತಿ ಬೇಕು. ಅದು ಆ ಮಗುವನ್ನು ಶಕ್ತಿಹೀನವನ್ನಾಗಿ ಮಾಡಿದರೂ ಸರಿ. ಹೆಂಡತಿಗೂ ತನ್ನ ಗಂಡನ ವಿಷಯದಲ್ಲಿ ಅದೇ ಹಂಬಲ. ಒಂದು ಗಂಟೆಯ ಪ್ರೀತಿಗಾಗಿ, ಅದ್ವಿತೀಯವಾದ ಪ್ರತಿಭೆಯನ್ನು ನಷ್ಟಗೊಳಿಸುವುದು ಅವಳ ಭಾಗಕ್ಕೆ ಸಹಜವೇ. ಈ ಹೋರಾಟದಲ್ಲಿ ಎರಡು ಕಡೆಯ ಫಲಿತಾಂಶವೂ ಸಮವಲ್ಲ. ಹೆಂಗುಸರು ಯಾವಾಗಲೂ ಅದರಲ್ಲಿ ಗೆಲ್ಲುತ್ತಾರೆ. ಬದುಕು, ಪ್ರಕೃತಿ ಇವುಗಳನ್ನು ಮುಂದಿಟ್ಟುಕೊಂಡು ಅವರು ನಮ್ಮನ್ನು ಜೀವನಕ್ಕೆ ಎಳೆಯಲು ಪ್ರಯತ್ನಿಸುತ್ತಾರೆ........' ದಿನಗಳು ಕಳೆದಂತೆಲ್ಲ ಪಿಯರಿ ಕ್ಯೂರಿಗೆ ಈ ಭಾವನೆ ಬಲವಾಗುತ್ತಿತ್ತು. ಬದುಕನ್ನೆಲ್ಲ ವಿಜ್ಞಾನಕ್ಕ ಮೀಸಲಾಗಿಟ್ಟಿದ್ದ ಕ್ಯೂರಿ ತಾನೂ ಕಂಡಿದ್ದ ಎಷ್ಟೋ ಜನ ಬೆಡಗಿನ ಹುಡು ಗಿಯರಾರನ್ನೂ ಮದುವೆಯಾಗಲಿಲ್ಲ. ಹೆಂಗುಸಿನ ವಿಷಯದಲ್ಲಿ ಇಷ್ಟೊಂದು ಕಟುವಾದ ಅಭಿಪ್ರಾಯವನ್ನು ಮನಸ್ಸಿನಲ್ಲಿ ದೃಢಪಡಿಸಿಕೊಂಡು, ಮೂವ ತ್ತೈದು ವರ್ಷ ವಯಸ್ಸಿನ ತನಕ ಮದುವೆಯಾಗದೆ ಉಳಿದಿದ್ದ ಪಿಯರಿ ಕ್ಯೂರಿ, ಒಂದು ದಿನ ಬಡ ಪೋಲಿಷ್ ಹುಡುಗಿ ಮೇರಿಯನ್ನು ನೋಡಿ ದೆ. ಸ ಬೆರಗಾದ ಈ ಇಬ್ಬರು ವಿಜ್ಞಾನಿಗಳು ಸಂಧಿಸಿದ್ದು ಈ ರೀತಿ ಫ್ರೀಬರ್ಗ್ ವಿಶ್ವವಿದ್ಯಾಲಯದಲ್ಲಿ ಭೌತಶಾಸ್ತ್ರದ ಪ್ರೊಫೆಸರ್ ಆಗಿದ್ದ ಕೋವಲ್‌ಸ್ಕಿ ತನ್ನ ಹೆಂಡತಿಯೊಡನೆ ಪ್ಯಾರಿಸ್‌ಗೆ ಬಂದಿದ್ದ. ಈ ಪೋಲಿಷ್ ಪ್ರೊಫೆಸರ್ ತನ್ನ ಪರಿಚಯದ ಮೇರಿಯನ್ನು ಕಂಡು ಅವಳ ಯೋಗಕ್ಷೇಮ ವನ್ನು ವಿಚಾರಿಸಿದ. ಮೇರಿ ತನಗೆ ಸಧ್ಯದಲ್ಲಿ ಚಿಂತೆಗೆ ಕಾರಣವಾಗಿದ್ದ ವಿಷಯವನ್ನು ಅವನಲ್ಲಿ ಹೇಳಿಕೊಂಡಳು. ದೇಶೀಯ ಕೈಗಾರಿಕೆಗೆ ಪ್ರೋತ್ಸಾಹ ಕೊಡಲು ಏರ್ಪಾಟಾಗಿದ್ದ ಸಂಸ್ಥೆಯವರು ಬೇರೆ ಬೇರೆ ವಿಧದ ಉಕ್ಕುಗಳ ಆಕರ್ಷಣ ಶಕ್ತಿಯನ್ನು ಸಂಸೋಧಿಸಿ ತಿಳಿಸುವ ಕೆಲಸವನ್ನು ಮೇರಿಗೆ ಒಪ್ಪಿಸಿದ್ದರು. ಮೇರಿ ಪ್ರೊಫೆಸರ್ ಲಿಪ್‌ಮನ್ನಿನ ಪ್ರಯೋಗಶಾಲೆ ಯಲ್ಲಿ ಈ ಸಂಶೋಧನೆಯನ್ನು ನಡೆಸುತ್ತಿದ್ದಳು. ಎಷ್ಟೋ ಜನ ಅದೇ ಪ್ರಯೋಗಶಾಲೆಯಲ್ಲಿ ಕೆಲಸಮಾಡುತ್ತಿದ್ದುದರಿಂದ ಮೇರಿಗೆ ಅಲ್ಲಿ ಧಾರಾಳ

ವಾಗಿ ಸ್ಥಳ ಸಿಕ್ಕಲಿಲ್ಲ. ಸ್ಥಳವಿಲ್ಲದೆ ತೊಂದರೆ ಪಡುತ್ತಿದ್ದ ಮೇರಿಗೆ ಕೋವ ಲ್‌ಸ್ಕಿ ಒಂದು ಉಪಾಯ ಸೂಚಿಸಿದ ಭೌತಶಾಸ್ತ್ರ, ರಸಾಯನಶಾಸ್ತ್ರಗಳ ಶಾಲೆಯಲ್ಲಿ ಕೆಲಸ ಮಾಡುತ್ತಿರುವ ಪಿಯರಿ ಕ್ಯೂರಿ, ಮೇರಿಗೂ ಒಂದು ಸ್ಥಳವನ್ನು ಒದಗಿಸಿಕೊಟ್ಟಾನು ಎಂದು ಹೇಳಿದ. ಮೂರನೆಯ ದಿನ ಸಾಯಂಕಾಲ, ಟೀಗೆ ಮೇರಿ, ಮತ್ತು ಕ್ಯೂರಿಯನ್ನು ಆಹ್ವಾನಿಸಿ ಪ್ರೊಫೆಸರ್ ಇವರಿಬ್ಬರಿಗೂ ಪರಿಚಯ ಮಾಡಿಕೊಟ್ಟ. ಆ ಸಂಜೆ ಪೋಲಿಷ್ ವಿದ್ಯಾರ್ಥಿನಿ ಫ್ರೆಂಚ ವಿಜ್ಞಾನಿಯನ್ನು ಕಂಡಳು. ಎತ್ತರವಾಗಿ ಗಂಭೀರವಾಗಿದ್ದ ಮನುಷ್ಯ ತನ್ನ ವಯಸ್ಸಿಗಿಂತ ಎಷ್ಟೋ ಚಿಕ್ಕವನಾಗಿ ಕಾಣುತ್ತಿದ್ದ. ನಿಧಾನವಾದ ಸ್ಪಷ್ಟವಾದ ಶಕ್ತಿಪೂರ್ಣವಾದ ಮಾತು, ಸರಳವಾದ, ಗಂಭೀರವಾದ ಎಳೆಯ ನಗು, ಇವೆಲ್ಲ ನೋಡಿದವರ ಮನಸ್ಸಿನಲ್ಲಿ ನಂಬಿಕೆಯನ್ನು ಹುಟ್ಟಿಸುತ್ತಿದ್ದುವು. ಆಡಂಬರವಿಲ್ಲದ ಹಳೆಯ ಮಾದರಿಯ ಉಡುಪು ಮೈಮೇಲೆ ಕೂರುವುದಕ್ಕಿಂತ ಹೆಚ್ಚಾಗಿ ನೇತಾಡುತ್ತಿತ್ತು. ಇಂತಹ ಬಟ್ಟೆಯಲ್ಲಿ ಸ್ವಾಭಾವಿಕವಾದ ಮುಖದ ಸೌಂದರ್ಯ ಎದ್ದುಕಾಣುತ್ತಿತ್ತು. ಶಾಂತವಾದ ಕಣ್ಣುಗಳ ಗಾಢವಾದ ಪ್ರತಿಭಾಪೂರ್ಣವಾದ ನೋಟ, ತನ್ನ ಇರವನ್ನು ತಾನೆ ಮರೆತಂತಿರುವ ಮುಖಭಾವ, ಮೇರಿಯ ಹೃದಯವನ್ನು ತಟ್ಟಿತು.

ಫ್ರೆಂಚ ವಿಜ್ಞಾನಿಗೂ, ಪೋಲಿಷ್ ಹುಡುಗಿಗೂ ಸಂಭಾಷಣೆ ಪ್ರಾರಂಭವಾಯಿತು. ಅದರ ವಿಷಯ ವಿಜ್ಞಾನ ಎಂತಹ ಸುಂದರವಾದ ಸನ್ನಿವೇಶ! ಮುಂದೆ ಜೀವನದ ಸಂಗಾತಿಗಳಾಗಿ ಒಬ್ಬರನ್ನೊಬ್ಬರು ಅಗಲುವ ವರೆಗೆ ಆ ಎರಡು ಜೀವಗಳನ್ನು ಗಾಢವಾಗಿ ಒಂದುಗೂಡಿಸಿದ್ದೂ ವಿಜ್ಞಾನವೇ! ಮೇರಿ ಹಿಂದೆಗೆಯುತ್ತ ಪ್ರಶ್ನೆಗಳನ್ನು ಹಾಕಿ ಪಿಯರಿಯ ಸಲಹೆಗಳನ್ನು ಕಿವಿಗೊಟ್ಟು ಕೇಳಿದಳು. ಪಿಯರಿ ತಾನು ಆಗ ತೊಡಗಿದ್ದ ಸಂಶೋಧನೆಯ ವಿಷಯವನ್ನು ಅವಳಿಗೆ ವಿವರಿಸಿ ಹೇಳಿದ. ಹೀಗೆ ಒಬ್ಬ ಹೆಂಗುಸಿಗೆ, ಭೌತಶಾಸ್ತ್ರದ ಗಹನವಾದ ವಿಷಯವನ್ನು, ತನ್ನ ಪ್ರೀತಿಯ ಸಂಶೋಧನೆಯನ್ನು ಪಾರಿಭಾಷಿಕ ಶಬ್ದಗಳನ್ನು ಉಪಯೋಗಿಸುತ್ತ ವರ್ಣಿಸುವುದೆಂದರೆ, ಆ ಹೆಂಗುಸು ಅದನ್ನು ಕ್ಷಣಮಾತ್ರದಲ್ಲಿ ಅರ್ಥಮಾಡಿಕೊಂಡು, ಉತ್ಸಾಹದಿಂದ ಸ್ಪಷ್ಟವಾಗಿ ಅವನೊಡನೆ ಚರ್ಚಿಸುವುದೆಂದರೆ, ಪಿಯರಿ ಇಂತಹ ಮಧುರವಾದ ಸನ್ನಿವೇಶ

ವನ್ನು ಎಂದೂ ಊಹಿಸಿಕೊಂಡಿರಲಿಲ್ಲ. ಪಿಯುರಿ ಕ್ಯೂರಿ ಇಂತಹ ಅಪರೂಪದ ವ್ಯಕ್ತಿಯನ್ನು ಅತ್ಯಂತ ಕುತೂಹಲದಿಂದ ನೋಡಿದ. ಬೆಡಗು ಬಿನ್ನಾಣಗಳ ಸುಳಿವಿಲ್ಲದ, ಸುಂದರವಾದ, ಅದ್ಭುತ ಮೇಧಾವಿನಿಯಾದ ಈ ಪೋಲಿಷ್ ಹುಡುಗಿಯನ್ನು ನೋಡಿ ಆಶ್ಚರ್ಯಗೊಂಡ. ಅವಳ ವಿಷಯದಲ್ಲಿ ತನಗೆ ತಿಳಿದದ್ದನ್ನೆಲ್ಲ ಪುನಃ ಪುನಃ ನೆನಸಿಕೊಂಡ. ಬಡತನದಲ್ಲಿ ಶ್ರಮಿಸಿ ಹಣ ಸಂಪಾದಿಸಿ ಓದಲು ಬಂದಿರುವುದು, ಇಲ್ಲಿ ಯಾವುದೋ ಒಂದು ಕೋಣೆ ಯಲ್ಲಿ ಸ್ವತಂತ್ರವಾಗಿದ್ದುಕೊಂಡಿರುವುದು ಇವನ್ನೆಲ್ಲ ಜ್ಞಾಪಿಸಿಕೊಂಡು, 'ನೀನು ಯಾವಾಗಲೂ ಫ್ರಾನ್ಸಿನಲ್ಲೇ ಇದ್ದುಕೊಂಡಿರುವೆಯಾ?' ಎಂದು ಪ್ರಶ್ನಿಸಿದ. ಆ ಪ್ರಶ್ನೆ ಅಲ್ಲೇಕೆ ಬಂತೆಂದು ಅವನಿಗೇ ತಿಳಿಯದು. ಮೇರಿಯ ಮುಖದಲ್ಲಿ ಚಿಂತೆ ಕವಿಯಿತು. ನಿಮಿಷಮಾತ್ರದಲ್ಲಿ ವಿಜ್ಞಾನಿ ಮರೆಯಾದಳು. ಗಣಿತದ ಪರೀಕ್ಷೆ ಮುಗಿದ ಮೇಲೆ ವಾರ್ಸಾಕ್ಕೆ ಹಿಂತಿರುಗಬೇಕೆಂದೂ, 'ಪೋಲರಿಗೆ ತಮ್ಮ ಮಾತೃಭೂಮಿಯನ್ನು ತ್ಯಜಿಸಿ ಬರುವ ಹಕ್ಕಿಲ್ಲ'ವೆಂದೂ ಮೇರಿ ಹೇಳಿ ಮುಗಿಸಿದಳು. ಪಿಯುರಿ ಕ್ಯೂರಿಗೆ ಈ ಮಾತುಗಳನ್ನು ಕೇಳಿ ಮೊದಲೇ ಹುಟ್ಟಿದ್ದ ಕುತೂಹಲ ಇನ್ನಷ್ಟು ಹೆಚ್ಚಿತು.

ಪಿಯುರಿ ಕ್ಯೂರಿಗೆ ಮೇರಿಯೊಡನೆ ಪರಿಚಯ ಹೆಚ್ಚು ಮಾಡಿಕೊಂಡು ಗೆಳೆತನ ಬೆಳೆಸಬೇಕೆಂಬ ಆಸೆ ಬಲವಾಯಿತು. ತಾನು ಹೊಸದಾಗಿ ಪ್ರಕಟಿ ಸಿದ್ದ ತನ್ನ ಸಂಶೋಧನೆಯ ಪುಸ್ತಕವೊಂದನ್ನು ಅವಳಿಗೆ ಕಳುಹಿಸಿಕೊಟ್ಟ. ಅದರ ಮೊದಲ ಪುಟದ ಮೇಲೆ 'ಗೌರವ ಸ್ನೇಹಗಳೊಡನೆ' ಎಂದು ತನ್ನ ಸೊಟ್ಟಸೊಟ್ಟಾದ ಕೈಬರೆಹದಲ್ಲಿ ಬರೆದಿದ್ದ. ಲಿಪ್‌ಮನ್ನಿನ ಪ್ರಯೋಗಶಾಲೆ ಯಲ್ಲಿ ಮೇರಿಯನ್ನು ನೋಡಿ ಪರಿಚಯ ಬೆಳೆದ ಮೇಲೆ ಅವಳನ್ನು ಅವಳ ಕೋಣೆಗೆ ಬಂದು ನೋಡಬಹುದೇ ಎಂದು ಕೇಳಿದ. ಮೇರಿ ಒಪ್ಪಿ ತನ್ನ ವಿಳಾಸವನ್ನು ತಿಳಿಸಿದಳು. ಪೂರ್ಣವಾಗಿ ಬರಿದಾಗಿದ್ದ ಆ ಸಣ್ಣ ಮಾಳಿಗೆಯ ಕೋಣೆಯಲ್ಲಿ ಜೀರ್ಣವಾದ ಉಡುಪನ್ನು ಉಟ್ಟಿದ್ದ ಈ ಪೋಲಿಷ್ ಹುಡುಗಿ ಇಷ್ಟೊಂದು ಸುಂದರವಾಗಿ ಕ್ಯೂರಿಗೆ ಎಂದೂ ಕಂಡಿರಲಿಲ್ಲ. ಅಂತಹ ಪ್ರತಿಭೆ ಯೊಡಗೂಡಿದ್ದ ಬಡತನವನ್ನು ಕ್ಯೂರಿಯಲ್ಲದೆ ಯಾರು ಮೆಚ್ಚಬಲ್ಲರು?

ತಿಂಗಳುಗಳು ಕಳೆದಂತೆ ಈ ಸಣ್ಣ ಪರಿಚಯ ದೊಡ್ಡದಾಗಿ, ಮನಸ್ಸು ಒಂದಕ್ಕೊಂದು ಹೊಂದಿಕೊಂಡು ಸಲಿಗೆ ಹೆಚ್ಚಿ ಪರಸ್ಪರ ನಂಬಿಕೆ ಬೆಳೆ

ಯಿತು. ಕ್ಯೂರಿಯ ಹೃದಯವಂತೂ ಈ ಹುಡುಗಿಗೆ ಸೋತು ಸೆರೆಯಾಯಿತು. ಮೇರಿಯ ಪ್ರೇರೇಪಣೆಯಿಂದ ಡಾಕ್ಟರ್ ಡಿಗ್ರಿಯನ್ನು ಪಡೆಯುವುದಕ್ಕೆ ಆವನು ಪ್ರತಿಭಾಪೂರ್ಣವಾದ ಒಂದು ಲೇಖನವನ್ನು ಬರೆದ

ಒಂದು ದಿನ ಸಾಯಂಕಾಲ ಅದೇ ಕೋಣೆಯಲ್ಲಿ ಅವರು ಸೇರಿದ್ದರು. ಇಬ್ಬರೂ ಹೊರಗೆ ಹೋಗಿ ಆಗತಾನೇ ಬಂದಿದ್ದರು. ಬರುವಾಗ ತಂದಿದ್ದ ಬಿಳಿಯ ಹೂಗಳು ಮೇಜಿನ ಮೇಲೆ ಗಾಜಿನ ಲೋಟದಲ್ಲಿದ್ದುವ. ಪಿಯುರಿ ಕ್ಯೂರಿ ಆ ಸಂಜೆ, ತನ್ನ ಮನೆಯ ವಿಷಯವನ್ನೆಲ್ಲ ಅವಳಿಗೆ ಹೇಳಿದ ಆವಸರ ಪ್ರಕೃತಿಯ ಕರುಣಾಮಯನಾದ ತಂದೆಯನ್ನು ವರ್ಣಿಸಿದ. ಪ್ರೀತಿಯ ತಾಯಿಯ ವಿಷಯವಾಗಿ ಹೇಳಿದ. ಅಣ್ಣನೊಡನೆ ಎಳೆಯತನದಲ್ಲ ಹುಚ್ಚು-ಹುಚ್ಚಾಗಿ ಆಡಿದ್ದನ್ನೆಲ್ಲ ವಿವರಿಸಿದ. ಮೇರಿ ಕೇಳಿ ಆಶ್ಚರ್ಯಗೊಂಡಳು. ಗೌರವಾಸ್ಪದವಾದ, ಸಂಸ್ಕೃತಿಪೂರ್ಣವಾದ ವಾತಾವರಣ, ವಿಜ್ಞಾನದ ಮೇಲಿನ ಗೀಳು, ಒಂದು ಜೀವವನ್ನು ಇನ್ನೊಂದರೊಡನೆ ಹೊಸೆದಿದ್ದ ಆ ಎಣೆಯಿಲ್ಲದ ಪ್ರೀತಿ, ಇವೆಲ್ಲ ತನ್ನ ಮನೆಯಲ್ಲೊಂದು, ಈ ಮನೆಯಲ್ಲಿ ಬೇರೆ ಅಲ್ಲ. ಮೇರಿ ಉತ್ಸಾಹದಿಂದ, ಇನ್ನೇನು ಕೆಲವು ವಾರಗಳಲ್ಲೇ ತಾನು ನೋಡಲಿದ್ದ ಪೋಲೆಂಡಿನ ಹಳ್ಳಿಯ ಸೊಬಗನ್ನು ವರ್ಣಿಸಿದಳು.

'ಆದರೆ ಅಕ್ಟೋಬರ್‌ನಲ್ಲಿ ನೀನು ಹಿಂತಿರುಗಿ ಬರುತ್ತೀಯಲ್ಲವೆ? ಬರುವೆನೆಂದು ಮಾತುಕೊಡು! ನೀನು ಪೋಲೆಂಡಿನಲ್ಲೇ ಉಳಿದುಬಿಟ್ಟರೆ ನಿನ್ನ ಕೆಲಸ ಹೇಗೆ ಸಾಗುವುದು? ಈಗ ವಿಜ್ಞಾನವನ್ನು ತ್ಯಜಿಸುವುದಕ್ಕೆ ನಿನಗೆ ಹಕ್ಕಿಲ್ಲ..' ಎಂದು ಪಿಯುರಿ ಹೇಳಿದ. 'ವಿಜ್ಞಾನವನ್ನು ತ್ಯಜಿಸುವುದಕ್ಕೆ ನಿನಗೆ ಹಕ್ಕಿಲ್ಲ' ಎಂದು ಉದ್ವೇಗದಿಂದ, ಆತಂಕದಿಂದ ಹೇಳಿದ ಮಾತುಗಳಲ್ಲಿ 'ನನ್ನನ್ನು ತ್ಯಜಿಸುವುದಕ್ಕೆ ಹಕ್ಕಿಲ್ಲ' ಎಂಬ ಭಾವ ಅಡಗಿದ್ದುದು ಮೇರಿಯ ಮನಸ್ಸಿಗೆ ಹೊಳೆಯಿತು.

ಪಿಯುರಿ ಕೊನೆಗೆ ಒಂದು ದಿನ ಮೇರಿಯನ್ನು ತನ್ನ ಹೆಂಡತಿಯಾಗಬೇಕೆಂದು ಕೇಳಿಕೊಂಡ. ಬಂದ ಉತ್ತರ ನಿರುತ್ಸಾಹಕರವಾಗಿತ್ತು. ಮೇರಿ ಈ ಸಲ ಒಪ್ಪಲಿಲ್ಲ. ಪೋಲೆಂಡನ್ನು ಬಿಟ್ಟು ಒಂದು ಫ್ರೆಂಚರವನನ್ನು ಮದುವೆ ಮಾಡಿಕೊಳ್ಳುವುದು ಮಹಾಪರಾಧವೆಂದು ಭಾವಿಸಿದಳು. ಕ್ಯೂರಿಗೆ ತನ್ನ ಗೆಳೆತನದ ಭರವಸೆ ಮಾತ್ರ ಕೊಟ್ಟು, ಪರೀಕ್ಷೆ ಮುಗಿದ ಮೇಲೆ ಮೇರಿ

ಪೋಲೆಂಡಿಗೆ ಹೊರಟೇ ಹೋದಳು. ಪಿಯುರಿಗೆ, ಈ ವೇಳೆಗಾಗಲೇ ಮೇರಿಗೆ ಅತ್ಯಂತ ಪ್ರಿಯವಾದ ಪೋಲೆಂಡಿನ ಮೇಲೆ ಅಸೂಯೆ ಹುಟ್ಟಿತ್ತು.

ಪಿಯುರಿ ಕ್ಯೂರಿ ಅಷ್ಟಕ್ಕೆ ಬಿಡುವವನಲ್ಲ. ಎಷ್ಟೋ ವರ್ಷಗಳಿಂದ ಯಾರನ್ನೂ ಮದುವೆಯಾಗಲು ಒಲ್ಲದೆ ಹೋಗಿದ್ದ ಈ ಹಟವಾದಿ ತನ್ನ ಜೀವದ ಗೆಳತಿಯಾಗುವವಳನ್ನು ಮೇರಿಯಲ್ಲಿ ಗುರುತಿಸಿದ ಮೇಲೆ ಅವಳನ್ನು ಪಡೆಯಲು ಹಾತೊರೆಯುತೊಡಗಿದ. ಬೇಸಗೆಯಲ್ಲಿ ಮೇರಿ ಯಾವ ಯಾವ ಊರಿನಲ್ಲಿದ್ದರೂ ಅಲ್ಲಿಗೂ, ಅವಳಿಗಾಗಿ ಹಂಬಲಿಸುವ ಜೀವ ಒಂದಿದೆಯೆಂದು ನೆನಪು ಕೊಡಲು ಕಾಗದಗಳು ಹೋಗತೊಡಗಿದುವು. ಮೇರಿಯಿಲ್ಲದೆ ತನ್ನ ಬಾಳು ಬರಿದಾಗುವುದೆಂಬ ಭಾವ ಪ್ರತಿಯೊಂದು ಪತ್ರದಲ್ಲಿಯೂ ಎದ್ದು ತೋರುತ್ತಿತ್ತು. ಪ್ಯಾರಿಸ್‌ಗೆ ಹಿಂತಿರುಗಬೇಕೆಂದು ಪಿಯುರಿ ಮೇರಿಯನ್ನು ಪ್ರಾರ್ಥಿಸಿಕೊಂಡನು. ಕಾಸಿಗೆ ಗತಿಯಿಲ್ಲದ ಗವರ್ನೆಸ್ ಎಂದು ಕ್ಯಾಸಿಮಿರ್ ಕಡೆಗಂಡು ನಿರಾಕರಿಸಿದ್ದ ಈ ಬಡ ಪೋಲೀಷ್ ಹುಡುಗಿ ತನ್ನನ್ನು ಮದುವೆ ಯಾಗಬೇಕೆಂದು ಪ್ರಚಂಡ ಮೇಧಾವಿಯಾದ ಕ್ಯೂರಿ ಬೇಡಿಕೊಂಡ. ಒಂದು ಪತ್ರದಲ್ಲಿ ಹೀಗೆ ಬರೆದ, '....ನನ್ನೊಡನೆ ಇರುವುದು ನಿನಗೆ ಇದಕ್ಕಿಂತ ಉತ್ತಮವಲ್ಲವೆ? ಈ ಪ್ರಶ್ನೆ ನಿನಗೆ ಕೋಪವನ್ನುಂಟುಮಾಡುವು ದೆಂದೂ, ಈ ವಿಷಯ ಎತ್ತಿ ಮಾತನಾಡುವುದಕ್ಕೆ ನೀನು ಇಷ್ಟ ಪಡುವು ದಿಲ್ಲವೆಂದೂ ನಾನು ಬಲ್ಲೆ—ಜೊತೆಗೆ, ಯಾವ ಯಾವ ದೃಷ್ಟಿಯಿಂದ ನೋಡಿದರೂ, ನಿನಗೆ ನಾನು ಸರ್ವಥಾ ಯೋಗ್ಯನಲ್ಲವೆಂದು ತೋರುತ್ತದೆ.'

ಯಾವ ಹೆಂಗಸೂ ತನಗೆ ಯೋಗ್ಯಳಲ್ಲವೆಂಬ ನಂಬಿಕೆಯನ್ನು ಮೂವತ್ತೊಂದು ವರ್ಷದ ತನಕ ಬೆಳಿಸಿಕೊಂಡು ಬಂದಿದ್ದ ಕ್ಯೂರಿ, ಕೊನೆಗೆ ಒಬ್ಬ ಹೆಂಗಸಿಗೆ ತಾನೇ ಯೋಗ್ಯನಲ್ಲವೆಂದು ಭಾವಿಸಿಕೊಂಡ. ಇನ್ನೊಂದು ಪತ್ರದಲ್ಲಿ '..ಮತ್ತು ಕೊನೆಯದಾಗಿ ನೀನು ಪ್ಯಾರಿಸ್‌ಗೆ ಹಿಂತಿರುಗುವುದ ರಲ್ಲಿರುವೆಯೆಂದು ಕೇಳಿ ನನಗೆ ಅತ್ಯಂತ ಸಂತೋಷವಾಗಿದೆ. ನಾವಿಬ್ಬರೂ ಕೊನೆಯಪಕ್ಷ ವಿಶ್ವಾಸದ ಸ್ನೇಹಿತರಾದರೂ ಆಗಬೇಕೆಂಬುದು ನನ್ನ ಗಾಢ ವಾದ ಆಸೆ. ಅದನ್ನು ನೀನೂ ಒಪ್ಪುತ್ತೀಯಲ್ಲವೇ?' ಎಂದು ಬರೆದ.

ಅಕ್ಟೋಬರ್ ತಿಂಗಳೊಡನೆ ಮೊದಲೇ ಬರೆದಿದ್ದಂತೆ ಮೇರಿಯೂ ಬಂದಳು. ಸಂತೋಷ ಕ್ಯೂರಿಯ ಹೃದಯವನ್ನೆಲ್ಲ ತುಂಬಿತು. ಈ ಸಲ

ಮೇರಿ ಲ್ಯಾಟಿನ್ ಕ್ವಾರ್ಟರ್ಸಿನಲ್ಲಿರಬೇಕಾಗಿರಲಿಲ್ಲ. ಬ್ರೊನ್ಯ ಈಗ ವೈದ್ಯದ ಅಭ್ಯಾಸಕ್ಕೆ ಹೊಸದೊಂದು ಸ್ಥಳ ಗೊತ್ತುಮಾಡಿಕೊಂಡಿದ್ದಳು. ಮನೆಯಲ್ಲೇ ಇದ್ದುಕೊಂಡು ಇಲ್ಲಿಗೆ ಹಗಲಿನಲ್ಲಿ ಮಾತ್ರ ಬಂದು ಹೋಗುತ್ತಿದ್ದಳು. ಗಲಭೆಯಿಲ್ಲದ ಶಾಂತವಾದ ಈ ಹೊಸ ಸ್ಥಳದಲ್ಲಿ ಅಕ್ಕ, ಮೇರಿಗೆ ಒಂದು ಕೋಣೆ ಬಿಟ್ಟುಕೊಟ್ಟಳು. ಪಿಯರಿ ಕ್ಯೂರಿ ಇಲ್ಲಿ ಒಂದು ಮೇರಿಯನ್ನು ಪುನಃ ಪುನಃ ಪ್ರಾರ್ಥಿಸಿಕೊಂಡ. ಮೇರಿಯನ್ನು ಹೇಗಾದರೂ ಪಡೆಯಲೇಬೇಕೆಂದು ದೃಢ ಸಂಕಲ್ಪ ಮಾಡಿಕೊಂಡಿದ್ದ. ತನ್ನನ್ನು ಪ್ರೀತಿಸಿ ಮದುವೆಯಾಗುವುದು ಮೇರಿಗೆ ಸಾಧ್ಯವೇ ಆಗದೆ ಹೋದರೆ ಪ್ರಯೋಗಶಾಲೆಯಲ್ಲಿ ಎರಡು ಭಾಗ ಮಾಡಿ, ವಿಜ್ಞಾನದ ಸಂಶೋಧನೆಗಳನ್ನು ಒಟ್ಟಿಗೆ ಮಾಡುವ ಒಂದು ಸ್ನೇಹದ ಒಪ್ಪಂದವಾದರೂ ಮಾಡಿಕೊಳ್ಳೋಣ ಎಂದು ಸೂಚಿಸಿದ. ತಾನು ಪೋಲೆಂಡಿಗೇ ಬಂದು, ಫ್ರೆಂಚ್ ಭಾಷೆಯನ್ನು ಬೋಧಿಸಿ ಹೇಗಾದರೂ ವಿಜ್ಞಾನದ ಸಂಶೋಧನೆಗೆ ಏರ್ಪಾಡು ಮಾಡಿದರೆ, ಆಗಲಾದರೂ ಮೇರಿ ತನ್ನನ್ನು ಮದುವೆಯಾಗುವಳೇ ಎಂದು ಕೇಳಿ ನೋಡಿದ. ತನಗೋಸ್ಕರ ದೇಶಭ್ರಷ್ಟನಾಗಲು ಒಪ್ಪಿದ್ದ ಕ್ಯೂರಿಯ ವಿಷಯದಲ್ಲಿ ಮನಸ್ಸು ಮಿಡಿದು, ಮೇರಿ ಆವನ ವಿಷಯವನ್ನು ಬ್ರೊನ್ಯಳಿಗೆ ತಿಳಿಸಿದಳು. ಬ್ರೊನ್ಯಳಿಗೆ ತನ್ನ ಬಾಳಿನ ಅಭಿಲಾಷೆ ತಿಳಿಯಿತೆಂದು ಕಂಡುಕೊಂಡಕೂಡಲೆ, ಈಗಾಗಲೇ ಅವಳ ಪರಿಚಯವಿದ್ದ ಕ್ಯೂರಿ ತಂಗಿಯನ್ನು ಬಿಟ್ಟು ಅಕ್ಕನನ್ನು ಮರೆಹೊಕ್ಕ. ಅವಳನ್ನು ಪೂರ್ತಿಯಾಗಿ ಮೆಚ್ಚಿಸಿ ಅವಳು ತಂಗಿಯೊಡನೆ ತನ್ನ ತಂದೆಯ ಮನೆಗೆ ಬರುವಂತೆ ಮಾಡಿದ. ಕ್ಯೂರಿಯ ತಾಯಿ ಬ್ರೊನ್ಯಳನ್ನು ಪಕ್ಕಕ್ಕೆ ತನ್ನ ಬಳಿಗೆ ಕರೆದು, ತಂಗಿಗೆ ಬೋಧನೆ ಮಾಡಬೇಕೆಂದು ಹೇಳಿಕೊಂಡಳು. ' ನನ್ನ ಪಿಯರಿಗೆ ಸರಿ ಸಮಾನವಾದ ಜೀವ ಈ ಲೋಕದಲ್ಲಿ ಬೇರೆ ಯಾರೂ ಇಲ್ಲ. ನಿನ್ನ ತಂಗಿ ಕೊಂಚವೂ ಹಿಂದೆಗೆಯುವುದು ಬೇಡ. ಅವಳು ಬೇರೆ ಯಾರೊಡನೆಯೂ ಪಿಯರಿಯೊಡನಿರುವಷ್ಟು ಸಂತೋಷದಿಂದ ಇರುವುದು ಸಾಧ್ಯವಿಲ್ಲ ! '

ಇನ್ನೂ ಹತ್ತು ತಿಂಗಳ ಕಾಲ ಕ್ಯೂರಿ ಪ್ರಾರ್ಥಿಸಿಕೊಂಡು, ಒಲಿಸಿಕೊಂಡ ಮೇಲೆ, ಮೇರಿ ಅವನನ್ನು ಮದುವೆಯಾಗುವುದಕ್ಕೆ ಒಪ್ಪಿದಳು. ಆ ಅವ್ಯಾಜವಾದ ಪ್ರೇಮ, ಉದಾತ್ತವಾದ ಮನೋಭಾವ ಅವಳ ಮನ

ಸ್ಸನ್ನು ಸೋಲಿಸಿ ಸೆರೆಹಿಡಿಯಿತು. ಇದರಿಂದ ಮೇರಿಯ ದೃಢ ಸಂಕಲ್ಪ ಮಣ್ಣುಗೂಡಿತು, ನಿಜ. ಆದರೆ ಕ್ಯೂರಿಯದೇನಾಯಿತು ? ಎಂದೆಂದಿಗೂ ಮದುವೆಯಾಗಬಾರದೆಂಬುದು ಯಾವ ಹುಡುಗಿಯನ್ನೂ ಪ್ರೀತಿಸಬಾರದೆಂಬುದು ಅವನು ದೃಢವಾಗಿ ಅನುಸರಿಸುತ್ತಿದ್ದ ಧ್ಯೇಯ. ವಿಜ್ಞಾನದಲ್ಲಿ ಮುಳುಗಿರುವ ಮನುಷ್ಯನಿಗೆ ಮದುವೆ ಕೂಡದೆಂಬುದು ಅವನ ಅಭಿಪ್ರಾಯ. ೩೫ ವರ್ಷಗಳ ತನಕ ಸಾಧಿಸಿದ ಈ ಧ್ಯೇಯ ಸಂಕಲ್ಪಗಳೆಲ್ಲ, ಮೇರಿಯ ಮುಂದೆ ಕರಗಿಹೋದುವು.

ಮೇರಿ ತನಗೆ ಮದುವೆ ಗೊತ್ತಾದ ವಿಷಯವನ್ನು ವಾರ್ಸಾಕ್ಕೆ ಬರೆದ ಕೂಡಲೆ ಮನೆಯಿಂದ ಹರಕೆಯ ಕಾಗದ ಬಂತು. ಫ್ರೆಂಚ್‌ರವನನ್ನು ಮದುವೆಯಾಗುವಳೆಂದು ಮನೆಯವರಿಗೇನೂ ಅಸಮಾಧಾನವಾಗಲಿಲ್ಲ. ಮೇರಿಯ ಹೃದಯ ಅವರಿಗೆಲ್ಲ ಪೂರ್ತಿ ಅರ್ಥವಾಗಿತ್ತು. ವಾರ್ಸಾದಿಂದ ಅಣ್ಣ, ' ನಾವು ಯಾವಾಗಲೂ, ನಿನ್ನನ್ನು ಪ್ರೀತಿಸಿ ನೀನು ನಮ್ಮವಳೆಂದೇ ತಿಳಿಯುತ್ತೇವೆ. . ಒಂದು ಸಾವಿರ ಮುತ್ತುಗಳು ಪ್ರಿಯ ಮೇನ್ಯ, ನಿನಗೆ. ಪುನಃ ಜಯವನ್ನೂ ಸಂತೋಷಗಳನ್ನೂ ಹಾರೈಸುತ್ತೇನೆ. . . . . ಇನ್ನು ಮುಂದೆ ನಮ್ಮ ಮನೆಯವನಾಗುವ ಪಿಯರಿಯನ್ನು ಸ್ವಾಗತಿಸುತ್ತೇನೆಂದೂ ತೆರೆದ ಹೃದಯದಿಂದ ಸ್ನೇಹವನ್ನೂ, ವಿಶ್ವಾಸವನ್ನೂ ನೀಡುತ್ತೇನೆಂದು ಅವನಿಗೆ ತಿಳಿಸು . . ' ಎಂದು ಬರೆದ.

೧೮೯೫ನೇ ಜುಲೈ ೨೬ನೇ ದಿನ ಪಿಯರಿ ಕ್ಯೂರಿಗೂ, ಮೇರಿ ಸ್ಲೊಡೊವ್‌ಸ್ಕಳಿಗೂ ಮದುವೆ ನಡೆಯಿತು. ಈ ವಿಲಕ್ಷಣವಾದ ದಂಪತಿಗಳಂತೆಯೇ ಅದೂ ವಿಲಕ್ಷಣವಾದ ಮದುವೆ. ಮೇರಿಗೆ ಆಡಂಬರದ ಉಡುಪು ಎಂದೂ ಬೇಕಿರಲಿಲ್ಲ. ಅದು ಇಂದೂ ಬೇಡ. ಕ್ಯಾಸಿಮಿರ್ ಡ್ಲುಸ್ಕಿಯ ತಾಯಿ ಮೇರಿಯ ಮದುವೆಯ ಉಡುಪನ್ನು ತಾನು ಅವಳಿಗೆ ಬಹುಮಾನ ಮಾಡುತ್ತೇನೆಂದಾಗ ಮೇರಿ ದಿನವೂ ಉಡುವಂತಹ ಒಟ್ಟೆ ಕೊಡು ಎಂದು ಕೇಳಿಕೊಂಡಳು. ಆ ಗಾಢವಾದ ನೀಲಿ ಬಣ್ಣದ ಉಣ್ಣೆಯ ಉಡುಪನ್ನು ಮೇರಿ ಮುಂದೆ ಪ್ರಯೋಗಶಾಲೆಗೆ ಹೋಗುವಾಗಲೆಲ್ಲ ಉಪಯೋಗಿಸುತ್ತಿದ್ದಳು.

ಇಂತಹ ಮದುವೆ ಬಹುಶಃ ಎಂದೂ ನಡೆದಿರಲಾರದು. ನವಿರಾದ ಬೆಲೆಯುಳ್ಳ ಮದುವೆಯ ಬಿಳೀ ಉಡುಪಿಲ್ಲ. ಚಿನ್ನದ ಉಂಗುರವಾಗಲಿ,

ಆಡಂಬರದ ಮದುವೆಯ ಊಟವಾಗಲಿ ಇಲ್ಲ. ಮದುವೆಯ ಸಮಯದಲ್ಲಿ ವಕೀಲರೂ ಬೇಕಿರಲಿಲ್ಲ. ಪಿಯರಿಯೂ, ಮೇರಿಯೂ ಕಾಸಿಲ್ಲದ ಬರೀ ಕೈಯ ವರು. ಯಾರೋ ಕೊಟ್ಟ ಮದುವೆಯ ಬಹುಮಾನದ ಹಣದಲ್ಲಿ ಕೊಂಡ ಎರಡು ಹೊಸ ಬೈಸಿಕಲ್‌ಗಳನ್ನು ಬಿಟ್ಟರೆ, ಮೇರಿಗಾಗಲಿ, ಪಿಯರಿಗಾಗಲಿ, ತನ್ನದೆನ್ನುವ ಬೆಲೆಯುಳ್ಳ ವಸ್ತು ಈ ಪ್ರಪಂಚದಲ್ಲಿ ಬೇರೆ ಯಾವುದೂ ಇರಲಿಲ್ಲ. ಪಿಯರಿ ತಂದೆಯ ಮನೆಗೆ ಮೇರಿಯನ್ನು ಕರೆದುಕೊಂಡು ಹೊರಟ. ಇಬ್ಬರೂ ಹೃದಯದಲ್ಲಿ ಸಂತೋಷ ತುಂಬಿಕೊಂಡು ಗಾಡಿಯ ಮೇಲು ಭಾಗಕ್ಕೆ ಹತ್ತಿ ಮಂದವಾದ ಬಿಸಿಲಿನಲ್ಲಿ ಕುಳಿತು, ದಾರಿಯುದ್ದಕ್ಕೂ ತಮಗೆ ಪರಿಚಿತವಾದ ಸ್ಥಳಗಳನ್ನು ನೋಡುತ್ತ ಹೋದರು. ಸೋರ್ಬಾನ್ನಿನ ವಿಜ್ಞಾನದ ಭಾಗ ಕಣ್ಣಿಗೆ ಬಿದ್ದಾಗ ಮೇರಿ ಪಿಯರಿಯ ತೋಳನ್ನು ಅದುಮಿ ಆನಂದ ತುಂಬಿ ತುಳುಕುತ್ತಿದ್ದ ಅವನ ಶಾಂತವಾದ ಕಣ್ಣುಗಳನ್ನು ನೋಡಿದಳು. ಆ ಸೋರ್ಬನ್, ಆ ವಿಜ್ಞಾನ, ಆ ಭೌತಶಾಸ್ತ್ರ ಅವರ ದಾಂಪತ್ಯದ ಸೌಭಾಗ್ಯದ ಕುರುಹುಗಳು

ಅಲ್ಲಿ ಪಿಯರಿಯ ತಂದೆಯ ಸ್ಥಳದಲ್ಲಿ, ಮದುವೆಯ ಮನೆಯಲ್ಲಿ ಮೇಧಾವಿಗಳ ಒಂದು ಸಣ್ಣ ಗುಂಪೇ ಸೇರಿತ್ತು. ಹೊರಗಿನವರು ಯಾರೂ ಇರಲಿಲ್ಲ. ಆ ಮನೆಯವರು, ಈ ಮನೆಯವರು, ಬ್ರೊನ್ಯ, ಅವಳ ಗಂಡ ಡ್ಲುಸ್ಕಿ, ಕೆಲವು ವಿಶ್ವವಿದ್ಯಾಲಯದ ಸ್ನೇಹಿತರು ಮಾತ್ರವೇ ! ವಾರ್ಸಾದಿಂದ, ಹೆಲಾಳೊಡನೆ ಪ್ರೊಫೆಸರ್ ಸ್ಕ್ಲೊಡೊವ್‌ಸ್ಕಿ ಬಂದಿದ್ದ. ಪಿಯರಿಯ ತಂದೆ ಡಾಕ್ಟರ್ ಕ್ಯೂರಿಯೊಡನೆ ಮಾತನಾಡುವಾಗಲೆಲ್ಲ ಸ್ಕ್ಲೊಡೊವ್‌ಸ್ಕಿ ಶುದ್ಧ ಫ್ರೆಂಚ್ ಭಾಷೆಯನ್ನೇ ಬಳಸುವನು. ಪ್ರತಿ ಸಲವೂ ಹೃದಯಕ್ಕೆ ಹತ್ತಿರವಾದ ಮಾತು, ತನ್ನ 'ಪುಟ್ಟ ಮೇನ್ಯ'ಳ ಮಾತು ಮೊದಲು ಕಲೆಹಾಕುವುದು. ಮುದುಕ ಆರ್ದ್ರಹೃದಯನಾಗಿ ಮೆಲ್ಲಗೆ 'ಮೇರಿ ನಿಮ್ಮ ಮನೆಗೆ ಸೇರಿದುದರಿಂದ ಪ್ರೀತಿಗೆ ಯೋಗ್ಯಳಾದ ಮಗಳೊಬ್ಬಳು ನಿಮಗೆ ಸಿಕ್ಕಿದಳು. ಆ ಹುಡುಗಿ ಹುಟ್ಟಿದಾಗಿನಿಂದ ನನಗೆ ಯಾವ ವಿಧವಾದ ನೋವನ್ನೂ ಉಂಟುಮಾಡಲಿಲ್ಲ!' ಎಂದು ಹೇಳುವನು.

—

ಅಧ್ಯಾಯ ಹತ್ತು

## ಮಡೇಮ್ ಕ್ಯೂರಿ



ಪಿಯರಿಯನ್ನು ಪಡೆದದ್ದು, ಎಂತಹ ಭಾಗ್ಯ ಎಂಬುದು ಮೇರಿಗೂ ತಿಳಿದಿತ್ತು. ತನ್ನ ಧ್ಯೇಯಸಾಧನೆಗೋಸ್ಕರ ಮದುವೆಯಾಗುವುದಿಲ್ಲವೆಂದು ಅವಳು ನಿರಾಕರಿಸಿದ್ದರೂ, ವಿವಾಹವಾದ ಮೇಲೆ, ಪಿಯರಿಯನ್ನು ಅಪಾರವಾಗಿ ಪ್ರೀತಿಸಿದಳು. ಪರಸ್ಪರ ಸ್ನೇಹ ವಿಶ್ವಾಸಗಳು ಎರಡು ಜೀವಗಳನ್ನೂ ಒಂದುಗೂಡಿಸಿದುವು. ಆದರ ಪ್ರೀತಿಗಳು ಹೊಳೆಯಾಗಿ ಹರಿದುವು. ಇಬ್ಬರ ಪ್ರೀತಿಯೂ ನೆಲೆಯಾಗಿದ್ದುದು ವಿಜ್ಞಾನದಲ್ಲಿ! ಇಬ್ಬರೂ ಪ್ರತಿಭಾಶಾಲಿಗಳು. ಪ್ರೀತಿ, ಗೌರವ, ಮೆಚ್ಚಿಕೆ ಒಬ್ಬರ ಮೇಲೆ ಇನ್ನೊಬ್ಬರ ಹುರುಡಿನಲ್ಲಿ ನಡೆಯಿತು. ಪಿಯರಿ ಕಷ್ಟಪಟ್ಟುಪಟ್ಟು ಪೋಲಿಷ್ ಭಾಷೆಯನ್ನು ಕಲಿತನು. ಮೇರಿಗೂ ಫ್ರೆಂಚ್ ಭಾಷೆ ಬರುವಾಗ, ಯಾವ ಕೆಲಸಕ್ಕೂ ಬಾರದ ಸತ್ತ ಪೋಲಿಷ್ ಭಾಷೆಯನ್ನು ಕಲಿಯುವುದರಲ್ಲಿ ಏನರ್ಥ? ಆ ಅರ್ಥ ಪಿಯರಿಯ ಹೃದಯಕ್ಕೆ ಮಾತ್ರ ಗೊತ್ತು. ಪೋಲಿಷ್ ಭಾಷೆಯೆಂದರೆ ಅವನ ಹೆಂಡತಿಯ ಪ್ರೀತಿಯ ಮಾತೃಭಾಷೆ. ಮೇರಿಯೂ ಎಷ್ಟೋ ಶ್ರಮವಹಿಸಿ ಹೊಸ ವಿದ್ಯೆಯನ್ನೇ ಕಲಿತಳು. ದೂರ ದೇಶದಿಂದ ಬಂದು, ಕೋಣೆಯೊಂದರಲ್ಲಿ ಸೇರಿಕೊಂಡು, ಏಕಾಗ್ರತೆಯ ತಪಸ್ಸಿನಲ್ಲಿ, ಓದಿನಲ್ಲಿ ಅಡಿಗೆಯ ವಿಷಯವೂ ಮನಸ್ಸಿಗೆ ಹತ್ತದ ಆ ಸುಂದರವಾದ ದಿನಗಳು ಎಲ್ಲಿ ಹೋದವೋ? ಅಡಿಗೆಮಾಡುವುದಕ್ಕೆ ಬಾರದೆ ಗಡ್ಡೆಗೆಣಸು, ಹಣ್ಣುಹಂಪಲು ತಿಂದು, ತೃಪ್ತಿಪಡುತ್ತಿದ್ದ ಬಾಳಿನ ಶಾಂತವಾದ ಭಾಗ ಮಿಂಚಿನಂತೆ ಮರೆಯಾಗಿ, ಈಗ ಹೊಸ ಜೀವನ ಮೇರಿಯನ್ನು ಈ ಪ್ರಪಂಚಕ್ಕೆ ಕರೆಯುತ್ತಿತ್ತು. ಈಗ ಮನೆಯೊಂದು ಆದ ಮೇಲೆ ಅಡಿಗೆಮಾಡುವುದಕ್ಕೆ ಬರದೆಹೋದರೆ ಎಷ್ಟು ಅವಮಾನ? ತನ್ನ ಫ್ರೆಂಚ್ ಅತ್ತೆ ಎಂದಾದರೊಂದು ದಿನ ತನ್ನ ಕೆಟ್ಟ ಅಡಿಗೆ ನೋಡಿ, ವಾರ್ಸಾದಲ್ಲಿ ಹುಡುಗಿ

ಯರಿಗೆ ಏನು ಕಲಿಸುತ್ತಾರೆ ಎಂದಾಳು! ಮದುವೆ ಗೊತ್ತಾದ ಕೂಡಲೆ, ಮೇರಿ ಇದನ್ನೆಲ್ಲ ಭಾವಿಸಿಕೊಂಡು, ಗುಟ್ಟಾಗಿ ಬ್ರೊನ್ಯಳ ಮತ್ತು ಅವಳ ಅತ್ತೆಯ ಹತ್ತಿರ ಹೋಗಿ ಅಡಿಗೆ ಮಾಡುವ ವಿಧಾನವನ್ನು ಹೇಳಿಸಿಕೊಂಡು ಬಂದಳು. ಒಂದು ಪಾಕಶಾಸ್ತ್ರದ ಪುಸ್ತಕವನ್ನು ಕೊಂಡು ಅದನ್ನು ಚೆನ್ನಾಗಿ ಓದಿದಳು. ಇಲ್ಲಿ ಅಡಿಗೆ ಆಗುತ್ತಿರಬೇಕಾದರೆ, ಅಲ್ಲಿ ಪ್ರಯೋಗಶಾಲೆಯಲ್ಲಿ ಕೆಲಸ ಮಾಡುವುದಕ್ಕೋಸ್ಕರ ತನಗೆ ತಾನೇ ಕಷ್ಟವಿಲ್ಲದೆ ಆಗುವ ಹೊಸ ಹೊಸ ಅಡಿಗೆಗಳನ್ನು ಕಂಡುಹಿಡಿದಳು. ಆದರೇನು? ಅಡಿಗೆಯ ಕಲೆ ರಸಾಯನಶಾಸ್ತ್ರದಷ್ಟೇ ಕಷ್ಟ! ಎಷ್ಟು ಉರಿ ಹಾಕಬೇಕು, ಯಾವಾಗ ಕೆಳಗಿಳಿಸಬೇಕು, ಇವನ್ನೆಲ್ಲ ಯೋಚಿಸಿ ಯೋಚಿಸಿ ನಿಟ್ಟುಸಿರುಬಿಟ್ಟು ತಲೆಯ ಮೇಲೆ ಕೈಹೊರಬೇಕಾಗುವುದು. ಇಷ್ಟೊಂದು ಕಷ್ಟಪಟ್ಟು ಮಾಡಿದ ಅಡಿಗೆಯಲ್ಲಿ ಉದಾರಹೃದಯನಾದ ಪಿಯರಿ ತಪ್ಪು ಎಣಿಸುತ್ತಿರಲಿಲ್ಲ. ಜೊತೆಗೆ ಯಾವುದೋ ಜ್ಞಾನದಲ್ಲಿ ಊಟ ಮಾಡುತ್ತ ಮಾಡುತ್ತ, ಅಡಿಗೆ ಮಾಡುವುದರ ಹಿಂದಿದ್ದ ಮೇರಿಯ ಶ್ರಮವನ್ನೂ ಗ್ರಹಿಸುತ್ತಿರಲಿಲ್ಲ.

ಮದುವೆಯಾದ ಹೊಸದರಲ್ಲಿ ಕಳೆದ ದಿನಗಳು, ಸುಖವಾದ ಶಾಂತವಾದ ದಿನಗಳು. ದಿನವೆಲ್ಲ ಕೆಲಸವೆಂದರೆ ಬೈಸಿಕಲ್‌ಗಳ ಮೇಲೆ ಇಬ್ಬರೂ ಹೊರಟು ಹಳ್ಳಿಯ ಕಡೆಯೆಲ್ಲ ಮನಸ್ಸು ಬಂದಂತೆ ಸುತ್ತುವುದು. ಸುಂದರವಾದ ವನಪ್ರಾಂತಗಳು, ಬೆಟ್ಟಗಳು ಇವನ್ನು ನೋಡಬೇಕಾದರೆ ಮಾತ್ರ ಇಬ್ಬರೂ ಕಾಲನಡಿಗೆಯಲ್ಲಿ ಸುತ್ತುವರು. ಬ್ರೆಡ್ ಮತ್ತು ಹಣ್ಣುಗಳನ್ನು ಯಾವುದಾದರೂ ಮರದ ಕೆಳಗೆ ಕುಳಿತು ತಿಂದರೆಂದರೆ ಊಟ ಮುಗಿಯಿತು. ರಾತ್ರಿ ಊಟಕ್ಕೆ ಮತ್ತು ತಂಗುವುದಕ್ಕೆ ಮಾತ್ರ ಸ್ವಲ್ಪ ಹಣ ವೆಚ್ಚವಾಗುತ್ತಿತ್ತು. ಸುಖವಾಗಿ ಪ್ರಯಾಣ ಮಾಡಿ ಸುಖವಾಗಿ ತಿನ್ನುವುದಕ್ಕೆ ಅವರಿಗೆ ಬೇಕೂ ಇರಲಿಲ್ಲ, ಹಣವೂ ಇರಲಿಲ್ಲ.

ಒಂದು ದಿನ, ತಮ್ಮ ಬೈಸಿಕಲ್‌ಗಳನ್ನು ಒಬ್ಬ ರೈತನ ಮನೆಯಲ್ಲಿ ಬಿಟ್ಟು, ಕೆಲವು ಹಣ್ಣುಗಳನ್ನು ಮಾತ್ರ ಕೈಯಲ್ಲಿ ತೆಗೆದುಕೊಂಡು, ಮನಸ್ಸು ಬಂದಂತೆ ಸುತ್ತುವುದಕ್ಕೆ ಹೊರಟರು. ಪಿಯರಿ ದಾರಿ ಹುಡುಕುತ್ತ ಹುಡುಕುತ್ತ ಮುಂದೆ ಹೊರಟ. ಮೇರಿ ಅವನನ್ನು ಹಿಂಬಾಲಿಸಿದಳು. ತನ್ನ ಸಂಶೋಧನೆಯ ವಿಷಯದಲ್ಲಿ ಮುಳುಗಿ ಅದರ ವಿಷಯವಾಗಿ ಮಾತನಾಡುತ್ತ

ಮೇರಿಯ ಕಡೆಗೆ ಕಣ್ಣು ಕೂಡ ತಿರುಗಿಸದೆ ಪಿಯರಿ ಮುಂದೆ ಮುಂದೆ ಹೋಗುತ್ತಿದ್ದ. ಮೇರಿಗೂ ಯೋಚಿಸುವುದಕ್ಕೆ ವಿಷಯ ಬೇಕಾದಷ್ಟಿತ್ತು. ಈ ಸಲ ಅವಳು, 'ಫೆಲೊಷಿಪ್' ಪಡೆಯುವ ಸ್ಪರ್ಧೆಗೆ ತಯಾರಾಗುತ್ತಿದ್ದಳು. ಮೇರಿಯೂ ಪಿಯರಿಯ ಪ್ರಯೋಗಶಾಲೆಯಲ್ಲಿ ಕೆಲಸ ಮಾಡುವುದಕ್ಕೆ ಭೌತಶಾಸ್ತ್ರದ ಶಾಲೆಯ ಡೈರೆಕ್ಟರ್ ಒಪ್ಪುತ್ತಾನೆಂಬ ಭರವಸೆ ಇತ್ತು. ಆಗ ತಾವಿಬ್ಬರೂ ಯಾವಾಗಲೂ ಅಗಲದೆ ಒಟ್ಟಿಗೆ ಇರಬಹುದು. ಇವನ್ನೆಲ್ಲ ಯೋಚಿಸುತ್ತ ಮೇರಿ ಉಸಿರೆತ್ತದೆ ಪಿಯರಿಯ ಹಿಂದೆ ಹಿಂದೆ ಹೋಗುತ್ತಿದ್ದಳು. ಒಬ್ಬರ ಹೃದಯವನ್ನೊಬ್ಬರು ಪೂರ್ಣವಾಗಿ ಅರಿತು, ಒಬ್ಬರನ್ನು ಒಬ್ಬರು ಗಾಢವಾಗಿ ಪ್ರೀತಿಸುತ್ತಿದ್ದ, ಈ ಇಬ್ಬರ ನಡುವೆ ವ್ಯರ್ಥವಾದ ಒಂದು ಮಾತೂ ತಲೆಹಾಕುತ್ತಿರಲಿಲ್ಲ. ಮುದುಕಿ ಬ್ರೊನ್ಯಳೊಡನೆ ಹೇಳಿದ್ದ ಮಾತು ನಿಜ ಮೇರಿ 'ಅವಳ ಪಿಯರಿ'ಯ ಜೊತೆಯಲ್ಲಲ್ಲದೆ ಇತರರೊಡನೆ ಸಂತೋಷದಿಂದಿರುವುದು ಸಾಧ್ಯವಿರಲಿಲ್ಲ. ಮೇರಿ, ಪಿಯರಿ ಒಬ್ಬರಿಗೋಸ್ಕರ ಇನ್ನೊಬ್ಬರು ಹುಟ್ಟಿದ್ದವರು.

ಹೋಗುತ್ತ ಹೋಗುತ್ತ ಪಿಯರಿ ಪೊದೆಗಳ ಮಧ್ಯದಲ್ಲಿದ್ದ ಒಂದು ಕೊಳದ ಬಳಿಗೆ ಬಂದ. ಇಲ್ಲಿ ಪಿಯರಿ, ಬಿದ್ದುಹೋಗಿದ್ದ ಒಂದು ಮರದ ಮೇಲೆ ಕಾಲಿಟ್ಟು ಕೊಳದ ನೀರಿನ ಮೇಲೆ ತೇಲುತ್ತಿದ್ದ ಸುಂದರವಾದ ಹೂವುಗಳಿಗೆ ಕೈಚಾಚುತ್ತಿರುವಾಗ, ಅಲ್ಲಿ ದಡದಲ್ಲಿ ಮೇರಿ ಹುಲ್ಲಿನ ಮೇಲೆ ಮಲಗಿ ಆಕಾಶದ ಮೋಡಗಳ ಕಡೆಗೆ ನೋಡುತ್ತ ನೋಡುತ್ತ ಇನ್ನೇನು ತೂಕಡಿಸುವುದರಲ್ಲಿದ್ದಳು.

ಇದ್ದಕ್ಕಿದ್ದಹಾಗೆ ತಾನು ಬಿಚ್ಚಿಟ್ಟುಕೊಂಡಿದ್ದ ಅಂಗೈಯ್ಯಲ್ಲಿ ಏನೋ ತಣ್ಣಗೆ ಒದ್ದೆಯಾದ ಹಾಗಾಗಿ, ಮೇರಿ ಕೈಕಡೆಗೆ ನೋಡಿ ಬೆಚ್ಚಿ ಕೂಗಿಕೊಂಡಳು. ಕೈಯೊಳಗೆ ಪಿಯರಿ ನಾಜೂಕಾಗಿ ತಂದುಬಿಟ್ಟಿದ್ದ ಹಸರು ಕಪ್ಪೆಯೊಂದು ಏದುತ್ತ ಕುಳಿತಿತ್ತು. ಮೇರಿ ಭಯಪಟ್ಟು 'ಪಿಯರಿ, ಪಿಯರಿ' ಎಂದು ಕೂಗಿದಳು. ಪಿಯರಿ ಮೇರಿಯನ್ನು ಹೆದರಿಸಿ ವಿನೋದವಾಡುವದಕ್ಕೋಸ್ಕರ ಕಪ್ಪೆಯನ್ನು ತಂದು ಬಿಟ್ಟಿರಲಿಲ್ಲ. ಇತರ ಎಷ್ಟೋ ಪ್ರಾಣಿಗಳೊಡನೆ ಆಡುವಂತೆ ಕಪ್ಪೆಗಳೊಡನೆ ಪರಿಚಯವೂ ಅವನಿಗೆ ಅತ್ಯಂತ ಸಹಜ. ಪಿಯರಿಗೆ ಆಶ್ಚರ್ಯವಾಯಿತು.

' ಯಾಕೆ, ಕಪ್ಪೆಗಳನ್ನು ಕಂಡರೆ ನಿನಗೆ ಇಷ್ಟವಿಲ್ಲವೆ ?'

' ಇಷ್ಟ ಹೌದು. ಆದರೆ ಕೈಯೊಳಗಿಟ್ಟುಕೊಳ್ಳುವುದಕ್ಕೆ ಇಷ್ಟವಿಲ್ಲ

' ಅದು ಶುದ್ಧ ತಪ್ಪು. ಕಪ್ಪೆಯನ್ನು ಗಮನಿಸಿ ನೋಡುವುದರಲ್ಲಿ ಎಷ್ಟೊಂದು ವಿನೋದವಿದೆ! ಕೈ ಮೆಲ್ಲಗೆ ತೆಗಿ. ಈಗ ನೋಡು ಎಷ್ಟು ಚೆನ್ನಾಗಿದೆ ! '

ಪಿಯರಿ ಕಪ್ಪೆಯನ್ನು ಮೆಲ್ಲಗೆ ತೆಗೆದು ದಡದಲ್ಲಿ ಬಿಟ್ಟುಬಿಡುತ್ತಲೂ ಮೇರಿ ಸಮಾಧಾನವಾಗಿ ಉಸಿರಾಡಿದಳು. ಪಿಯರಿ ಆ ಸ್ಥಳ ಬಿಟ್ಟು ಪುನಃ ಮುಂದೆ ಹೊರಟ. ಮೇರಿ ಪಿಯರಿ ತಂದುಕೊಟ್ಟಿದ್ದ ಕೊಳದ ಹೂವು ಗಳನ್ನು ಧರಿಸಿ ಅವನ ಹಿಂದೆಯೇ ಹೊರಟಳು.

ಈ ಸುಖವಾದ ವಾತಾವರಣ, ಶಾಂತವಾದ ಮನೋಭಾವ, ಆತಂಕವೇ ಇಲ್ಲದ ವಿಶ್ರಾಂತಿ, ಇವೆಲ್ಲ ಬೇಸಗೆಯ ಕೆಲವು ದಿನಗಳಲ್ಲಿ ಮಾತ್ರ. ಅವು ಮುಗಿದ ಮೇಲೆ ಶಕ್ತಿಯನ್ನು ಸಂಗ್ರಹಿಸುವಂತೆ ಶಾಂತವಾಗಿದ್ದ ದುಡಿತದ ಝುಂಝಾವಾತ, ಒಂದೇ ಸಲ ಬಿರುಸಾಗಿ ಬೀಸುವುದು. ಸಂಶೋಧನೆಯಲ್ಲಿ, ಪ್ರಯೋಗಶಾಲೆಯ ಕೆಲಸದಲ್ಲಿ ಮುಳುಗಿ ಸ್ವೈಮರೆತ ಪಿಯರಿ ಈ ವನಗಳು, ಈ ವಿರಾಮ, ಕೊಳದ ಕಪ್ಪೆ ಎಲ್ಲವನ್ನೂ ಒಟ್ಟಿಗೆ ಮರೆತುಬಿಡುವನು. ಕಾಡೆಂದರೆ ಕಾಡಿಗೆ, ಕೊಳವೆಂದರೆ ಕೊಳದ ಹತ್ತಿರಕ್ಕೆ, ಅವನ ಹಿಂದೆ ಅಲೆದಾಡಿದ್ದ ಮೇರಿ, ವಿಜ್ಞಾನದ ಸಂಶೋಧನೆಗಳಲ್ಲಿ ಸಲಹೆ ಕೊಡುವುದರಲ್ಲಿಯೂ ನಿಸ್ಸೀಮಳು. ಮೇರಿಯನ್ನು ನೋಡುವುದಕ್ಕೆ ಮುಂಚೆ ಇಂತಹ ಹೆಂಗುಸು ಇರುವುದು ಸಾಧ್ಯವಿಲ್ಲವೆಂದು, ಪಿಯರಿ ಎಣಿಸಿದ್ದರೆ ಅದರಲ್ಲಿ ಹೆಚ್ಚು ತಪ್ಪೇನು ?

ಆಗಸ್ಟ್ ತಿಂಗಳ ಮಧ್ಯದ ಹೊತ್ತಿಗೆ, ಮೇರಿಯೂ, ಪಿಯರಿಯೂ, ಬ್ರೋನ್ಯ ಕೆಲವು ತಿಂಗಳಿಂದ ವಾಸಿಸುತ್ತಿದ್ದ ಮನೆಗೆ ಬಂದರು. ಮೇರಿಯ ಮದುವೆಯಾದ ಮೇಲೆ, ವಾರ್ಸಾಕ್ಕೆ ಹಿಂತಿರುಗದೇ ಇದ್ದ, ಹೆಲಾ, ಸ್ಕ್ಲೊಡೊವ್‌ಸ್ಕಿಯೂ ಇಲ್ಲಿಯೆ ಇದ್ದರು. ಇಲ್ಲಿ ಈ ಜನಗಳೊಳಗೆ ಬೆಳೆದು ಬಂದ ವಿಶ್ವಾಸ ಅತ್ಯಂತ ಮಧುರವಾದುದು. ಪಿಯರಿಗೆ ಸ್ಕ್ಲೊಡೊವ್‌ಸ್ಕಿಯಾಗಲಿ, ಡ್ಲುಸ್ಕಿಯಾಗಲಿ ಬೇರೆ ಜನಾಂಗವೆಂಬ ಭಾವನೆಯೆ ಇರಲಿಲ್ಲ. ಮಾವನೊಡನೆ ವಿಜ್ಞಾನವನ್ನು ಚರ್ಚಿಸುವನು. ಬ್ರೋನ್ಯಳ ಮಗು ಮೂರು

ವರ್ಷದ ಹೆಲೆನ್ ಜೊತೆಯಲ್ಲಿ ಮಗುವಿನಂತೆ ಆಡುವನು. ಒಂದೊಂದು ಸಲ ಪಿಯರಿಯ ತಂದೆ ತಾಯಿ ತಮ್ಮ ಮನೆಯಿಂದ ಇಲ್ಲಿಗೆ ಬರುವರು. ಮೊದಲೆ ಮನೆಯಲ್ಲಿ ನೆಲಸಿದ್ದ ಸಂತೋಷ, ಉತ್ಸಾಹಗಳು ಇನ್ನಷ್ಟು ಹೆಚ್ಚಾಗುವುವು. ಪಿಯರಿ ಪೋಲಿಷ್ ಭಾಷೆ ಕಲಿತದ್ದು ಇಲ್ಲಿಯೆ. ಪಿಯರಿಯ ಮಧುರವಾದ ಸ್ವಭಾವವನ್ನು ಕಂಡು ಆನಂದಭರಿತಳಾಗಿದ್ದ ಮೇರಿ ಎಷ್ಟೆಷ್ಟು ಬೇಡವೆಂದರೂ ಕೇಳದೆ ಪಿಯರಿ ಆ ಕಠಿಣವಾದ ಭಾಷೆಯನ್ನು ಕಲಿಯುವುದಕ್ಕೆ ಪ್ರಾರಂಭಿಸಿದ.

ಇಲ್ಲ ಈ ಭಾಗ ಮುಗಿಯುತ್ತಲೇ ಸೆಪ್ಟೆಂಬರ್ ತಿಂಗಳಲ್ಲಿ ಪಿಯರಿ ಮೇರಿಯನ್ನು ತಮ್ಮ ತಂದೆತಾಯಿಗಳ ಬಳಿಗೆ ಕರೆದುಕೊಂಡು ಹೋದ. ಎಂತಹ ಜನ, ಎಂತಹ ಹೃದಯ! ಅಲ್ಲೊಂದು ವಿಶ್ವಾಸದ ಹೊನಲು ಹರಿಯಿತು. 'ತಮ್ಮ ಪಿಯರಿ' ಲ್ಯಾಟಿನ್ ಕ್ವಾರ್ಟರ್ಸಿನ ಒಂದು ಕೋಣೆಯಲ್ಲಿ ವಾಸಿಸುತ್ತಿದ್ದ ಕಾಸಿಲ್ಲದ ಹುಡುಗಿಯೊಂದನ್ನು ಮದುವೆಯಾದನೆಂದರೆ, ಡಾಕ್ಟರ್ ಕ್ಯೂರಿಗಾಗಲಿ, ಅವನ ಹೆಂಡತಿಗಾಗಲಿ ಆಶ್ಚರ್ಯ ಅಸಮಾಧಾನಗಳೇ ಇಲ್ಲ. ಪಿಯರಿಯ ತಂದೆ ತಾಯಿಗಳಿಗೂ, ಅಣ್ಣ ಜಾಕ್ವೆಸ್‌ನಿಗೂ ಮೇರಿಯೆಂದರೆ ಅಚ್ಚುಮೆಚ್ಚು. ಅವಳ ಅಗಾಧವಾದ ಬುದ್ಧಿಶಕ್ತಿಯನ್ನು ಕಂಡು ಅವರು ಬೆರಗಾದರು.

ಅಕ್ಟೋಬರ್ ಹೊತ್ತಿಗೆ ಈ ಅಲೆದಾಟವೆಲ್ಲ ಮುಗಿದು ಪಿಯರಿ ಒಂದು ಮನೆ ಮಾಡಿ ಸಂಸಾರ ಹೂಡಿದ. ಮನೆ ಇಬ್ಬರ ಸ್ವಭಾವಕ್ಕೂ ತಕ್ಕಂತೆ ಇತ್ತು. ಅಲಂಕಾರವಾಗಲಿ, ಆಡಂಬರವಾಗಲಿ ಯಾವ ಕೋಣೆಯಲ್ಲಿಯೂ ಕಾಣಬರುತ್ತಿರಲಿಲ್ಲ. ಡಾಕ್ಟರ್ ಕ್ಯೂರಿ ಕೆಲವು ಸೋಫಾ, ಕುರ್ಚಿಗಳನ್ನು ಕೊಡುತ್ತೇನೆಂದರೂ ಮೇರಿ ಬೇಡವೆಂದಳು. ಅವುಗಳ ಯೋಗಕ್ಷೇಮ ನೋಡಿಕೊಳ್ಳುವುದಕ್ಕೆ ಅವಳು ಹೊತ್ತೆಲ್ಲಿಂದ ತರಬೇಕು? ಕೆಲಸದಲ್ಲಿ ಮುಳುಗಿರುತ್ತಿದ್ದ ಇವರಿಗೆ ಹೊರಗಿನ ಯಾವ ಸ್ನೇಹಿತರೂ ಬೇಕಿರಲಿಲ್ಲ. ಇದ್ದ ಎರಡು ಕುರ್ಚಿ ಮೇಜಿನ ಎರಡು ಕಡೆಗಳಲ್ಲಿ, ಮಧ್ಯ ಮೇಜಿನ ಮೇಲೆ ಭೌತಶಾಸ್ತ್ರದ ದೊಡ್ಡ ದೊಡ್ಡ ಪುಸ್ತಕಗಳು. ಇನ್ನು ಸ್ನೇಹಿತರಿಗೆ ಅಲ್ಲಿ ಸ್ಥಳವೆಲ್ಲಿ?

ಪಿಯರಿ ಸಂಪಾದಿಸುತ್ತಿದ್ದ ಹಣ ತಿಂಗಳಿಗೆ ಐನೂರು ಫ್ರಾಂಕುಗಳು

ಮಾತ್ರ. ವಿಶ್ವವಿದ್ಯಾಲಯದ ಫೆಲೋಷಿಪ್‌ನ್ನು ಸಂಪಾದಿಸುವ ತನಕ ಮೇರಿ ಫ್ರೆಂಚ್‌ಭಾಷೆ ಕಲಿಸಿ ಹಣ ಸಂಪಾದಿಸುವುದಕ್ಕಾಗುತ್ತಿರಲಿಲ್ಲ. ಆದರೆ ಮೇರಿಗೆ ಮಿತವ್ಯಯ ಮಾಡುವುದು ಏನೇನೂ ಕಷ್ಟವಿರಲಿಲ್ಲ.

ಇಲ್ಲಿ ಹೆಂಗುಸಿನ ದುಡಿತ, ಗಂಡುಸಿನದಕ್ಕಿಂತ ಕಷ್ಟವಾಗಿತ್ತು, ಪಿಯರಿಯ ಆಸೆಯೆಂದರೆ, ತಾನು ಪ್ರೀತಿಸುವ ಹೆಂಗುಸಿನೊಡನೆ ವಿಜ್ಞಾನದ ಸಂಶೋಧನೆಗಳಲ್ಲಿ ತೊಡಗುವುದೊಂದು ಮಾತ್ರ. ಮೇರಿಗೆ ಕೆಲಸ ಬೆಟ್ಟದಷ್ಟು ಇರುತ್ತಿತ್ತು. ಬೆಳಗ್ಗೆ ಬೇಗನೆ ಎದ್ದು ಮಾರ್ಕೆಟ್ಟಿಗೆ ಹೋಗಬೇಕು. ಅಡಿಗೆ ಮಾಡಬೇಕು. ಮನೆಯನ್ನೆಲ್ಲ ನೋಡಿಕೊಳ್ಳಬೇಕು. ಅಡಿಗೆಯನ್ನು ಧೈರ್ಯವಾಗಿ ಬೆಂಕಿಯ ಮೇಲೆ ಬಿಟ್ಟು ಶಾಖವನ್ನು ಸರಿಮಾಡಿ ಮೇರಿ ದಡದಡನೆ ಮೆಟ್ಟಲಿಳಿದು ಪಿಯರಿಯೊಡನೆ ಪ್ರಯೋಗಶಾಲೆಗೆ ಹೋಗುವಳು. ಪ್ರಯೋಗಶಾಲೆಯಲ್ಲಿ ಎಂಟುಗಂಟೆಗಳ ಕಾಲ ಕೆಲಸ. ಸಾಯಂಕಾಲವಾಗಿ ಮನೆಗೆ ಬಂದ ಮೇಲೆ ಎರಡು ಕುರ್ಚಿಗಳಲ್ಲಿ ಎದುರು ಬದುರಾಗಿ ಕುಳಿತರೆಂದರೆ ಇಬ್ಬರೂ ತಮ್ಮ ಕೆಲಸಗಳಲ್ಲಿ ಮುಳುಗುವರು. ಮೇರಿ ತನ್ನ ಫೆಲೋಷಿಪ್ಪಿಗೆ ತಯಾರು ಮಾಡುವಳು. ಅರ್ಧರಾತ್ರಿ ಎರಡುಗಂಟೆ ಮೂರು ಗಂಟೆಯ ತನಕ ಆ ಕೋಣೆಯಲ್ಲಿ ದೀಪದ ಮುಂದೆ ಹಾಳೆಮಗುಚುವ ಲೇಖಣಿಯಿಂದ ಬರೆಯುವ ಶಬ್ದ ಬಿಟ್ಟರೆ ಬೇರೆ ಶಬ್ದವಿಲ್ಲ; ಮಾತಿಲ್ಲ.

ಫೆಲೊಷಿಪ್ ಪಡೆಯುವ ಪರೀಕ್ಷೆಯಲ್ಲಿ ಮೇರಿ ಈ ಸಲವೂ ಮೊದಲನೆಯವಳಾಗಿ ತೇರ್ಗಡೆಯಾದಳು. ಪಿಯರಿ ಒಂದು ಮಾತನ್ನೂ ಆಡದೆ ತನ್ನ ದೃಢವಾದ ತೋಳನ್ನು ಮೇರಿಯ ಕೊರಳಸುತ್ತ ಬಳಸಿದ. ಮನೆಗೆ ಬಂದದ್ದೇ ತಡ, ಇಬ್ಬರೂ, ಚೀಲಗಳಲ್ಲಿ ಬಟ್ಟೆ ಮುಂತಾದುವುಗಳನ್ನು ತುಂಬಿ ಬೈಸಿಕಲ್‌ಗಳನ್ನು ಹತ್ತಿ ಪ್ರಯಾಣ ಹೊರಟರು.

ಮದುವೆಯಾದ ಎರಡನೆಯ ವರ್ಷ ಮೇರಿಗೆ ಇನ್ನಷ್ಟು ಕಠಿನಕ್ಕಿಟ್ಟು ಕೊಂಡಿತು. ಬಸರಿಯಾಗಿದ್ದು ಮೇರಿಗೆ ಆರೋಗ್ಯ ಕೆಟ್ಟುಹೋಯಿತು. ಉಕ್ಕಿನ ಆಕರ್ಷಣಶಕ್ತಿಯ ವಿಷಯವಾಗಿ ನಡೆಸುತ್ತಿದ್ದ ಸಂಶೋಧನೆಗೋಸ್ಕರ ಪ್ರಯೋಗಶಾಲೆಯಲ್ಲಿ ಕೆಲಸ ಮಾಡುವುದೇ ಅಸಾಧ್ಯವಾಗುತ್ತಿತ್ತು. ಇದರ ಜೊತೆಗೆ ಪಿಯರಿಯ ತಾಯಿಗೆ ಎದೆಯಲ್ಲಿ ಕ್ಯಾನ್ಸರ್ ಆಗಿ ಅವಳು ಬದುಕುವುದು ಸಾಧ್ಯವಿಲ್ಲವೆಂದು ತಿಳಿದುಹೋಗಿತ್ತು. ಮೇರಿಗೆ

ಮಗುವಾಗುವ ಸಮಯದ ಹೊತ್ತಿಗೆ ಪಿಯರಿಯ ತಾಯಿ ತೀರಿಹೋಗುವ ಸಂಭವವಿತ್ತು. ಈ ಚಿಂತೆಯಿಂದ ಪಿಯರಿ, ಮತ್ತು ಮೇರಿಯ ಉತ್ಸಾಹವೆಲ್ಲ ಕುಗ್ಗಿಹೋಗಿ ಮನಸ್ಸು ಖಿನ್ನವಾಗಿತ್ತು.

ಸೆಪ್ಟೆಂಬರ್ ೧೨ನೆಯ ದಿನ ಮೇರಿಗೆ ಹೆಣ್ಣುಮಗು ಹುಟ್ಟಿತು. ಮಗುವಿಗೆ ಐರೀನ್ ಎಂದು ಹೆಸರಾಯಿತು. ಮಗುವಾಗಿ ಮೂರು ತಿಂಗಳು ಕಳೆಯುವ ಹೊತ್ತಿಗೇ ಮೇರಿ ತಾನು ತೊಡಗಿದ್ದ ಸಂಶೋಧನೆಯನ್ನು ಮುಗಿಸಿ ಉಕ್ಕಿನ ಆಕರ್ಷಣಶಕ್ತಿಯ ವಿಷಯವಾಗಿ ಒಂದು ಪುಸ್ತಕ ಬರೆದು ಪ್ರಕಟಿಸಿದಳು. ಅದು ಮೇರಿಯ ಮೊಟ್ಟಮೊದಲನೆಯ ಸಂಶೋಧನೆ

ಇಷ್ಟಾದರೂ ಮೇರಿಗೆ ಪ್ರಯೋಗಶಾಲೆಯನ್ನಾಗಲಿ, ವಿಜ್ಞಾನದ ಸಂಶೋಧನೆಗಳನ್ನಾಗಲಿ ಬಿಟ್ಟುಬಿಡಬೇಕೆಂಬ ಭಾವನೆ ಹೊಳೆಯಲೇ ಇಲ್ಲ. ವಿಜ್ಞಾನವಿಲ್ಲದೆ ಹೋದರೆ ಆವಳ ಮನಸ್ಸಿಗೆ ಬದುಕು ಬರಿದಾಗಿ ಹೋಗುತ್ತಿದ್ದಿತು. ವಿಜ್ಞಾನದ ಮೇಲಿನ ಪ್ರೇಮ ಇಷ್ಟೊಂದು ಅಗಾಧವಾಗಿದ್ದರೂ ಮೇರಿಗೆ, ಮಗುವಾಗಲಿ, ಮನೆಯಾಗಲಿ, ಗಂಡನಾಗಲಿ ಮನಸ್ಸಿನಿಂದ ಮರೆಯಾಗಿ ಹೋಗುತ್ತಿರಲಿಲ್ಲ. ಮಗುವಿಗೆ ಮೈ ತೊಳೆದು, ಬಟ್ಟೆ ತೊಡಿಸುವ ಕೆಲಸಗಳನ್ನು ಮೇರಿ ಬೇರೆ ಯಾರಿಗೂ ವಹಿಸುತ್ತಿರಲಿಲ್ಲ. ಮಗುವಿಗೆ ಏನೊಂದು ಸಣ್ಣ ಕಾಯಿಲೆಯಾದರೂ, ತಂದೆ, ತಾಯಿ ರಾತ್ರಿಯೆಲ್ಲ ಕಣ್ಣು ಮುಚ್ಚದೆ ಆತಂಕಪಡುವರು. ಪ್ರಯೋಗಶಾಲೆಯಲ್ಲಿ ಕೆಲಸ ಮಾಡುತ್ತ ಮಾಡುತ್ತ ಮಗುವಿನ ವಿಷಯವಾಗಿ ಇಲ್ಲದ ಭಯ ಹಚ್ಚಿಕೊಂಡು ಮೇರಿ ದಡದಡನೆ ಮನೆಗೆ ಓಡಿಬರುವಳು. ದಾದಿಯ ಕೈಯಲ್ಲಿ ಮಗು ಸುರಕ್ಷಿತವಾಗಿರುವುದನ್ನು ನೋಡಿದ ಮೇಲೆ ತಿರುಗಿ ಪ್ರಯೋಗಶಾಲೆಗೆ ಹೋಗುವಳು. ಐರಿನ್ ಹುಟ್ಟಿದ ಕೆಲವು ದಿನಗಳಲ್ಲೇ ಹೆಂಡತಿಯನ್ನು ಕಳೆದುಕೊಂಡ ಡಾಕ್ಟರ್ ಕ್ಯೂರಿ ಮಗನ ಮನೆಯಲ್ಲಿ ಬಂದಿರಲು ತೊಡಗಿದ. ತಾತನ ರಕ್ಷಣೆಯಲ್ಲಿ ಮಗುವನ್ನು ಬಿಟ್ಟಮೇಲೆ ಮೇರಿಯ ಮನಸ್ಸಿಗೆ ಎಷ್ಟೋ ಸಮಾಧಾನವಾಯಿತು.

ಈ ಅದ್ಭುತವಾದ ಶರೀರಶ್ರಮ ಮೇರಿಯ ಮೇಲೇನೂ ಪ್ರಭಾವ ಬೀರಲಿಲ್ಲವೆ? ಇಷ್ಟೊಂದು ಬಹುಮುಖವಾದ ಕೆಲಸವನ್ನು ಒಬ್ಬ ಗಂಡು ಸಾಗಲಿ, ಸುಲಭವಾಗಿ ನಿರ್ವಹಿಸುವುದು ಸಾಧ್ಯವೆ? ವಿಜ್ಞಾನದ ಸಂಶೋ

ಧನೆ, ಪ್ರಯೋಗಶಾಲೆಯ ಕೆಲಸ, ಮೇರಿಯ ಮನಸ್ಸಿಗೆ ಸುಖಸಂತೋಷಗಳನ್ನು ತುಂಬಿಕೊಟ್ಟಂತೆ, ಶರೀರಕ್ಕೂ ಕೊಟ್ಟಿತೆಂದು ಭಾವಿಸಿಕೊಂಡರೆ ಆ ಭಾವನೆ ತಪ್ಪಾದೀತು. ದುಡಿದುಡಿದು ಮೇರಿಯ ದೇಹ ಶೋಷಿಸಿಹೋಗಿ ಗಳಿತವಾಯಿತು ಎಡಗಡೆಯ ಶ್ವಾಸಕೋಶದಲ್ಲಿ ಕ್ಷಯರೋಗದ ಚಿನ್ಹೆ ಕಾಣುತ್ತಿದೆಯೆಂದು ಡಾಕ್ಟರುಗಳು ಕೇಳಿದರು. ಪ್ಯಾರಿಸ್‌ಗೆಂದು ತಂದೆಯಿಂದ ಬೀಳ್ಕೊಂಡು ವಾರ್ಸಾದಲ್ಲಿ ರೈಲುಗಾಡಿ ಹತ್ತಿದ, ಗಟ್ಟಿಮುಟ್ಟಾದ ದುಂಡುದುಂಡಾದ ಪೋಲಿಷ್ ಹುಡುಗಿ ಮೇರಿ ಸ್ಕ್ಲೊಡೊವ್‌ಸ್ಕಿ ಎಲ್ಲಿ ಹೋದಳೋ? ಆರೇಳು ವರ್ಷ ಕಳೆಯುವ ಹೊತ್ತಿಗೆ ಮೂವತ್ತು ವರ್ಷದ ಮೆಡೇಮ್ ಕ್ಯೂರಿಯ ಮುಖದಲ್ಲಿ ಆ ಪೋಲಿಷ್ ಹುಡುಗಿಯ ಮುಖದ ಚಹರೆಯೇ ಇರಲಿಲ್ಲ. ವಯಸ್ಸಿಗಿಂತ ಎಳೆಯದಾಗಿ ಕಾಣುತ್ತಿದ್ದ ಆ ಮುಖವೇ ಬೇರೆ, ಆದ ವಯಸ್ಸಿಗಿಂತ ಹೆಚ್ಚಾಗಿ ತೋರುತ್ತಿದ್ದ ಈ ಮುಖವೇ ಬೇರೆ. ಆದರೂ ಈ ಅಪೂರ್ವವಾದ ಸಾಧನೆಯಿಂದ ಸಣಿಸಿಹೋಗಿ ಶಿಥಿಲವಾದದ್ದು ಮೇರಿಯ ದೇಹ ಮಾತ್ರ ಆತ್ಮ ಉಜ್ವಲವಾಗಿ ಉದ್ದೀಪ್ತವಾಯಿತು. ಸುಂದರವಾದ ಕಣ್ಣುಗಳಲ್ಲಿ ಹೊಸ ಬೆಳಕು ಮೂಡಿತು.

—

## ಅಧ್ಯಾಯ ಹನ್ನೊಂದು

### ಇಬ್ಬರು ವಿಜ್ಞಾನಿಗಳು

ಉಕ್ಕಿನ ಆಕರ್ಷಣ ಶಕ್ತಿಯ ವಿಷಯವಾದ ಸಂಶೋಧನೆ ಮುಗಿದು ಅದು ಪ್ರಕಟವಾದ ಮೇಲೆ ಮೇರಿ ಡಾಕ್ಟರ್ ಡಿಗ್ರಿಯನ್ನು ಪಡೆಯುವುದಕ್ಕೋಸ್ಕರ ಹೊಸದೊಂದು ಸಂಶೋಧನೆಯಲ್ಲಿ ತೊಡಗಿದಳು. ನಿಬಂಧ ಬರೆಯುವುದಕ್ಕೆ ವಿಷಯ ಹುಡುಕಲು ಮೇರಿಯೂ ಪಿಯರಿಯೂ ಒಟ್ಟುಗೂಡಿದರು. ಭೌತಶಾಸ್ತ್ರದಲ್ಲಿ ಇತ್ತೀಚೆಗೆ ಪ್ರಕಟವಾದ ಸಂಶೋಧನೆಗಳ

ನ್ನೆಲ್ಲ ಓದಿದರು. ಹೆನ್ರಿ ಬೆಕ್ವೆರೆಲ್ ಕಂಡುಹಿಡಿದಿದ್ದ ಕೆಲವು ವಿಷಯಗಳು ಇವರ ಕುತೂಹಲವನ್ನು ಕೆರಳಿಸಿದುವು. ಯುರೇನಿಯಂ ಧಾತುವಿನ ಸಂಯುಕ್ತಗಳು ಅಸಾಧಾರಣವಾದ ಕಿರಣಗಳನ್ನು ಹೊರಸೂಸುತ್ತವೆ. ಅನೇಕ ತಿಂಗಳುಗಳ ಕಾಲ ಕತ್ತಲೆಯಲ್ಲಿಟ್ಟಿದ್ದು ಆ ಮೇಲೆ ಕರಿಯ ಕಾಗದದಲ್ಲಿ ಸುತ್ತಿ ಬೆಳಕಿನ ಸಂಪರ್ಕವೇ ಇಲ್ಲದಂತೆ ಅದನ್ನು ಫೋಟೋಗ್ರಾಫಿಕ್ ಪ್ಲೇಟಿನ ಮೇಲಿಟ್ಟಾಗ ಕೂಡ ಅದು ಚಲ್ಲಿದ ಶಕ್ತಿಯುತವಾದ ಕಿರಣಗಳು ಕರಿಯ ಕಾಗದವನ್ನೂ ಭೇದಿಸಿ ಆ ಪ್ಲೇಟಿನ ಮೇಲೆ ಗುರುತುಮಾಡುತ್ತವೆ. ಆದುದರಿಂದ ಸೂರ್ಯನ ಬೆಳಕಿನ ಪ್ರಭಾವದಿಂದಲ್ಲ ಈ ಕಿರಣಗಳು ಹೊರಪಡುವುದು. ಹೆನ್ರಿ ಬೆಕ್ವೆರೆಲ್ ಇದನ್ನೆಲ್ಲ ಪರೀಕ್ಷಿಸಿ ತನ್ನ ಪ್ರಕಟನೆಯಲ್ಲಿ ವಿವರಿಸಿದ್ದ. ಆದರೆ ಸೂರ್ಯನ ಬೆಳಕಿಗೂ, ಈ ಕಿರಣಗಳ ಸ್ವಭಾವವೇನು? ಇವು ಹೇಗೆ ಹೊರಡುತ್ತವೆ. ಎಂಬ ವಿಷಯಗಳು ಮಾತ್ರ ಬಿಡಿಸದ ತೊಡಕುಗಳಾಗಿಯೇ ಇದ್ದುವು. ಮೇರಿಗೆ ತನ್ನ ನಿಬಂಧಕ್ಕೆ ವಿಷಯ ಇಲ್ಲಿ ಸಿಕ್ಕಿತು. ಪಿಯರಿ ಭೌತಶಾಸ್ತ್ರದ ಶಾಲೆಯ ಡೈರೆಕ್ಟರ್‌ನನ್ನು ಎಷ್ಟೋ ಕೇಳಿಕೊಂಡ ಮೇಲೆ, ಮೇರಿ ಆ ಶಾಲೆಯ ಕೆಳಗಿನ ಅಂತಸ್ತಿನಲ್ಲಿದ್ದ ಒಂದು ಉಗ್ರಾಣದಂತೆ ಇದ್ದ ಕೋಣೆಯನ್ನು ಉಪಯೋಗಿಸಿಕೊಳ್ಳಬಹುದೆಂದು ಅಪ್ಪಣೆ ದೊರೆಯಿತು. ಬೇಡದ ಸಾಮಾನುಗಳೆಲ್ಲ ಈ ಕೋಣೆಯಲ್ಲಿ ಅಡಕವಾಗಿದ್ದುವು. ಶೀತ, ತೇವ ಕೋಣೆಯಲ್ಲೆಲ್ಲ ಊರುತ್ತಿತ್ತು. ಸಲಕರಣೆಗಳಂತೂ ಏನೇನೂ ಇರಲಿಲ್ಲ. ಮೇರಿಯ ಸಂಶೋಧನೆಗೆ ಸಿಕ್ಕಿದ ಅನುಕೂಲವಾದ ಸ್ಥಳ ಇದು!

ಅನೇಕ ವಾರಗಳು ಕಳೆಯುವ ಹೊತ್ತಿಗೆ ಮೇರಿ ತನ್ನ ಸಂಶೋಧನೆಯಲ್ಲಿ ಮುಂದುವರಿದು, ಇಷ್ಟನ್ನು ಗೊತ್ತುಮಾಡಿಕೊಂಡಳು. ಈ ರೇಡಿಯೇಷನ್ (ಕಿರಣಗಳನ್ನು ಹೊರಚೆಲ್ಲುವ ಶಕ್ತಿ) ಪರೀಕ್ಷಿಸುವ ಸಾಮಾನುಗಳಲ್ಲಿ ಎಷ್ಟು ಹೆಚ್ಚು ಯುರೇನಿಯಂ ಇದ್ದರೆ ಅಷ್ಟಷ್ಟು ಹೆಚ್ಚಾಗಿರುತ್ತದೆ. ಬೆಳಕು, ಶಾಖ, ಯುರೇನಿಯಂ ಜೊತೆಯೊಡನೆ ಬೆರೆತಿರುವ ಇತರ ಧಾತುಗಳು ಮುಂತಾದುವು ಯಾವುವೂ ಈ ರೇಡಿಯೇಷನ್ ಮೇಲೆ ಯಾವ ಪ್ರಭಾವವನ್ನೂ ಬೀರುವುದಿಲ್ಲ.

ಹೀಗೆ ಕಿರಣವನ್ನು ಚೆಲ್ಲುವ ಶಕ್ತಿ ಯುರೇನಿಯಂಗೆ ಮಾತ್ರ ಇದೆಯೋ, ಅಥವಾ ಅಂತಹ ಶಕ್ತಿಯುಳ್ಳ ಇನ್ನು ಯಾವುದಾದರೂ ಧಾತುವುಂಟೇ ಎಂಬ

ಭಾವನೆ ಹೊಳೆದದ್ದೇ ತಡ, ಮೇರಿ ಯುರೇನಿಯಂ ಗೊಡವೆಯನ್ನು ಸದ್ಯಕ್ಕೆ ಬಿಟ್ಟು ಅನೇಕಾನೇಕ ಸಾಮಾನುಗಳನ್ನು ಪರೀಕ್ಷಿಸಿ ನೋಡಿದಳು. ಯುರೇನಿಯಂನಂತೆಯೇ ಥೋರಿಯಂ ಎಂಬ ಧಾತು ಕೂಡ ಇದೇ ರೀತಿ ಕಿರಣವನ್ನು ಹೊರಸೂಸುವುದು ಕಂಡುಬಂತು. ಈ ಶಕ್ತಿಗೆ ರೇಡಿಯೋ ಆಕ್ಟಿವಿಟಿ ಎಂದು ಹೆಸರಿಟ್ಟವಳೂ ಮೇರಿಯೇ!

ಮೇರಿ ಅಷ್ಟಕ್ಕೆ ಬಿಡಲಿಲ್ಲ. ಯುರೇನಿಯಂ ಧಾತುವಿನ ಅದುರಾದ ಪಿಚ್‌ಬ್ಲೆಂಡನ್ನು ಪರೀಕ್ಷಿಸಿದಳು. ಇತರ ಅದುರುಗಳನ್ನೂ ಪರೀಕ್ಷಿಸಿದಳು. ಯಾವ ಯಾವ ಅದುರಿನಲ್ಲಿ ಯುರೇನಿಯಂ ಅಥವಾ ಥೋರಿಯಂ ಇದ್ದುವೋ ಅವೆಲ್ಲ ಈ ರೇಡಿಯೋ ಚಟುವಟಿಕೆಯನ್ನು ತೋರಿಸಿದುವು. ಉಳಿದ ಅದುರುಗಳು ಕಿರಣಗಳನ್ನು ಚೆಲ್ಲುತ್ತಿರಲಿಲ್ಲ ಕಿರಣಗಳನ್ನು ಚೆಲ್ಲುವ ಅದುರುಗಳ ಚಟುವಟಿಕೆ ಎಷ್ಟಿದೆಯೆಂದು ಮೇರಿ ಪುನಃ ಪುನಃ ಅಳೆದು ನೋಡಿದಳು. ಇಲ್ಲೊಂದು ಅದ್ಭುತವಾದ ವಿಷಯ ಮೇರಿಗೋಸ್ಕರ ಕಾದಿತ್ತು. ಈ ಅದುರುಗಳ ಚಟುವಟಿಕೆ, ಅದರಲ್ಲಿದ್ದ ಯುರೇನಿಯಂ, ಥೋರಿಯಂಗಳು ತೋರಿಸಬಹುದಾದ ಚಟುವಟಿಕೆಗಿಂತ ಎಷ್ಟೋ ಪಾಲು ಹೆಚ್ಚಾಗಿತ್ತು. ತಾನು ಅಳೆದ ಲೆಕ್ಕಾಚಾರದಲ್ಲಿ ಏನಾದರೂ ತಪ್ಪಿದ್ದೀತೇ ಎಂದು ಮೇರಿ ಪುನಃ ಪುನಃ ಈ ಚಟುವಟಿಕೆಯನ್ನು ಅಳೆದು ನೋಡಿದಳು. ಇಲ್ಲೊಂದು ಅದ್ಭುತವಾದ ವಿಷಯ ಮೇರಿಗೋಸ್ಕರ ಕಾದಿತ್ತು. ಈ ಅದುರುಗಳ ಚಟುವಟಿಕೆ, ಅದರಲ್ಲಿದ್ದ ಯುರೇನಿಯಂ ಥೋರಿಯಂಗಳು ಅದುರಿನಲ್ಲಿ ಸ್ವಲ್ಪವೇ ಇರುವಾಗ, ಅವುಗಳಿಂದ ನಿರೀಕ್ಷಿಸಬಹುದಾದ್ದಕ್ಕಿಂತ ಹೆಚ್ಚಾಗಿ, ಅಗಾಧವಾಗಿ, ಈ ಅದುರುಗಳು ಕಿರಣವನ್ನು ಹೊರಸೂಸಬೇಕಾದರೆ, ಆ ಶಕ್ತಿ ಎಲ್ಲಿಂದ ಬಂದಿರಬೇಕು? ಮೇರಿಯ ತೀಕ್ಷ್ಣವಾದ ಬುದ್ಧಿಗೆ ಉತ್ತರ ನಿಮಿಷಮಾತ್ರದಲ್ಲಿ ಸ್ಫುರಿಸಿತು. ಯುರೇನಿಯಂ, ಥೋರಿಯಂಗಳಿಗಿಂತ ಎಷ್ಟೋ ಪಾಲು ಹೆಚ್ಚಾಗಿ ರೇಡಿಯೋ ಚಟುವಟಿಕೆಯುಳ್ಳ ಬೇರೊಂದು ಸಾಮಾನು ಈ ಪಿಚ್‌ಬ್ಲೆಂಡಿನಲ್ಲಿ ಅಡಗಿರಲೇಬೇಕು. ಮೇರಿ ಪ್ರತಿಯೊಂದು ಕೆಮಿಕಲ್ ಧಾತುವನ್ನೂ ಈ ಕಿರಣಗಳಿಗಾಗಿ ಪರೀಕ್ಷಿಸಿದ್ದಳೆಂದ ಮೇಲೆ, ಈ ಶಕ್ತಿ ಇನ್ನೂ ಯಾರಿಗೂ ತಿಳಿಯದ, ಯಾವ ವಿಜ್ಞಾನಿಯೂ ಬೆಳಕಿಗೆ ತಾರದ ಯಾವುದೋ ಒಂದು ಹೊಸ ಧಾತುವಿನ ಪ್ರಭಾವದಿಂದಲೇ ಉಂಟಾಗಿರಬೇಕು. ಪಿಚ್‌ಬ್ಲೆಂಡಿನಲ್ಲಿರುವ ಸಾಮಾನು

ಗಳನ್ನೆಲ್ಲ ಶಾಸ್ತ್ರಜ್ಞರು ಕಂಡುಹಿಡಿದಿದ್ದರು. ಆದ್ದರಿಂದ ಅವರ ಹಿಡಿತಕ್ಕೆ ಸಿಕ್ಕದೆ ತಪ್ಪಿಸಿಕೊಂಡ ಈ ವಿಚಿತ್ರ ಶಕ್ತಿಯುಳ್ಳ ಧಾತು ಅತ್ಯಲ್ಪ ಅಂಶದಲ್ಲಿ ಆ ಅದುರಿನಲ್ಲಿ ಸೇರಿಕೊಂಡಿರಬೇಕು. ಆ ಅತ್ಯಂತ ಸಣ್ಣ ಭಾಗ ಇಷ್ಟೊಂದು ತೀವ್ರವಾಗಿ ಕಿರಣಗಳನ್ನು ಚೆಲ್ಲುತ್ತಿದೆಯೆಂದರೆ ಅದೆಂತಹ ಅಪಾರ ಶಕ್ತಿ?

ಹೊಸ ಧಾತುವನ್ನೇ ಕಂಡುಹಿಡಿಯುವ ಭಾಗ್ಯ ತನ್ನದಾಗಬಹುದೆಂದು ತೋರಿದಾಗ ಮೇರಿಯ ಸಂತೋಷ ಅಷ್ಟಿಷ್ಟಲ್ಲ. ಆ ಶಕ್ತಿಯುತವಾದ ಧಾತು ಪಿಚ್‌ಬ್ಲೆಂಡಿನಲ್ಲಿ ಸೇರಿದೆಯೆಂದು ಅದನ್ನು ಕಣ್ಣಲ್ಲಿ ನೋಡದೆ ಇದ್ದರೂ, ಮೇರಿಯ ಮನಸ್ಸಿಗೆ ಖಚಿತವಾಗಿಹೋಗಿತ್ತು. ಅವಳು ಈ ವಿಷಯವಾಗಿ ಅನೇಕ ಭೌತಶಾಸ್ತ್ರಜ್ಞರ ಬಳಿ ಮಾತಾಡಿದಾಗಲೆಲ್ಲ ಅವರುಗಳು ಲೆಕ್ಕಾಚಾರ ತಪ್ಪಿರಬಹುದು, ಎಚ್ಚರಿಕೆಯಿಂದ ಮಾಡು ಎಂದೇ ಹೇಳುವರು. ಆದರೆ ಮೇರಿಯೇನೋ ಈ ಹೊಸ ಧಾತುವಿನಲ್ಲಿ ದೃಢನಂಬಿಕೆಯುಳ್ಳವಳಾಗಿದ್ದಳು. ೧೮೯೮ ನೆಯ ಏಪ್ರಿಲ್ ತಿಂಗಳ ಹೊತ್ತಿಗೆ ಮೇರಿ ಪಿಚ್‌ಬ್ಲೆಂಡಿನಲ್ಲಿ ಹೊಸದಾದ ಒಂದು ಧಾತುವಿರಬೇಕೆಂದೂ, ಆ ಧಾತುವಿನಲ್ಲಿ ಕಿರಣಗಳನ್ನು ಬೀರುವ ಶಕ್ತಿ ಅಗಾಧವಾಗಿರಬೇಕೆಂದೂ, ಪ್ರೊಫೆಸರ್ ಲಿಪ್‌ಮನ್ ಮೂಲಕ ಪ್ರಕಟಿಸಿದಳು. ಹೊಸ ಧಾತು ಇದೆಯೆಂಬ ಅನುಮಾನ ದೃಢಪಟ್ಟಮೇಲೆ ಅದನ್ನು ಬೇರ್ಪಡಿಸಿ ತೋರಿಸುವ ಕೆಲಸದ ಭಾಗ ಉಳಿಯಿತು.

ಮೇರಿಯ ಸಂಶೋಧನೆಯನ್ನೆಲ್ಲ ಆಸಕ್ತಿ ಕುತೂಹಲಗಳಿಂದ ನಿರೀಕ್ಷಿಸುತ್ತಿದ್ದ ಪಿಯುರಿ ಈ ಹೊತ್ತಿಗೆ ಮೇರಿಯೊಡನೆ ಬಂದು ಸೇರಿದನು. ಇದಕ್ಕೋಸ್ಕರ ತಾನು ಹರಳುಗಳ ವಿಷಯದಲ್ಲಿ ಮಾಡುತ್ತಿದ್ದ ಸಂಶೋಧನೆಯನ್ನು ಬಿಟ್ಟುಬಿಡಬೇಕಾಯಿತು. ಇಲ್ಲಿಂದ ಮುಂದೆ ಈ ವಿಜ್ಞಾನ ಸಂಶೋಧನೆಯಲ್ಲಿ ಅಪೂರ್ವವಾದೊಂದು ಹೊಂದಿಕೆ ಪ್ರಾರಂಭವಾಯಿತು. ಒಂದೇ ಯೋಚನೆಯನ್ನು ಬುದ್ಧಿಗೆ ಹೊಂದಿಸಿ, ಒಂದೇ ಭಾವವನ್ನು ಮನಸ್ಸಿನಲ್ಲಿ ಬಿತ್ತಿ, ಒಂದೇ ಫಲವನ್ನು ನಿರೀಕ್ಷಿಸುತ್ತ, ಒಂದನ್ನೊಂದು ಗಾಢವಾಗಿ ಪ್ರೀತಿಸುತ್ತಿದ್ದ ಹೆಣ್ಣೊಂದು, ಗಂಡೊಂದು ಎರಡು ಜೀವಗಳು ಒಟ್ಟಿಗೆ ಕೆಲಸ ಮಾಡಿದುವು. ೧೮೯೮ನೆಯ ಮೇ ಅಥವಾ ಜೂನ್‌ನಲ್ಲಿ ಉಂಟಾದ ಈ ಹೊಂದಿಕೆ, ವಿಧಿ ಒಬ್ಬರಿಂದ ಇನ್ನೊಬ್ಬರನ್ನು ಅಗಲಿಸುವ ವರೆಗೂ ಸುಮಾರು ಎಂಟು ವರ್ಷಗಳ ಕಾಲ ನಡೆದುಬಂತು. ಇಲ್ಲಿ ಯಾರಿಂದ ಯಾರಿಗೆ ಹೆಚ್ಚು

ನೆರವು ದೊರೆಯಿತೆಂದು ನಿರ್ಧರಿಸುವುದು ಹೇಗೆ ಸಾಧ್ಯ? ಮೇರಿಯನ್ನು ಕಾಣುವುದಕ್ಕೆ ಮೊದಲೇ ಪಿಯರಿ ಅನೇಕ ಸಂಶೋಧನೆಗಳನ್ನು ಯಶಸ್ವಿಯಾಗಿ ಮಾಡಿದ್ದ. ಮುಂದೆ ಪಿಯರಿ ಮೇರಿಯನ್ನು ಅಗಲಿ ಹೋದ ಮೇಲೆ, ಎರಡು ಮಕ್ಕಳನ್ನು ಕಟ್ಟಿಕೊಂಡ ಆ ಶಕ್ತಿಶಾಲಿನಿಯಾದ ಹೆಂಗಸು ಅಷ್ಟೇ ಯಶಸ್ವಿಯಾಗಿ ತನ್ನ ಸ್ವಂತ ಸಂಶೋಧನೆಗಳನ್ನು ಮಾಡಿ ಮುಗಿಸಿದಳು. ಎರಡನೆಯ ಸಲ ನೊಬೆಲ್ ಬಹುಮಾನ ಮೇರಿ ಪಡೆದದ್ದೂ ಗಂಡ ತನ್ನನ್ನು ಬಿಟ್ಟು ಸತ್ತುಹೋದ ಮೇಲೆ! ಆದ್ದರಿಂದಲೇ ಈ ಸಂಶೋಧನೆಗಳಲ್ಲಿ ನಾಲ್ಕು ಕೈಗಳು ಕೆಲಸ ಮಾಡಿದರೂ, ಒಂದು ಜೊತೆ ಇನ್ನೊಂದಕ್ಕೆ ಕಡಮೆಯಿಲ್ಲ, ಎರಡು ತೀವ್ರವಾದ ಬುದ್ಧಿಗಳು ಯೋಚಿಸಿದರೂ, ಒಂದನ್ನು ಇನ್ನೊಂದು ಮೀರಿಸುವಂತಹುದು. ಪ್ರಯೋಗಶಾಲೆಯ ಪುಸ್ತಕದಲ್ಲಿನ ಲೆಕ್ಕಾಚಾರದಲ್ಲಿ ಕಾಣುವುದು ಒಂದರೊಡನೊಂದು ಬೆಸೆದುಹೋಗಿರುವ ಎರಡು ಕೈಬರೆಹಗಳು. ಈ ಎಂಟು ವರ್ಷಗಳ ಪ್ರತಿಯೊಂದು ಸಂಶೋಧನೆಯ ಪ್ರಕಟಣೆಯಲ್ಲಿಯೂ 'ನಾವು ಮಾಡಿದೆವು', 'ನಾವು ಕಂಡೆವು' ಎಂದು ಹೇಳಿಕೊಳ್ಳುವ ವ್ಯಕ್ತಿಗಳು ಎರಡು ಪ್ರಕಟಣೆಯ ಕೊನೆಯಲ್ಲಿ ಕಾಣುವುದು ಎರಡು ಹೆಸರುಗಳು, 'ಪಿಯರಿ ಮತ್ತು ಮೇರಿ ಕ್ಯೂರಿ'.

ಪಿಯರಿ ಮತ್ತು ಮೇರಿ ಈ ಹೊಸ ಧಾತುವನ್ನು ಯುರೇನಿಯಂ ಅದುರಾದ ಪಿಚ್‌ಬ್ಲೆಂಡಿನಿಂದ ಬೇರ್ಪಡಿಸಲು ತೊಡಗಿದರು. ಈ ಪಿಚ್‌ಬ್ಲೆಂಡ್, ತನ್ನಲ್ಲಿದ್ದ ಯುರೇನಿಯಂಗಿಂತ ನಾಲ್ಕು ಸಾಲು ಹೆಚ್ಚಾಗಿ ರೇಡಿಯೋ ಚಟುವಟಿಕೆಯುಳ್ಳದ್ದಾಗಿತ್ತು. ಪಿಚ್‌ಬ್ಲೆಂಡಿನಲ್ಲಿದ್ದ ಸಾಮಾನುಗಳು, ಮೊದಲೇ ವಿಜ್ಞಾನಿಗಳಿಗೆ ತಿಳಿದಿದ್ದರಿಂದ, ಈ ಹೊಸ ಧಾತು ಬಹು ಕಮ್ಮಿಯ ಅಂಶದಲ್ಲಿ ಸುಮಾರು ನೂರರಲ್ಲಿ ಒಂದು ಭಾಗ ಇರಬಹುದೆಂದು ಮೇರಿ ಮತ್ತು ಪಿಯರಿ ಭಾವಿಸಿಕೊಂಡರು. ಆದರೆ, ಇಷ್ಟೊಂದು ಕಿರಣಗಳನ್ನು ಬೀರುತ್ತಿದ್ದ ಆ ಧಾತು, ಅದುರಿನಲ್ಲಿ ಹತ್ತು ಲಕ್ಷದ ಒಂದು ಭಾಗದಷ್ಟೂ ಇರಲಿಲ್ಲ. ಇಬ್ಬರು ವಿಜ್ಞಾನಿಗಳೂ, ಪಿಚ್‌ಬ್ಲೆಂಡ್ ಅದುರನ್ನು ರಾಸಾಯನಿಕವಾಗಿ ವಿಂಗಡಿಸಿ ಪ್ರತಿಯೊಂದು ಭಾಗದ ರೇಡಿಯೋ ಚಟುವಟಿಕೆಯನ್ನೂ ಅಳೆದರು. ಸರಿಯಾಗಿ ಪರೀಕ್ಷಿಸಿದಾಗ ಈ ಚಟುವಟಿಕೆ ಎರಡು ಭಾಗಗಳಲ್ಲಿ ಹೆಚ್ಚಾಗಿ ತೋರುತ್ತಿತ್ತು. ಹೊಸ ಧಾತು ಒಂದೇ ಅಲ್ಲ, ಎರಡಿರಬೇಕೆಂದು ಅವರಿಬ್ಬರಿಗೆ ತಕ್ಷಣ

ಹೋಳೆಯಿತು. ಮುಂದೆ ಅದರಲ್ಲಿ ಹೊಸದೊಂದು ಧಾತುವಿನ ಇರವನ್ನು ಸ್ಥಾಪಿಸುವುದು ಹೆಚ್ಚೇನೂ ಕಷ್ಟವಾಗಲಿಲ್ಲ. ಮೇರಿ ಈ ಹೊಸ ಧಾತುವಿಗೆ, ತನ್ನ ಪ್ರೀತಿಯ ಪೋಲೆಂಡ್ ದೇಶವನ್ನು ನೆನಸಿಕೊಂಡು, 'ಪೊಲೋನಿಯಂ' ಎಂದು ಹೆಸರಟ್ಟ ಮೇಲೆ, ೧೮೯೮ನೆಯ ಜುಲೈನಲ್ಲಿ ಇದು ಪ್ರಕಟವಾಯಿತು. ಇದೇ ವರ್ಷದ ಡಿಸೆಂಬರ್ ೨೬ರಲ್ಲಿ, ಮುಂದೆ ವಿಜ್ಞಾನಪ್ರಪಂಚವನ್ನು ಬೆರಗುಗೊಳಿಸಿದ ಅದ್ಭುತವಾದ, ಪ್ರಭಾವಯುತವಾದ ರೇಡಿಯಂ ವಿಷಯವೂ ಪ್ರಕಟವಾಯಿತು. ಈ ಪ್ರಥೆ, ಜೀವನವನ್ನು ವಿಜ್ಞಾನಕ್ಕೆ ಮುಡಿಪಾಗಿಟ್ಟು ಹೆಣಗುತ್ತ ಕತ್ತಲಲ್ಲಿ ಅವಿತಿಟ್ಟುಕೊಂಡಿದ್ದ ಇಬ್ಬರು ವಿಜ್ಞಾನಿಗಳನ್ನೂ ಉಜ್ವಲವಾಗಿ ಬೆಳಗಿತು.

ಪ್ರೀತಿಯ ಬೆಸುಗೆಯಿಂದ ಒಂದಕ್ಕೊಂದು ಹೊಂದಿಕೊಂಡಿದ್ದ ಈ ಎರಡು ಜೀವಗಳಿಗೆ ಇಲ್ಲಿ ಪ್ರಯೋಗಶಾಲೆಯಲ್ಲಿ ಒಂದು ಜೀವನವಾದರೆ ಅಲ್ಲಿ ಮನೆಯಲ್ಲಿ ಬೇರೊಂದು ಜೀವನ. ಇಲ್ಲಿ ಇಬ್ಬರ ಬದುಕಿಗೆ ಉತ್ಸಾಹವನ್ನು ತುಂಬುತ್ತಿದ್ದ ಸಂಶೋಧನೆಗಳು ಮನೆಯಲ್ಲಿ ಇಬ್ಬರ ಅಕ್ಕರೆಗೆ ನೆಲೆಯಾದ, ಎರಡು ಹೃದಯಗಳಲ್ಲಿ ಪ್ರೀತಿ ಉಕ್ಕಿಸುತ್ತಿದ್ದ ಮೇರಿಯ 'ಪುಟ್ಟ ರಾಣಿ' ಐರೀನ್. ಮೇರಿ, ಪ್ರಯೋಗಶಾಲೆಯಲ್ಲಿ ಸಂಶೋಧನೆಗಳ ವಿಷಯ ಬರೆಯುವಷ್ಟೇ ಆಸಕ್ತಿ ಉತ್ಸಾಹಗಳಿಂದ, ಎಚ್ಚರಿಕೆಯಿಂದ, ಐರೀನ್‌ಳ ವಾರವಾರದ ತೂಕವನ್ನೂ, ಆಹಾರದ ವಿಷಯವನ್ನೂ ಬರೆಯುವಳು. ಮಗುವಿನ ಆಟಗಳು, ಆಡುವ ಒಂದೊಂದು ಮುದ್ದು ಮಾತು, ಇವನ್ನೆಲ್ಲ ಪ್ರೀತಿಯಿಂದ ತನ್ನ ಡೈರಿಯಲ್ಲಿ ಬರೆದುಕೊಳ್ಳುವಳು. ತಾನು ಪ್ರೀತಿಸಿ ಮದುವೆಯಾದ ಗಂಡ, ತನ್ನ ಮುದ್ದು ಮಗು ಇವರ ಮೇಲೆ ಮೇರಿಯದು ಅಗಾಧವಾದ ವಿಶ್ವಾಸ. ಆ ಅಪೂರ್ವವಾದ ಹೆಣ್ಣುಹೃದಯದಲ್ಲಿ, ತಾಯಿಯ ಹೃದಯದಲ್ಲಿ, ತನ್ನ ಮನೆ, ತನ್ನ ಜನವೆಂದರೆ ಪ್ರೀತಿ ಮಮತೆಗಳ ಚಿಲುಮೆಯೇ ಉಕ್ಕುತ್ತಿತ್ತು. ಅಂತಹ ಪ್ರೀತಿಯ ಕೊರತೆ ಇದ್ದಿದ್ದರೆ, ವಿಜ್ಞಾನದಲ್ಲಿ ಮುಳುಗಿಹೋಗಿದ್ದ ಮೇರಿ, ಆಲಸ್ಯವೆಂಬ ಹೆಸರನ್ನು ಹತ್ತಿರ ಸೇರಿಸದೆ, ಮನೆಗಾಗಿ, ಮಗುವಿಗಾಗಿ, ಗಂಡನಿಗಾಗಿ, ಶಕ್ತಿಮೀರಿ ದುಡಿದು, ದೇಹ ದಂಡಿಸುವುದು ಸಾಧ್ಯವಾಗುತ್ತಿತ್ತೆ? ಪ್ಯಾರಿಸ್‌ನಲ್ಲಿದ್ದ ಅಕ್ಕನೂ ಭಾವನೂ, ಆಸ್ಟ್ರಿಯಾಗೆ ಸೇರಿದ್ದ ಪೋಲೆಂಡಿನಲ್ಲಿ ಕ್ಷಯರೋಗದ ಸ್ಯಾನಿಟೋರಿಯಂ

ಸ್ಥಾಪಿಸಲು ಹೊರಟುಹೋದಾಗ ಮೇರಿ ಅಕ್ಕನಿಗೆ ಬರೆದ ಕಾಗದದಿಂದ, ಆ ಹೃದಯದಲ್ಲಿದ್ದ ವಿಶ್ವಾಸದ ಆಳ ಚೆನ್ನಾಗಿ ತಿಳಿಯುತ್ತದೆ. ತಾಯಿಯನ್ನು ಕಳೆದುಕೊಂಡಾಗಿನಿಂದ ತನ್ನ ಸರ್ವಸ್ವವಾಗಿದ್ದ ಪ್ರೀತಿಯ ಬ್ರೊನ್ಯಳಿಗೆ ಮೇರಿ ಹೀಗೆ ಕಾಗದ ಬರೆದಳು. 'ನನ್ನ ಬದುಕು ಎಷ್ಟು ಬರಿದಾಗಿ ಹೋಯಿತೆಂಬುದನ್ನು ನೀನು ಊಹಿಸಲಾರೆ. ನನ್ನ ಗಂಡ, ಮಗುವನ್ನು ಬಿಟ್ಟರೆ, ಪ್ಯಾರಿಸ್‌ನಲ್ಲಿ ನನ್ನ ಜೀವನದ ಉಳಿದೆಲ್ಲ ಆಧಾರವನ್ನೂ ನಾನು ನಿಮ್ಮಿಬ್ಬರೊಡನೆ ಕಳೆದುಕೊಂಡು ಬಿಟ್ಟಿದ್ದೇನೆ. ನಾವು ಕೆಲಸ ಮಾಡುವ ಶಾಲೆ, ಮನೆ ಇವೆರಡನ್ನು ಬಿಟ್ಟರೆ, ಪ್ಯಾರಿಸ್ ಇದೆಯೋ ಇಲ್ಲವೋ ಎನ್ನಿಸುತ್ತದೆ.'

---

## ಅಧ್ಯಾಯ ಹನ್ನೆರಡು

### ನಾಲ್ಕು ವರ್ಷಗಳ ಹೋರಾಟ

ಇಷ್ಟಾದರೂ, ಮೇರಿ ಮತ್ತು ಪಿಯರಿ, ಈ ಎರಡು ಹೊಸ ಧಾತುಗಳನ್ನು ಅವುಗಳ ಅದುರಿನಿಂದ ಬೇರ್ಪಡಿಸಿ ತೋರಿಸಿರಲಿಲ್ಲ. ಈ ವಿಲಕ್ಷಣವಾದ ಧಾತುಗಳ ವಿಷಯ, ಅವುಗಳ ಅದ್ಭುತ ಗುಣ, ವಿಜ್ಞಾನಪ್ರಪಂಚವನ್ನು ಅಲ್ಲೋಲ ಕಲ್ಲೋಲ ಮಾಡಿದ್ದು ನಿಜ. ಆದರೆ ವಿಜ್ಞಾನ ಇಲ್ಲಿ ವಿಕಸಿತವಾಗಿ ಹೊಸದೊಂದು ಹಾದಿಗೆ ತಿರುಗುವ ಸಂಭವವಿತ್ತು. ಆದರೆ ತಮ್ಮ ಹಿಂದಿನ ಸಿದ್ಧಾಂತಗಳನ್ನೆಲ್ಲ ಸ್ವಲ್ಪ ಏರುಪೇರು ಮಾಡುವ ಈ ಹೊಸ ಧಾತುಗಳನ್ನು ವಿಜ್ಞಾನಿಗಳು ಒಡಪೆಟ್ಟಿಗೆ ಒಪ್ಪಲಿಲ್ಲ. ಈ ವಿಜ್ಞಾನಿಗಳು ಮಹಾ ಅನುಮಾನಜೀವಿಗಳು. ಭೌತಶಾಸ್ತ್ರಜ್ಞರಿಗೆ ತಾವಾಗಿ ಪ್ರಭೆ ಬೀರುವ ಧಾತುಗಳ ಅರ್ಥ ಸ್ವಲ್ಪವೂ ಹೊಳೆಯಲಿಲ್ಲ. ರಸಾಯನಶಾಸ್ತ್ರಜ್ಞರಿಗಂತೂ ರೇಡಿಯಂ ಧಾತುವಿನ ಸ್ವರೂಪವನ್ನು ತಾವಾಗಿ ಕಣ್ಣಿಂದ ನೋಡದೆ ನಂಬಿಕೆ ಹುಟ್ಟುವುದೇ ಅಸಾಧ್ಯವಾಗಿತ್ತು. ರೇಡಿಯಂ ಧಾತುವನ್ನು ಅದುರಿನಿಂದ ತೆಗೆದು ತೋರಿಸದೆ ಬೇರೆ ದಾರಿಯೇ ಇರಲಿಲ್ಲ.

ಈ ಕೆಲಸ ಒಂದಲ್ಲ ಎರಡಲ್ಲ ನಾಲ್ಕು ವರ್ಷ ಹಿಡಿಯಿತು. ಆ ದಿನದ ಕಷ್ಟಗಳೇನು? ಕಹಿಯೇನು? ತೃಪ್ತಿಯೇನು? ಸಂತೋಷವೇನು? ಇವೆಲ್ಲ ಹೇಳಿ ಮುಗಿಯಲಾರದಷ್ಟು. ಮೇರಿಯ ಪಾಲಿಗೆ ಲ್ಯಾಟಿನ್ ಕ್ವಾರ್ಟರ್ಸಿನ ಕೋಣೆಯಲ್ಲಿ ಕಳೆದ ವಿದ್ಯಾರ್ಥಿ ದಿನಗಳ ಸೌಖ್ಯ ಮರುಕಳಿಸಿತು. ಆ ದಿನಗಳ ಏಕಾಗ್ರತೆ, ಶರೀರ ದಂಡನೆ, ಆತ್ಮತೃಪ್ತಿ, ಬಾಳು ಹಿಂದಕ್ಕೆ ಸರಿದು ಪುನಃ ಕಾಣಿಸಿಕೊಳ್ಳುತ್ತಿವೆಯೇನೋ ಎಂಬಂತೆ ಹಿಂತಿರುಗಿದುವು. ಆ ದಿನ, ಪರೀಕ್ಷೆಯ ಫಲಿತಾಂಶಕ್ಕೆ ಕಾಯುತ್ತ, ತನ್ನ ಅದ್ಭುತವಾದ ಸಾಧನೆಯ ಫಲವನ್ನು ನಿರೀಕ್ಷಿಸುತ್ತ ಮೇರಿ ಉಸಿರುಹಿಡಿದು ನಿಂತಂತೆ, ಈಗ ತನ್ನ ರೇಡಿಯಂಗೋಸ್ಕರ ನಾಲ್ಕುವರ್ಷಗಳ ಕಾಲ ದಿನದಿನವೂ ಕಾದಳು. ಆದರೆ ಇಲ್ಲೊಂದು ಹೊಸತು ಎದ್ದು ಕಾಣಿಸುತ್ತಿತ್ತು. ವಿದ್ಯಾರ್ಥಿನಿಯಾಗಿದ್ದಾಗ ಹೆಣಗಿದ ಮೇರಿ ಒಂಟಿಗಳು. ಈಗ ತನ್ನ ಪ್ರೀತಿಗೆ ಸ್ವರೂಪವಾಗಿದ್ದ ವ್ಯಕ್ತಿಯೊಬ್ಬ ತನ್ನ ಜೊತೆಜೊತೆಗೆ ಹೆಣಗಿದ. ಎರಡು ತೀವ್ರವಾದ ಬುದ್ಧಿ ಒಂದಕ್ಕೊಂದು ನೆರವಾದದ್ದು, ಎರಡು ಹೃದಯಗಳಲ್ಲೂ ಪ್ರತಿಫಲಿಸಿ ಈ ಜೀವಗಳು ಒಂದಕ್ಕೊಂದು ಈ ಅವಧಿಯಲ್ಲಿ ಇನ್ನಷ್ಟು ಹೊಂದಿಕೊಂಡುವು. ತಾವಿಬ್ಬರೂ ಒಂದು ಎಂಬ ಭಾವ ತಾನಾಗಿ ಹುಟ್ಟಿಕೊಂಡಿತು. ತನ್ನ ಬಾಳಿನ ಪ್ರತಿಯೊಂದು ಸಂದರ್ಭದಲ್ಲೂ ಮೇರಿ ತನ್ನ ವಿಷಯವನ್ನು, ತನ್ನ ಮನಸ್ಸಿನ ಭಾವವನ್ನು, ತನ್ನ ಆಸೆ ಉತ್ಸಾಹಗಳನ್ನು ಇತರರಿಗೆ ಹೇಳಿಕೊಂಡದ್ದುಂಟು. ಆದರೆ ಈಗ ಮೇರಿ ತನ್ನ ಪ್ರಯೋಗಗಳವಿಷಯವಾಗಿ, ಇತರ ಯಾರಿಗೂ ತಿಳಿಸುತ್ತಿರಲಿಲ್ಲ. ಆ ಪ್ರಯೋಗಶಾಲೆಯ ಅಧಿಕಾರಿಗಳು ಮೇರಿ, ಪಿಯರಿ ಇಬ್ಬರೇ. ಮೇರಿ, ತನ್ನ ಹಂಚಿಕೆಗಳನ್ನು, ಹಂಬಲನ್ನು ಪಿಯರಿಯಲ್ಲದೆ ಇತರರೊಡನೆ ಹೇಗೆ ಹೇಳಿಕೊಳ್ಳಬಲ್ಲಳು? ಅದನ್ನು ಪಿಯರಿಯಲ್ಲದೆ ಯಾರು ಅರ್ಥಮಾಡಿಕೊಳ್ಳಬಲ್ಲರು? ರೇಡಿಯಂ ವಿಷಯ ಬಿಟ್ಟರೆ ಮೇರಿಗಾಗಲೀ ಪಿಯರಿಗಾಗಲೀ ಬೇರೆ ಧ್ಯಾನವಿಲ್ಲ. ಆ ನಾಲ್ಕು ವರ್ಷಗಳ ದೀರ್ಘಕಾಲದಲ್ಲಿ, ಈ ಇಬ್ಬರು ವಿಜ್ಞಾನಿಗಳು, ನಾಟಕಶಾಲೆಗಾಗಲೀ ಇತರ ಮನರಂಜನೆಯ ಸ್ಥಳಗಳಿಗಾಗಲೀ ಒಂದೇ ಒಂದು ಸಲವೂ ಕಾಲಿಡಲಿಲ್ಲ, ಒಬ್ಬ ಸ್ನೇಹಿತರ ಮುಖವನ್ನೂ ನೋಡಲಿಲ್ಲ. ಅವರಿಬ್ಬರಿಗೆ ದಿನವೆಲ್ಲ ಪ್ರಯೋಗಶಾಲೆಯಲ್ಲಿ ಕಳೆದುಹೋಗುವುದು. ಒಂದೊಂದು ಸಲ ವಿಶ್ರಾಂತಿಯೆಂದರೆ, ತಮ್ಮ

ತಮ್ಮ ಪ್ರಯೋಗಸಾಧನೆಗಳನ್ನು ಸ್ವಲ್ಪಹೊತ್ತು ಬಿಟ್ಟುಬಂದು ಒಬ್ಬರೊಡನೊಬ್ಬರು ಮಾತನಾಡುವರು. ಆ ಮಾತಿನ ವಿಷಯ ಇಬ್ಬರ ಪ್ರೀತಿಗೆ ಪಾತ್ರವಾದ ರೇಡಿಯಂ ಅಲ್ಲದೆ ಮತ್ತೇನು ! ಮಾತನಾಡುತ್ತ ಆಡುತ್ತ, ವಿಜ್ಞಾನಿಗಳಿಬ್ಬರೂ ಮಕ್ಕಳಾಗಿಬಿಡುವರು. ಪ್ರಿಯವಾದ ಆಟದ ಸಾಮಾನೊಂದನ್ನು ನಿರೀಕ್ಷಿಸುತ್ತಿರುವ ಮಗುವಿನಂತೆ ಮೇರಿ ರೇಡಿಯಂ ವಿಷಯವನ್ನು ಪ್ರಸ್ತಾಪಿಸುತ್ತ 'ಅದು ಹೇಗಿರುತ್ತದೋ, ಹೇಗೆ ಕಾಣುತ್ತದೋ! ಪಿಯರಿ, ಅದು ಹೇಗಿರುತ್ತದೆಂದು ನೀನು ಊಹಿಸುತ್ತೀಯೇ?' ಎನ್ನುವಳು. ಕನಸು ಕಾಣುತ್ತ ಪಿಯರಿ ಮೆಲ್ಲಗೆ ಉತ್ತರ ಕೊಡುವನು. 'ನನಗೆ ಗೊತ್ತಿಲ್ಲ. ಅದು ಅತ್ಯಂತ ಸುಂದರವಾದ ಬಣ್ಣದ್ದಾಗಿರಬೇಕೆಂದು ನನಗೆ ಇಷ್ಟ....'

ರೇಡಿಯಂ ಧಾತುವನ್ನು ಅದುರಾದ ಪಿಚ್‌ಬ್ಲೆಂಡಿನಿಂದ ಬೇರೆಮಾಡುವ ಕೆಲಸ ಕೈಕೊಂಡ ಕೂಡಲೆ, ಕಷ್ಟಗಳು ತಾವಾಗಿ ಮುಂದೆ ಬಂದುವು. ಮೂಟೆಮೂಟೆಗಟ್ಟಲೆ ಪಿಚ್‌ಬ್ಲೆಂಡ್ ಬೇಕು ಪ್ರಯೋಗಗಳನ್ನು ಮಾಡುವುದಕ್ಕೆ ಒಳ್ಳೆಯ ಸ್ಥಳ ಬೇಕು. ಹಣವಿದ್ದರೆ ಇವೆಲ್ಲ ಸುಲಭಸಾಧ್ಯವು. ಆದರೆ ಹಣ ಎಲ್ಲಿ ಸಿಕ್ಕಬೇಕು! ಪಿಚ್‌ಬ್ಲೆಂಡಿನ ಸಮಸ್ಯೆ ಸುಲಭವಾಗಿ ಪರಿಹಾರವಾಯಿತು. ಯೂರೇನಿಯಂ ಧಾತುವನ್ನು ಅದರಿಂದ ಬೇರ್ಪಡಿಸಿದ ಮೇಲೆ, ಉಳಿದ ಪಿಚ್‌ಬ್ಲೆಂಡ್ ಅದುರಿಗೆ ಅತ್ಯಂತ ಅಮೂಲ್ಯವಾದ ರೇಡಿಯಂ ಧಾತುವನ್ನು ತನ್ನಲ್ಲಿ ಅಡಗಿಸಿಟ್ಟುಕೊಂಡಿದ್ದ ಈ ಪಿಚ್‌ಬ್ಲೆಂಡ್ ಶೇಷಕ್ಕೆ ಬೆಲೆಯೇನೂ ಇರಲಿಲ್ಲ ಕೆಲಸಕ್ಕೆ ಬಾರದ ಈ ಅದುರಿನ ರಾಶಿಯನ್ನು ಹಾಳುಮಾಡದೆ ಒಂದುಕಡೆ ಸುರಿದಿದ್ದುದು, ಈ ವಿಜ್ಞಾನಿಗಳಿಬ್ಬರ ಪುಣ್ಯ ಅಷ್ಟೆ. ಈ ಗಣಿಗಳ ಒಡೆತನ ವಹಿಸಿದ್ದ ಆಸ್ಟ್ರಿಯನ್ ಸರ್ಕಾರ, ಒಂದು ಟನ್‌ನಷ್ಟು ಪಿಚ್‌ಬ್ಲೆಂಡ್ ಅದುರಿನ ಶೇಷವನ್ನು ಒಂದು ಕಾಸೂ ತೆಗೆದುಕೊಳ್ಳದೆ, ಈ 'ಹುಚ್ಚ'ರಿಬ್ಬರಿಗೂ ಬಹುಮಾನವಾಗಿ ದಾನ ಮಾಡಿತು. ಅದನ್ನು ಪ್ಯಾರಿಸ್‌ಗೆ ಸಾಗಿಸುವ ವೆಚ್ಚವನ್ನು ಮಾತ್ರ ಮೇರಿ, ಪಿಯರಿ ವಹಿಸಿಕೊಂಡರು.

ಇಷ್ಟು ಹೊತ್ತಿಗೆ ಮೇರಿ, ಪಿಯರಿ ತಮ್ಮ ಕೆಲಸಕ್ಕೆ ಒಂದು ಸ್ಥಳವನ್ನು ಹುಡುಕಲು ಮೊದಲುಮಾಡಿದರು ಸೋರ್ಬಾನ್‌ನಲ್ಲಿ ಎಷ್ಟೆಷ್ಟು ಪ್ರಯತ್ನಪಟ್ಟರೂ ಪ್ರಯೋಜನವಾಗದೆ ಹೋದಮೇಲೆ ಮೇರಿ ಇಷ್ಟು

ದಿನವೂ ಸಂಶೋಧನೆಗಳನ್ನು ನಡೆಸುತ್ತಿದ್ದ ಕೋಣೆಗೇ ಇಬ್ಬರೂ ಹಿಂತಿರುಗಿದರು. ಆ ಕೋಣೆಯ ಬಾಗಿಲು ಒಂದು ಅಂಗಳಕ್ಕೆ ತೆರೆಯುತ್ತಿತ್ತು. ಅಂಗಳದ ಆಚೆಕಡೆ ಲಾಯದಂತಿದ್ದ ಅಸಹ್ಯವಾದ ಕೋಣೆಯೊಂದು ಅದ್ಭುತವಾದ ರೇಡಿಯಂ ಮೊಟ್ಟಮೊದಲು ದೃಷ್ಟಿಗೋಚರವಾದ ಸ್ಥಳ. ಎಲ್ಲರೂ ಬೇಡವೆಂದು ಬಿಟ್ಟುಹೋಗಿದ್ದ, ಈ ಕೋಣೆಗೆ ಮೇಲುಗಡೆ ಗವಾಕ್ಷ, ಕೆಳಗೆ ಒಡಕು ಒಡಕಾದ ನೆಲ. ಛಾವಣಿಯಲ್ಲಿ ಎಷ್ಟೋ ಕಡೆ ಸಂದುಬಿಟ್ಟು ಮಳೆಯ ನೀರು ಒಳಕ್ಕೆ ನೇರವಾಗಿ ಇಳಿಯುತ್ತಿತ್ತು. ಮಳೆಯ ನೀರು ಇಳಿಯುವ ಭಾಗವನ್ನೆಲ್ಲ ಮೇರಿ, ಪಿಯರಿ ಗುರುತುಮಾಡಿ, ಆ ಭಾಗಗಳನ್ನು ಉಪಯೋಗಿಸದೆ ಬಿಡುತ್ತಿದ್ದರು. ಬಿಸಿಲುಗಾಲದಲ್ಲಿ ಶಖೆ ಅಸಾಧ್ಯವಾಗಿರುತ್ತಿತ್ತು. ಇಷ್ಟಾದರೂ ಈ ಸ್ಥಳದಲ್ಲಿ ಎಲ್ಲಿಲ್ಲದ ಒಂದು ಅನುಕೂಲ ಇತ್ತು. ಇಂತಹ ಕೋಣೆಯನ್ನು ಉಪಯೋಗಕ್ಕೆ ಕೊಡಲಾರೆವೆಂದು, ಯಾರಾದರೂ ಹೇಳಿಯಾರೆಂಬ ಭಯ ಸ್ವಲ್ಪವೂ ಇರಲಿಲ್ಲ. ಮೇರಿ, ಪಿಯರಿ, ತಮ್ಮ ಸಾಧನಗಳನ್ನೆತ್ತಿಕೊಂಡು ಬೀದಿಯಲ್ಲಿ ನಿಲ್ಲುವ ಶಂಕೆ ತಪ್ಪಿತಲ್ಲ, ಎಂದು ಸಂತೋಷಪಟ್ಟು ಯಾರಿಗೂ ಬೇಡದ ಈ ಕೋಣೆಯನ್ನು ಆಕ್ರಮಿಸಿಕೊಂಡರು.

ಒಂದು ದಿನ, ಮೂಟೆ ಮೂಟೆ ಪಿಚ್‌ಬ್ಲೆಂಡ್ ಅದುರನ್ನು ಹೊತ್ತಿದ್ದ ಇದ್ದಿಲು ಸಾಗಿಸುವಂತಹ ಗಾಡಿಯೊಂದು ಭೌತಶಾಸ್ತ್ರದ ಶಾಲೆಯ ಮುಂದೆ ಒಂದು ನಿಂತಿತು. ಪ್ರಯೋಗಶಾಲೆಯ ಉಡುಪನ್ನು ಧರಿಸಿದ್ದ ಮೇರಿ ಪಿಯರಿ ಇಬ್ಬರೂ ಹೊರಗೆ ಓಡೋಡಿ ಬಂದರು. ಪಿಯರಿಯದು ಉದ್ರೇಕವಿಲ್ಲದ ಶಾಂತಸ್ವಭಾವ. ಮೇರಿ ಹಾಗಲ್ಲ. ಪಿಚ್‌ಬ್ಲೆಂಡಿನ ಮೂಟೆಗಳನ್ನು ನೋಡುತ್ತಲೇ ಅವಳಿಗೆ ನಿಧಿಯನ್ನು ಕಂಡಷ್ಟು ಸಂತೋಷವಾಯಿತು. ಆ ಪಿಚ್‌ಬ್ಲೆಂಡ್ ತಮ್ಮದು! ತಮ್ಮ ರೇಡಿಯಂ ಅದರಲ್ಲಿ ಅಡಗಿದೆ! ಇಂತಹ ಅದುರು ಬೆಟ್ಟದಷ್ಟನ್ನಾದರೂ ಕರಗಿಸಿ ರೇಡಿಯಂ ತೆಗೆಯಬೇಕು! ಮೇರಿ ಕುತೂಹಲವನ್ನು ತಡೆಯಲಾರದೆ ಚೀಲವೊಂದನ್ನು ಬಿಚ್ಚಿ ಅದುರಿನ ಪುಡಿಯಲ್ಲಿ ಕೈಯಾಡಿಸಿದಳು. ಆ ಜೀರ್ಣವಾಗಿ ಹೋಗಿದ್ದ ಲಾಯದಲ್ಲಿ, ಈ ಕಂದುಬಣ್ಣದ ಅದುರಿನಿಂದ ಪ್ರಭೆಯನ್ನು ಎರಚುವ ರೇಡಿಯಂ ಧಾತುವನ್ನು ಬೇರ್ಪಡಿಸಬೇಕಾಗಿತ್ತು. ಆ ಕೆಲಸ ೧೮೯೮ರಿಂದ ೧೯೦೨ರ ವರೆಗೆ ಹಿಡಿಯಿತು.

ಕೆಲಸವನ್ನು ಮೇರಿಯೂ, ಪಿಯರಿಯೂ ಹಂಚಿಕೊಂಡರು. ಒಳಗೆ ಪಿಯರಿ, ರೇಡಿಯಂ ಧಾತು ಹೆಚ್ಚು ಹೆಚ್ಚಾಗಿರುವಂತೆ ರಾಸಾಯನಿಕವಾಗಿ ಮೇರಿ ಬೇರ್ಪಡಿಸಿದ್ದ ಭಾಗಗಳನ್ನುಪಯೋಗಿಸಿ ಸೂಕ್ಷ್ಮವಾದ ಪ್ರಯೋಗಗಳನ್ನು ಮಾಡುವನು. ಹೊರಗೆ ಅಂಗಳದಲ್ಲಿ ತಲೆಯಮೇಲೆ ಛಾವಣಿಯಿಲ್ಲದೆ ಮೇರಿ ಅದುರನ್ನು ರಾಸಾಯನಿಕವಾಗಿ ಬೇರೆ ಬೇರೆ ಭಾಗಗಳನ್ನಾಗಿ ಮಾಡುವಳು. ಪ್ರಯೋಗಶಾಲೆಯ ತನ್ನ ಹಳೆಯ ಉಡುಪನ್ನು ಉಟ್ಟು, ತಲೆಯನ್ನೂ ಕೂದಲನ್ನೂ ಗಾಳಿಗೆ ಒಡ್ಡಿ, ಗಂಟಲಿಗೂ, ಕಣ್ಣಿಗೂ ಉಡರುತ್ತಿರುವ ಹೊಗೆಯ ಮಧ್ಯದಲ್ಲಿ, ತನ್ನಷ್ಟೇ ಉದ್ದದ ಕಬ್ಬಿಣದ ಕೋಲಿನಿಂದ, ಕುದಿಯುತ್ತಿರುವ ಅದುರನ್ನು ಮೇರಿ ರಟ್ಟೆ ಮುರಿಯುವ ತನಕ ಕಲಕುವಳು. ಬೆಳಗಿನಿಂದ ರಾತ್ರಿಯ ತನಕ ಗಿರಣಿಯ ಕೂಲಿಯಂತೆ ಕೆಲಸ ಮಾಡುವಳು. ಇಷ್ಟೊಂದು ಕಷ್ಟದ ಪರಿಣಾಮವಾಗಿ ಪ್ರಯೋಗಶಾಲೆಯೊಳಗೆ, ಪಿಯರಿಯ ಮುಂದೆ, ರೇಡಿಯಂ ಅಂಶ ಹೆಚ್ಚಾಗುವಂತೆ ಬೇರ್ಪಡಿಸಿದ್ದ ಭಾಗಗಳು ಸಿದ್ಧವಾಗುವುವು. ದಿನಗಳುಕಳೆದು ತಿಂಗಳುಗಳಾಗಿ ವರ್ಷಗಳಾದುವು. ಮೇರಿ, ಪಿಯರಿ ರೇಡಿಯಮ ವಿಷಯವಾಗಿ ಎರಡು ಮೂರು ಪುಸ್ತಕಗಳನ್ನೂ ಪ್ರಕಟಿಸಿದರು. ಆದರೂ ರೇಡಿಯಂ ಧಾತು ಇನ್ನೂ ಬೇರ್ಪಟ್ಟಿರಲಿಲ್ಲ.

ಇಷ್ಟೊಂದು ಸಾಧನೆಯ ಫಲವಾಗಿ ರೇಡಿಯಂ ವಿಷಯ ರಸಾಯನ ಶಾಸ್ತ್ರದ ಒಂದು ಅಗಾಧವಾದ ಭಾಗವೇ ಆಯಿತು. ಈ ದೊಡ್ಡ ಕ್ಷೇತ್ರದಲ್ಲಿ ಸೂಕ್ಷ್ಮವಾದ ಸಂಶೋಧನೆಗಳನ್ನು ಕೈಗೊಳ್ಳಲು, ಬೇರೆ ವಿಜ್ಞಾನಿಗಳೂ ಬೇಕಾದರು. ಆಂಡ್ರೆ ಡಿ ಬೈರ್ನ್ ಎಂಬ ರಸಾಯನ ಶಾಸ್ತ್ರಜ್ಞ ಇವರೊಡನೆ ಸೇರಿ, ರೇಡಿಯೋ ಚಟುವಟಿಕೆಯುಳ್ಳ ಆಕ್ಟಿನಿಯಂಎಂಬ ಇನ್ನೊಂದು ಹೊಸ ಧಾತುವನ್ನು ಕಂಡುಹಿಡಿದ.ಜಾರ್ಜಸ್ ಸ್ಯಾಗ್‌ನಾಕ್ ಎಂಬ ಭೌತಶಾಸ್ತ್ರಜ್ಞ, ಪಿಯರಿ ಕ್ಯೂರಿಯೊಡನೆ ಸೇರಿ ರೇಡಿಯೋ ಚಟುವಟಿಕೆಯುಳ್ಳ ಧಾತುಗಳು ಚೆಲ್ಲುವ ಕಿರಣಗಳ ವಿಷಯದಲ್ಲಿ ಸಂಶೋಧನೆಯೊಂದನ್ನು ಮಾಡಿದ.

ಮೇರಿ ದಿನದಿನವೂ ಟನ್‌ಗಟ್ಟಲೆ ಪಿಚ್‌ಬ್ಲೆಂಡಿನಿಂದ ರೇಡಿಯಂ ಧಾತುವನ್ನು ಬೇರೆ ಮಾಡುವ ಕೆಲಸದಲ್ಲಿ ತೊಡಗಿದಳು. ಸಾಯಂಕಾಲದ ಹೊತ್ತಿಗೆ ಕೆಲಸ ಮಾಡಿಮಾಡಿ ದಣಿದು ತಟ್ಟಾಗುವಳು. ಈ ನಾಲ್ಕು ವರ್ಷದ ಅವಧಿಯಲ್ಲಿ ಎಷ್ಟೋ ವಿಧವಾದ ಕೆಲಸಗಳ ಹೊಣೆಯನ್ನು ಒಬ್ಬ

ಹೆಂಗಸು, ಹೊರಬೇಕಾಯಿತು. ಭೌತಶಾಸ್ತ್ರಜ್ಞಳು, ರಸಾಯನಶಾಸ್ತ್ರಜ್ಞಳು, ಶಿಲ್ಪಶಾಸ್ತ್ರಜ್ಞಳು, ದಿನಗೂಲಿ, ಇವು ಪ್ರತಿಯೊಂದೂ ಮೆಡೇಮ್ ಕ್ಯೂರಿಯೆ! ಕೊನೆಕೊನೆಗೆ ಅಂಗಳದ ಕೆಲಸ ಮುಗಿದು ಲಾಯದಂತಿದ್ದ ಕೋಣೆಯೊಳಗೆ ಮುರುಕು ಮೇಜಿನ ಮೇಲೆ, ರೇಡಿಯಂ ಲೋಹವನ್ನು ಮೊದಲಿಗಿಂತ ಅತ್ಯಧಿಕ ಪ್ರಮಾಣದಲ್ಲಿ ಹೊಂದಿದ್ದ ಪಿಚ್‌ಬ್ಲೆಂಡ್ ಸಿದ್ಧವಾಯಿತು. ಅದನ್ನು ಶುದ್ಧಮಾಡುವ ಕೆಲಸವೊಂದು ಉಳಿದಿತ್ತು. ಚೊಕ್ಕಟವಾದ ಪ್ರಯೋಗ ಶಾಲೆ, ಅಚ್ಚುಕಟ್ಟಾದ ಪ್ರಯೋಗ ಸಾಧನಗಳು, ಈಗ ಬೇಕೇ ಆಗಿದ್ದುವು. ಎಷ್ಟೋ ಎಚ್ಚರಿಕೆಯಿಂದ ಶುದ್ಧ ಮಾಡಿದ್ದ ಸಾಮಾನಿನಲ್ಲಿ ಕೊಳೆ ಸೇರಿ, ಮಾಡಿದ ಕೆಲಸವೆಲ್ಲ ದಂಡವಾಗಿಬಿಡುತ್ತಿತ್ತು. ಇದೆಂತಹ ವೇದನೆ ಎಂಬು ದನ್ನು ಮೇರಿ, ಪಿಯರಿ ಮಾತ್ರ ಬಲ್ಲರು! ಪಿಯರಿಯ ಮನಸ್ಸಂತೂ ರೋಸಿ ಹೋಗಿ ಅವನು ಈ ರೇಡಿಯಂ ಬೇರ್ಪಡಿಸುವ ಕೆಲಸವನ್ನು ಸದ್ಯಕ್ಕೆ ಬಿಟ್ಟು ಬಿಡಲು ಸಿದ್ಧವಾಗಿದ್ದ. ಪಿಯರಿಯಂತಹ ಗಂಡಸಿನ ಕೆಚ್ಚು ಕೊನೆ ಮುಟ್ಟಿತ್ತು. ಆದರೆ ಮೇರಿಗೆ, ಹೆಂಗುಸು, ಹೆಂಗುಸಿನ ಹಟವಾದಿತನ, ಮೊಂಡತನ ಅವಳಲ್ಲಿ ಬಲವಾಗಿತ್ತು. ಮೇರಿ ರೇಡಿಯಂ ಧಾತುವನ್ನು ಕಣ್ಣಿಂದ ನೋಡುತ್ತೇನೆಂದು ಶಪಥ ಮಾಡಿದ್ದವಳಂತೆ, ೧೯೦೨ರ ಹೊತ್ತಿಗೆ ಒಂದು ಡೆಸಿಗ್ರಾಮ್‌ನಷ್ಟು ಶುದ್ಧವಾದ ರೇಡಿಯಂ ಲವಣವನ್ನು ಅದುರಿ ನಿಂದ ಬೇರ್ಪಡಿಸಿ, ಧಾತುವಿನ ಅಣುವಿನ ತೂಕ ೨೨೫ ಎಂದು ಕಂಡುಹಿಡಿ ದಳು. ಅದುರಿನಲ್ಲಿ ೧೦ ಲಕ್ಷದ ಒಂದು ಭಾಗ ಕೂಡ ಇಲ್ಲದೆ ತನ್ನ ಅಪಾರ ಶಕ್ತಿಯನ್ನು ರಾಶಿರಾಶಿ ಅದುರಿನಲ್ಲಿ ಹರಡಿ ತೋರಿಸಿದ್ದ ಅದ್ವಿತೀಯವಾದ ರೇಡಿಯಂ ಬೆಳಕು ಕಂಡುದು, ಇಲ್ಲಿ, ಈ ಭಗ್ನವಾದ ಲಾಯದಲ್ಲಿ, ಒಬ್ಬ ಹೆಂಗುಸಿನ ಬುದ್ಧಿಸಾಹಸಗಳಿಂದ! ರೇಡಿಯಂ ಧಾತುವಿನ ಇರವನ್ನೇ ಒಪ್ಪದೆ ಹೋಗಿದ್ದ ಚಾಣಾಕ್ಷರಾದ ರಸಾಯನ ಶಾಸ್ತ್ರಜ್ಞರೆಲ್ಲ ಮೆಡೇಮ್ ಕ್ಯೂರಿಯ ಮುಂದೆ ಸೋತು ತಲೆಬಾಗಿದರು.

೧೯೦೨ರ ಒಂದು ರಾತ್ರಿ ೯ ಗಂಟೆಯ ಸಮಯದಲ್ಲಿ ಮೇರಿ ಮಗು ವಿನ ಬಳಿಹೋಗಿ ಕುಳಿತಿದ್ದಳು. ನಾಲ್ಕು ವರ್ಷದ ಐರಿನ್ ರಾತ್ರಿ ಅಮ್ಮ ತನ್ನ ಬಳಿ ಇಲ್ಲದಿದ್ದರೆ ಕೂಗಿ ಕೂಗಿ ಕಳವಳಪಡುವಳು. ಮೇರಿ ಎಷ್ಟೋ ಹೊತ್ತು ಮಗುವಿನ ಹತ್ತಿರ ಕುಳಿತು ಅದನ್ನು ನಿದ್ರೆಮಾಡಿಸಿ ಮಹಡಿ

ಯಿಂದ ಕೆಳಗಿಳಿದು ಬಂದಳು. ಪಿಯುರಿ ಕೆಳಗೆ ಶತಪತ ತಿರುಗುತ್ತಿದ್ದನು. ಒಂದು ನಿಮಿಷ ಮೇರಿ ತನ್ನ ಹತ್ತಿರದಿಂದ ಮರೆಯಾದರೆ, ಐರಿನ್‌ಳಂತೆಯೇ ಪಿಯುರಿಯೂ ಕಳವಳಪಡುವನು. 'ಆ ಮಗುವನ್ನು ಬಿಟ್ಟರೆ ಬೇರೆ ಯೋಚನೆಯೇ ನಿನಗಿಲ್ಲ' ಎನ್ನುವನು. ಎಂತಹ ಆಕ್ಷೇಪ! ಮೇರಿ, ಹೆಣ್ಣು, ತಾಯಿ, ಇಂತಹ ತಪ್ಪನ್ನು ಹೇಗೆ ತಿದ್ದಿಕೊಳ್ಳಬಲ್ಲಳು? ಮೇರಿ ಕೆಳಗಿಳಿದು ಬಂದು ಐರಿನ್ನಳ ಲಂಗವೊಂದನ್ನು ಹೊಲಿಯುತ್ತ ಕುಳಿತಳು. ಆದರೆ ಈ ರಾತ್ರಿ ಉತ್ಸಾಹ ಕುತೂಹಲಗಳು ಮನಸ್ಸನ್ನು ಕೆರಳಿಸುತ್ತಿರುವಾಗ ತನ್ನ ಕೆಲಸದಲ್ಲಿ ತೊಡಗಲಾರದೆ 'ಈಗ ಒಂದು ಕ್ಷಣ ಅಲ್ಲಿಗೆ ಹೋದರೋ!' ಎಂದಳು. ಪಿಯುರಿಯ ಮನಸ್ಸು ಅದನ್ನೇ ಯೋಚಿಸುತ್ತಿತ್ತು. ಅವರಿಬ್ಬರ ಪ್ರೀತಿಯ ರೇಡಿಯಂ ಇಬ್ಬರನ್ನೂ ತನ್ನ ಕಡೆಗೆ ಕರೆಯುತ್ತಿತ್ತು. ದಿನವೆಲ್ಲ ದಣಿದೂ ಎರಡು ಗಂಟೆಗೆ ಮುಂಚೆ ತಾನೇ ಮನೆಗೆ ಬಂದಿದ್ದ, ಮೇರಿ ಪಿಯುರಿ, ಆ ರಾತ್ರಿಯ ಹೊತ್ತಿನಲ್ಲಿ ಪ್ರಯೋಗಶಾಲೆಯ ಕಡೆಗೆ ನಡೆದು ಹೊರಟರು. ಪಿಯುರಿ ಬೀಗ ತೆಗೆದು ಬಾಗಿಲನ್ನು ನೂಕಿದ. ಬಾಗಿಲು ಕಿರ್ರೆನ್ನುತ್ತ ತೆರೆಯಿತು. ಮೇರಿ ಕತ್ತಲಲ್ಲಿ 'ದೀಪಹಚ್ಚಬೇಡ' ಎಂದಳು. ಆ ಮೇಲೆ ನಗುತ್ತ ಹೇಳಿದಳು. 'ರೇಡಿಯಂ ಸುಂದರವಾದ ಬಣ್ಣದ್ದಾಗಿರಬೇಕೆಂದು ನೀನು ಹೇಳಿದ ದಿನ ನೆನಪಿದೆಯೇ?' ಇಲ್ಲಿ ಕತ್ತಲಲ್ಲಿ ರೇಡಿಯಂ ಕಣಗಳು ಗಾಜಿನ ಪಾತ್ರೆಗಳೊಳಗೆ ಎಷ್ಟು ಸುಂದರವಾಗಿ ಕಾಣಿಸುತ್ತಿದ್ದುವೋ! ಸುತ್ತಲಿನ ಕತ್ತಲಲ್ಲಿ ತೂಗುತ್ತಿರುವಂತೆ, ರೇಡಿಯಂ ಮಂದವಾದ ನೀಲಿ ಮಿಶ್ರವಾದ ಬೆಳಕನ್ನು ಬೀರುತ್ತ ತನ್ನ ಇರವನ್ನು ಸ್ಪಷ್ಟವಾಗಿ ತೋರಿಸುತ್ತಿತ್ತು. ಮೇರಿ ಹೃದಯದಲ್ಲಿ ಸಂತೋಷೋದ್ರೇಕವನ್ನು ತುಂಬಿಕೊಂಡು 'ನೋಡು, ನೋಡು ಪಿಯುರಿ' ಎಂದಳು. ಆ ಕತ್ತಲಲ್ಲಿ ಒಂದು ಕುರ್ಚಿಯನ್ನು ಎಳೆದುಕೊಂಡು ಮೇರಿ ಕುಳಿತಳು. ಸಮ್ಮೋಹಿತವಾದ ಎರಡು ಜೊತೆ ಕಣ್ಣುಗಳು ಆ ಬೆಳಕಿನ ಆಟವನ್ನು, ರೆಪ್ಪೆಯಲುಗಿಸದೆ ನೋಡುತ್ತಿದ್ದುವು. ಮೇರಿ ಸ್ವಲ್ಪ ಮುಂದಕ್ಕೆ ಬಾಗಿ, ಪ್ರೀತಿ, ವಿಶ್ವಾಸಗಳಿಂದ ಸೆರೆಯಾಗಿ, ಒಂದು ಗಂಟೆಯ ಮುಂಚೆ, ತನ್ನ ನಿದ್ದೆಮಾಡುವ ಮಗುವಿನಬಳಿ ಕುಳಿತಿದ್ದಂತೆ ತನ್ನ ಪ್ರೀತಿಯ ರೇಡಿಯಂ ಬಳಿ ಕುಳಿತಿದ್ದಳು. ಪಿಯುರಿ ತನ್ನ ಸೌಭಾಗ್ಯವಾಗಿದ್ದ ಮೇರಿಯ ತಲೆ ಕೂದಲ ಮೇಲೆ ಮೃದುವಾಗಿ ಕೈಯಾಡಿಸುತ್ತಿದ್ದ.

---

ಅಧ್ಯಾಯ ಹದಿಮೂರು

# ಬಡತನ



ನಾಲ್ಕು ವರ್ಷದ ಕಷ್ಟದ ಫಲವಾಗಿ ರೇಡಿಯಂ ಹಸ್ತಗತವಾಯಿತು. ಒಳ್ಳೆಯದೊಂದು ಪ್ರಯೋಗಶಾಲೆ ಇಲ್ಲದಿದ್ದರೂ, ಆ ಲಾಯದಲ್ಲಿ ಒಂದು ಪ್ರಯೋಗಶಾಲೆ, ಈ ವಿಜ್ಞಾನಿಗಳದಾಗಿ ಉಳಿದಿತ್ತು. ನಾಲ್ಕು ವರ್ಷಗಳ ಕಾಲ ಮೇರಿಯೂ ಪಿಯುರಿಯೂ ಒಟ್ಟಿಗೆ ಸಂಶೋಧನೆಗಳನ್ನು ಮಾಡಿದರು. ಎಷ್ಟು ದಿನಗಳಿಂದ ಹಂಬಲಿಸಿ ಪಡೆದಿದ್ದ ಭಾಗ್ಯ ಇದು ! ಆದರೂ ಈ ನಾಲ್ಕು ವರ್ಷಗಳ ಕಾಲ, ಮೇರಿಯೂ ಪಿಯುರಿಯೂ, ಸುಖ ಅನುಭವಿಸಿದರೇ ಎಂದರೆ, ಇಲ್ಲ ಎಂದೇ ಹೇಳಬೇಕಾದೀತು ! ಇಬ್ಬರ ಹೃದಯ, ಅಂತರಾತ್ಮ ಸಂತೋಷದಲ್ಲಿ ಮುಳುಗಿದ್ದುದು ನಿಜ. ಅಂತಹ ಸಂತೋಷ ಸಾಧಾರಣವಾಗಿ ಎಲ್ಲರ ಕೈಗೂ ಎಟಕುವುದಿಲ್ಲ. ಹೃದಯಗಳೆರಡೂ ಪ್ರೀತಿಯಿಂದ ಬಂಧಿತವಾಗಿ ಒಬ್ಬರಿಗೊಬ್ಬರಾಗಿ ಜೀವಿಸುತ್ತಿದ್ದ ಅಂತಹ ದಾಂಪತ್ಯ ಇನ್ನೆಲ್ಲಿದ್ದೀತು ! ಆದರೆ ಅಪ್ರತಿಮ ಪ್ರತಿಭಾವಂತರಾಗಿದ್ದರೂ, ಒಬ್ಬರ ಸಹವಾಸದಲ್ಲಿ ಇನ್ನೊಬ್ಬರು ಪ್ರೀತಿಯನ್ನು ಹಿರಿದುತುಂಬಿಕೊಳ್ಳುತ್ತಿದ್ದರೂ, ಪ್ರಪಂಚದಲ್ಲಿ ಎಲ್ಲರಂತೆ ಜೀವಿಸಲೇಬೇಕಾಗಿತ್ತು. ಹಣವಿಲ್ಲದೆ ಅದು ಹೇಗೆ ಸಾಧ್ಯ? ವಿಜ್ಞಾನಕ್ಕೋಸ್ಕರ ದೇಹವನ್ನು ಎಷ್ಟೊಂದು ದಂಡಿಸಿದರೂ ಅದರಿಂದ ಒಂದು ಕಾಸಿನ ಲಾಭವೂ ಇರಲಿಲ್ಲ. ಮನೆಯಲ್ಲಿ ವೆಚ್ಚ ಬೆಳೆಯತೊಡಗಿತ್ತು. ಐರಿನ್ ಹುಟ್ಟಿದ ಮೇಲೆ ದಾದಿಯೊಬ್ಬಳೂ, ಆಳೊಬ್ಬನೂ ಮನೆಯ ಪರಿವಾರದಲ್ಲಿ ಹೆಚ್ಚಾಗಿ ಸೇರಿದ್ದರು. ಪಿಯುರಿ ತನ್ನ ಶಾಲೆಯ ಪಾಠಗಳ ಜೊತೆಗೆ ಬೇರೆ ಇನ್ನೇನಾದರೂ ಕೆಲಸ ಹುಡುಕಿಕೊಳ್ಳಬಹುದಾಗಿತ್ತು. ಆದರೆ ಸಣ್ಣ ಸಂಬಳಕ್ಕೋಸ್ಕರ ಅವನು ದಿನವೆಲ್ಲ ಹೇಗೆ ದುಡಿದಾನು? ಪಿಯುರಿ ಊಟ, ನಿದ್ರೆ ಬಿಟ್ಟರೂ, ಪ್ರಯೋಗಶಾಲೆಯ ಕೆಲಸ ಮಾತ್ರ ಬಿಡಲಾರ. ಪ್ರಯೋಗ

ಶಾಲೆಯಲ್ಲಿ ಕೆಲಸ ಮಾಡಲು, ಕಾಲವನ್ನೂ ಒದಗಿಸಿ ಹಣಸಂಪಾದನೆಗೂ ಮಾರ್ಗ ಮಾಡುತ್ತಿದ್ದ ಕೆಲಸ ಒಂದೇ ಒಂದು, ಸೋರ್ಬಾನ್ನಿನಲ್ಲಿ ಪ್ರೊಫೆಸರ್ ಕೆಲಸ. ಪಿಯರಿ ಈ ಕೆಲಸಕ್ಕಾಗಿ ಹಾತೊರೆಯುತ್ತಿದ್ದ. ಆದರೆ ಸೋರ್ಬಾನ್ನಿನ ಭಾಗ್ಯ ಪಿಯರಿಯನ್ನು ಪಡೆಯುವಷ್ಟು ಇನ್ನೂ ದೊಡ್ಡದಾಗಿರಲಿಲ್ಲ. ಪಿಯರಿಯ ಹೃದಯದ ಇನ್ನೊಂದು ಹಂಬಲವೆಂದರೆ ಒಂದು ಅಚ್ಚುಕಟ್ಟಾದ ಪ್ರಯೋಗಶಾಲೆಯನ್ನು ಪಡೆಯುವುದು. ಪಿಯರಿಯ ಈ ಆಸೆ ಅವನ ಬಾಳಿನಲ್ಲಿ ಫಲಿಸಲೇ ಇಲ್ಲ. ಪ್ರೊಫೆಸರ್ ಕೆಲಸ ಸಿಕ್ಕಿದದ್ದು ೧೯೦೪ರ ಹೊತ್ತಿಗೆ, ಪ್ರಪಂಚವೆಲ್ಲ ಪಿಯರಿಯನ್ನು ಹಾಡಿ ಹೊಗಳಿದ ಮೇಲೆ.

ಇಂತಹ ಪ್ರತಿಭಾವಂತನಿಗೆ, ಪ್ರೊಫೆಸರ್ ಆಗಲು ಎಲ್ಲರಿಗಿಂತ ಹೆಚ್ಚು ಯೋಗ್ಯತೆ ಪಡೆದಿದ್ದವನಿಗೆ ಸೋರ್ಬಾನ್ನಿನಲ್ಲಿ ಏಕೆ ಕೆಲಸ ಸಿಕ್ಕಲಿಲ್ಲ ? ಆ ತಪ್ಪು ಪಿಯರಿಯದು. ವಿಜ್ಞಾನದ ಸಮಸ್ಯೆಗಳನ್ನು ಲೀಲಾಜಾಲವಾಗಿ ಬಿಡಿಸುತ್ತಿದ್ದ ಈ ಮೇಧಾವಿಗೆ, ಮುಂದೆ ನುಗ್ಗಿ ಹೋಗಿ, ತನ್ನ ಪಕ್ಕಿನ ಸ್ಥಾನವನ್ನು ಭದ್ರಪಡಿಸಿಕೊಳ್ಳುವ ಯೋಗ್ಯತೆ ಏನೇನೂ ಇರಲಿಲ್ಲ. ತನ್ನ ಜೊತೆಯ ಸ್ಪರ್ಧಿಗಳನ್ನು ಹಿಂದೆ ತಳ್ಳುವ ಚಾಣಾಕ್ಷತನವಂತೂ ಪಿಯರಿ ತನ್ನ ಬಳಿ ಸುಳಿಯಗೊಡುತ್ತಿರಲಿಲ್ಲ. ಇಂತಹ ಸನ್ನಿವೇಶದಲ್ಲೂ ತಾನಾಗಿ ಒಂದ ಒಳ್ಳೆಯ ಸಂದರ್ಭವೊಂದನ್ನು ಮೇರಿಯೂ ಪಿಯರಿಯೂ ಕಳೆದುಕೊಳ್ಳಬೇಕಾಯಿತು. ಸ್ವಿಟ್ಸರ್‌ಲೆಂಡಿನ ಜಿನೀವ ವಿಶ್ವವಿದ್ಯಾಲಯ, ಭೌತಶಾಸ್ತ್ರದ ಅಧ್ಯಾಪಕನಾಗಿ ಪಿಯರಿಯನ್ನೂ ಪ್ರಯೋಗಶಾಲೆಯಲ್ಲಿ ಒಂದು ಕೆಲಸಕ್ಕಾಗಿ ಮೇರಿಯನ್ನೂ ತಾನಾಗಿ ಆಹ್ವಾನಿಸಿತು. ಇದರ ಜೊತೆಗೆ ಪ್ರಯೋಗಶಾಲೆಯ ಮೇಲ್ವಿಚಾರಣೆಯೂ ಸಿಕ್ಕಿತ್ತು. ಹಣ ಸಂಪಾದನೆ ಬೇಕಾದಷ್ಟಿತ್ತು. ಜೀವನದ ಹೊಂಗನಸು ನನಸಾಗುವ ಸಮಯ ತಾನಾಗಿ ಒದಗಿ ಒಂದಿತ್ತು. ಮೇರಿಯೂ ಪಿಯರಿಯೂ ಈ ಅಧಿಕಾರದಿಂದ ಮೋಹಿತರಾಗಿ ಜಿನೀವಾಕ್ಕೆ ಹೊರಟು ಹೋದರು. ಹೋಗುವಾಗ ತಮ್ಮ ಪ್ರೀತಿಯ ರೇಡಿಯಂನ್ನು ಪ್ಯಾರಿಸ್‌ನಲ್ಲಿ ಹಿಂದೆ ಬಿಟ್ಟು ಹೋದರು. ರೇಡಿಯಂ ಧಾತುವನ್ನೂ ಇತರ ಸಾಧನಗಳನ್ನೂ ಸ್ವಿಟ್ಸರ್‌ಲೆಂಡಿಗೆ ಸುಲಭವಾಗಿ ಸಾಗಿಸುವುದಕ್ಕೆ ಸಾಧ್ಯವಿರಲಿಲ್ಲ. ವಿಜ್ಞಾನಿಗಳಿಬ್ಬರೂ ಜಿನೀವಾದಲ್ಲಿ ಜುಲೈ ತಿಂಗಳಿಂದ ಬೇಸಗೆಯ ತನಕ ಹೇಗೆ ಕಾಲಕಳೆದರೋ ! ರೇಡಿಯಂ ಅವರನ್ನು

ಎಡಬಿಡದೆ ಹಿಂದಕ್ಕೆ ಕರೆಯುತೊಡಗಿತು. ಆ ಕೂಗಿಗೆ ಶರಣಾಗಿ, ಪಿಯರಿ ಪ್ಯಾರಿಸ್‌ನಲ್ಲೇ ಉಳಿಯುವುದಾಗಿ ನಿರ್ಧರಿಸಿ ಜೇಸಿವಾಕ್ಕೆ ರಾಜೀನಾಮೆಯ ಕಾಗದವನ್ನು ತಲುಪಿಸಿದ. ಬಡತನ ಮರೆಯದೆ ತಿರುಗಿ ಬೆನ್ನು ಹತ್ತಿತು.

ಈ ಬಡತನವನ್ನು ಮೈಯಿಂದ ಕೊಡವಲು ಕ್ಯೂರಿ ದಂಪತಿಗಳು ತಮಗೆ ಸಾಧ್ಯವಾದ ಪ್ರಯತ್ನವನ್ನೆಲ್ಲ ಮಾಡಿದರು. ಮೇರಿ ಹುಡುಗಿಯರ ನಾರ್ಮಲ್ ಶಾಲೆಯೊಂದರಲ್ಲಿ ಭೌತಶಾಸ್ತ್ರದ ಅಧ್ಯಾಪಕಳಾದಳು. ಯಾವ ಕೆಲಸವನ್ನೂ ಚೆನ್ನಾಗಿ ಮಾಡಿ ಮುಗಿಸುವ ಮೇರಿ ಈ ಕೆಲಸವನ್ನೂ ಮನಃ ಪೂರ್ವಕವಾಗಿ ಮಾಡಿದಳು. ಆದರೂ ಹೆಂಗುಸೊಬ್ಬಳು ಸಂಪಾದಿಸುವುದು ಕ್ಯೋಸ್ಕರ, ಅದರಲ್ಲೂ ಹೊಟ್ಟೆ ಒಟ್ಟೆಗೆ ಮಾತ್ರವೇ ಸಂಪಾದಿಸುವುದಕ್ಯೋ ಸ್ಕರ ಎಷ್ಟು ಕಷ್ಟಗಳನ್ನು ಹೊರಬೇಕಾಯಿತು! ಇಲ್ಲಿ ಮನೆಯ ಕೆಲಸ, ಅಲ್ಲಿ ಪ್ರಯೋಗಶಾಲೆ, ಇದರ ಜೊತೆಗೆ ಶಾಲೆಗೆ ಹೋಗುವ ಟ್ರ್ಯಾಮ್ ಗಾಡಿಯನ್ನು ಹಿಡಿಯಲು ಒಂದೊಂದು ಸಲ ಅರ್ಧಗಂಟೆ ಕಾಯಬೇಕು. ಹುಡುಗರು ಪಾಠ ಬರೆದು ಒಪ್ಪಿಸಿದ ಪುಸ್ತಕಗಳ ಹೊರೆ ಹೊರೆಗಳನ್ನು ಮನೆಗೆ ತಂದು ತಿದ್ದಬೇಕು. ಪ್ರಯೋಗಶಾಲೆ, ಸಂಶೋಧನೆಗಳ ಆಸೆ ಒಂದು ಇಲ್ಲದಿದ್ದರೆ, ಮೇರಿಗೂ ಇದೆಲ್ಲ ಒಂದು ಕಷ್ಟವಲ್ಲ; ಯೋಚನೆಗೆ ವಿಷಯವಲ್ಲ! ಆದರೆ ಈ ಪ್ರಯೋಗಶಾಲೆ ಅವಳ ಜೀವನದ ಒಂದು ಭಾಗ ವಾಗಿ ಸೇರಿಹೋಗಿತ್ತು. ಮೇರಿಯಂಥ ತೀವ್ರವಾದ ಬುದ್ಧಿಯನ್ನು ತಲೆ ಯಲ್ಲಿ ಹೊತ್ತ ವ್ಯಕ್ತಿಯ ಅಮೂಲ್ಯವಾದ ಕಾಲ ವಿನಿಯೋಗವಾಗಬೇಕಾಗಿ ದ್ದುದು, ಅಲ್ಲಿ, ಪ್ರಯೋಗಶಾಲೆಯಲ್ಲಿ!

ಮೇರಿಯ ಜೊತೆಜೊತೆಗೆ, ವಿಜ್ಞಾನದ ಹುಚ್ಚು ಹಿಡಿಸಿಕೊಂಡಿದ್ದ ಇನ್ನೊಂದು ವ್ಯಕ್ತಿಯ ಸ್ಥಿತಿಯೂ ಹೀಗೆಯೇ ಆಗಿತ್ತು. ಪಿಯರಿ ಇನ್ನೊಂದು ಹೆಚ್ಚು ಸಂಬಳದ ಕೆಲಸವನ್ನೇನೋ ಸಂಪಾದಿಸಿಕೊಂಡಿದ್ದ. ಆದರೆ ಎಲ್ಲ ದಕ್ಕೂ ಅನುಕೂಲವಾದ ಪ್ರೊಫೆಸರ್ ಕೆಲಸ ಹೇಗೆ ಸಿಕ್ಕಬೇಕು? ಹೊರ ಗಿನ ಪ್ರಪಂಚವೆಲ್ಲ ಹಾಡಿಹೊಗಳುವ ತನಕ, ಕೀರ್ತಿ ವಿಶ್ವವ್ಯಾಪಿಯಾಗುವ ತನಕ, ಮನೆಯವರು ಸನ್ಮಾನಿಸುವುದುಂಟೆ? ಅಲ್ಲದೆ ಪಿಯರಿಗೆ ಮೇರಿ ಪ್ರೀತಿಸಿ ಗಂಡನನ್ನಾಗಿ ಆರಿಸಿಕೊಂಡ ಈ ಪಿಯರಿಗೆ ತನ್ನ ಯೋಗ್ಯತೆಯನ್ನು ಪ್ರದರ್ಶಿಸುವ ಸಾಹಸವೇ ಉಂಟಾಗುತ್ತಿರಲಿಲ್ಲ. ಪ್ರತಿಸಲವೂ ಪ್ರೊಫೆಸರ್

ಕೆಲಸ ಖಾಲಿ ಬಿದ್ದಾಗ, ಇವನ ಸ್ನೇಹಿತರು ಪಿಯರಿಯನ್ನು ಮುಂದೆ ನೂಕುವುದು, ಪಿಯರಿ ಹಿಂತಿರುಗಿ ಅವರಿಗೆ ಹತಾಸೆಯನ್ನುಂಟುಮಾಡು ವುದು, ಇದು ನಡೆಯುತ್ತಲೇ ಇತ್ತು. ಸೋರ್ಬನ್ನಿನಲ್ಲಿ ಧಾತುವಿದ್ಯೆಯ ಸ್ಥಾನ ಖಾಲಿ ಬಿದ್ದಿತ್ತು. ಹರಳುಗಳ ವಿಷಯದಲ್ಲಿ ಎಷ್ಟೋ ಸಂಶೋಧನೆ ಗಳನ್ನು ನಡೆಸಿದ್ದ ಪಿಯರಿಗಿಂತ ಆ ಸ್ಥಾನಕ್ಕೆ ಯೋಗ್ಯರು ಯಾರೂ ಇರ ಲಿಲ್ಲ. ಪಿಯರಿ ಆ ಕೆಲಸಕ್ಕೆ ಪ್ರಯತ್ನಪಟ್ಟು ಜೊತೆಯಲ್ಲಿ ಪ್ರತಿಸ್ಪರ್ಧಿಯಾಗಿ ನಿಂತವನಿಗೆ ಆ ಕೆಲಸ ದೊರಕಿತು. ಪ್ರೊಫೆಸರ್ ಮಾಸ್‌ಕಾರ್ಟ, ಪಿಯರಿಯ ಸ್ನೇಹಿತ, ಪಿಯರಿಯನ್ನು ಮನಸಾರೆ ಮಾಡಿ ಪ್ರೊಫೆಸರ್ ಕೆಲಸದ ಹತ್ತಿರ ಕ್ಕಾದರೂ ತರಬೇಕೆಂದು ಇನ್ನಿಲ್ಲದ ಪ್ರಯತ್ನಪಟ್ಟ. ೧೯೦೨ರಲ್ಲಿ ಸೈನ್ಸ್ ಅಕ್ಯಾಡೆಮಿಗೆ ಪಿಯರಿ ಉಮೇದವಾರನಾಗಿ ನಿಲ್ಲಬೇಕೆಂದು ಒಲವಂತ ಮಾಡಿದ. ಪಿಯರಿ ಅನುಮಾನಿಸಿ ಅನುಮಾನಿಸಿ ಕೊನೆಗೆ ಅಲ್ಲಿಯ ಭೌತ ಶಾಸ್ತ್ರದ ಶಾಖೆಯವರೆಲ್ಲ ಪಿಯರಿಯನ್ನು ಪ್ರಶಂಸೆ ಮಾಡಿದ ಮೇಲೆ ಒಪ್ಪಿ ಕೊಂಡ. ಮ್ಯಾಸ್‌ಕಾರ್ಟ್ ಅವನು ಮಾಡಬೇಕಾದ ಕೆಲಸಗಳೆಲ್ಲ ಅವ ನನ್ನು ತಯಾರುಮಾಡಿದ ಮೇಲೆ, ಪಿಯರಿ ಜೀವವನ್ನು ಹಿಡಿಮಾಡಿಕೊಂಡು ಅಕ್ಯಾಡೇಮಿಗೆ ಸೇರಿದ್ದ ಒಬ್ಬೊಬ್ಬರನ್ನೂ ನೋಡಲು ಹೊರಟ. ಮೆಟ್ಟಿಲು ಗಳನ್ನು ಹತ್ತಿ, ತಾನು ಬಂದಿರುವೆನೆಂದು ಹೇಳಿಕೊಂಡು ಒಬ್ಬೊಬ್ಬರ ಮುಂದೂ ನಿಂತುಕೊಳ್ಳುವುದೆಂದರೆ, ತಲೆ ಕುಸಿದುಹೋಗುವಷ್ಟು ಅವ ಮಾನ, ಎಲ್ಲಕ್ಕಿಂತ ಹೆಚ್ಚಾಗಿ, ತನ್ನ ಯೋಗ್ಯತೆಯನ್ನು ಅವರ ಮುಂದೆ ಕೊಚ್ಚಿಕೊಂಡು ತಾನು ಮಹಾಗಟ್ಟಿಗನೆಂದು ಹೊಗಳಿಕೊಳ್ಳಬೇಕು. ಇದು ಮನುಷ್ಯಮಾತ್ರರಿಂದ ಸಾಧ್ಯವಿಲ್ಲ. ಹೀಗೆಲ್ಲ ಭಾವಿಸಿಕೊಂಡ ಪಿಯರಿ ಈ ಸಲದ ಸ್ಪರ್ಧೆಯಲ್ಲಿ ಇನ್ನೂ ಒಂದು ಹೆಜ್ಜೆ ಮುಂದುವರಿದ. ತನ್ನ ಹೆಮ್ಮೆ ಯನ್ನು ಹೊಗಳಿಕೊಳ್ಳುವುದಿರಲಿ, ಪಿಯರಿ ತನ್ನ ಪ್ರತಿಸ್ಪರ್ಧಿಯಾಗಿದ್ದ ಆ ಮಗ್ಯಾಟ್‌ನನ್ನು ಮನಃಪೂರ್ವಕವಾಗಿ ಹಾಡಿಹೊಗಳಿ, ಅವನು ಇದಕ್ಕೆ ತನಗಿಂತ ಯೋಗ್ಯನೆಂದು ವಿವರಿಸಿ ಹೇಳಿ ಹಿಂತಿರುಗಿದ. ಆ ಮಗ್ಯಾಟ್ ಸುಲಭವಾಗಿ ಚುನಾಯಿತನಾದ.

ಪ್ರೊಫೆಸರ್ ಕೆಲಸದ ಆಸೆ ಬಯಲಾದಂತೆಲ್ಲ ಪಿಯರಿ ತನಗಿದ್ದ ಕೆಲಸ ವನ್ನೇ ನೆಚ್ಚುತ್ತಬಂದ. ಈ ಕೆಲಸದ ಜೊತೆಯಲ್ಲಿ ತನಗೊಂದು ಒಳ್ಳೆಯ

ಪ್ರಯೋಗಶಾಲೆಯೂ ಸಿಕ್ಕಬಹುದೆಂದು ಪಿಯರಿ ಗಟ್ಟಿಯಾಗಿ ಆಸೆಪಡು ತ್ತಿದ್ದ ಹಾಗೆ ಸಿಕ್ಕಿದ್ದರೆ, ಪಿಯರಿ ಉಳಿದೆಲ್ಲ ವಿಷಯವನ್ನೂ ಹಚ್ಚಿಕೊಳ್ಳುತ್ತಿರ ಲಿಲ್ಲವೋ ಏನೋ! ಆದರೆ ಪ್ರಯೋಗಶಾಲೆಯೇನೋ ಸಿಕ್ಕಲಿಲ್ಲ.

ಈ ಕಷ್ಟಗಳ ಹೊರೆಯನ್ನು ತಾಳಲಾರದೆ ಮೊದಲು ಕುಸಿದುಬಿದ್ದ ವನು ಪಿಯರಿ. ಇದ್ದಕ್ಕಿದ್ದಹಾಗೆ ಕಾಲುಗಳಲ್ಲಿ ಅಸಾಧ್ಯವಾದ ನೋವು ಕಾಣಿಸಿಕೊಂಡು ಅವನು ಅನೇಕಸಲ ಹಾಸಿಗೆ ಹಿಡಿಯುವನು. ಮೇರಿ ಮಾತ್ರ ತಾನಿನ್ನೂ ಸರಿಯಾಗಿದ್ದೇನೆಂದೇ ಭಾವಿಸಿಕೊಳ್ಳುವಳು. ಕ್ಷಯ ರೋಗದ ಚಿಹ್ನೆ ತಾನಾಗಿ ಮಾಯವಾಗಿದ್ದುದು ಅವಳಿಗೆ ಎಷ್ಟೋ ಭರವಸೆ ಯನ್ನು ಕೊಟ್ಟಿತ್ತು. ಆದರೇನು, ಮೇರಿ ಈ ನಾಲ್ಕು ವರ್ಷಗಳಲ್ಲಿ ಹದಿ ನೈದು ಪೌಂಡುಗಳಷ್ಟು ತೂಕದಲ್ಲಿ ಇಳಿದುಹೋಗಿದ್ದಳು. ಹುಟ್ಟಿನಿಂದ ತುಂಬು ಮೈಯವಳಾಗಿದ್ದವಳು ಒಣಗಿ ಕಡ್ಡಿಯಾಗಿದ್ದಳು.

ಬಡತನದ ಚಿಂತೆ, ಅದನ್ನು ಹೋಗಲಾಡಿಸಿಕೊಳ್ಳಲು ಶಕ್ತಿಮೀರಿ ಕೆಲಸ ಮಾಡುವ ಚಿಂತೆ, ಆಹಾರದಲ್ಲಿ ಅಲಕ್ಷ್ಯ ಇವೆಲ್ಲ ಮೇರಿಯ ಜೀವ ವನ್ನು ಹಿಂಡಿಬಿಟ್ಟುವು. ಅಲ್ಲದೆ ಪ್ರತಿ ಸಂಸಾರದಲ್ಲಿಯೂ ತಲೆಹಾಕುವ ಕಷ್ಟಗಳೂ ಇಲ್ಲೂ ಒಂದೊಂದಾಗಿ ಕಾಲಿಟ್ಟುವು. ಮೇರಿಯ ಮೃದುವಾದ ಹೃದಯಕ್ಕೆ ಇವೆಲ್ಲ ಜೀವನದ ಅನಾಹುತಗಳೆಂದು ಭಾಸಿಸಿತು ಮೇರಿಗೆ ೧೯೦೨ರಲ್ಲಿ ಇನ್ನೊಂದು ಹೆಣ್ಣುಮಗುವಾಗಿ ಸತ್ತುಹೋಯಿತು. ಈ ಮಗುವಿನ ಹಂಬಲ ಅವಳಿಗೆ ಅದು ಹುಟ್ಟುವುದಕ್ಕೆ ಮುಂಚಿನಿಂದ ಬೆಳೆದು ಬಂದಿತ್ತು. ಮನೆಯಲ್ಲಿ ಇನ್ನೊಂದು ಮಗುವಾಗುವುದೆಂಬ ಭರವಸೆ ಬಲ ವಾಗಿದ್ದಾಗ ಹೀಗಾದದ್ದು ತಾಯಿಯ ಹೃದಯ ತಲ್ಲಣಿಸಿ ಹೋಗುವಂತೆ ಮಾಡಿತು. ಇದಾದ ಮೇಲೆ ಪೋಲೆಂಡಿನಿಂದ ಕೆಟ್ಟಸುದ್ದಿಯೊಂದು ಬಂತು. ಬ್ರೋನ್ಯಳ ಎರಡನೆಯ ಹುಡುಗ ಕೆಲವೇ ದಿನಗಳು ಕಾಯಿಲೆಯಾಗಿದ್ದು ತೀರಿ ಹೋಗಿದ್ದ. ಅಕ್ಕನ ದುಃಖ ತಂಗಿಯ ಹೃದಯವನ್ನು ಚೂರು ಚೂರು ಮಾಡಿತು. ತಾನು ನೋಡಿದಾಗ ಬಲವಾಗಿ ಆರೋಗ್ಯವಾಗಿದ್ದ ಹುಡುಗ ಇದ್ದಕ್ಕಿದ್ದಂತೆ ಹೀಗಾದರೆ ಮಕ್ಕಳನ್ನು ಸಾಕುವುದು ಹೇಗೆ? ಮೇರಿ ಐರೀನ್ ವಿಷಯದಲ್ಲಿ ತಲ್ಲಣಿಸತೊಡಗಿದಳು. ಎಲ್ಲದಕ್ಕಿಂತ ಹೆಚ್ಚಾಗಿ ಪಿಯರಿಯ ಚಿಂತೆ ಕರಿಣಕ್ಕಿಟ್ಟುಕೊಂಡಿತು. ಅವನ ಕಾಲಿನಲ್ಲಿ ಕಾಣಿಸಿ

ಕೊಳ್ಳುತ್ತಿದ್ದ ನೋವು ಬೇಗಬೇಗ ತೀವ್ರವಾಗಿ ಬರಲಾರಂಭಿಸಿತು. ವೈದ್ಯರಿಗೂ ಹರಿಯದ ಕಾಯಿಲೆ ಅದು. ಪಿಯರಿ ನೋವನ್ನು ತಾಳಲಾರದೆ, ರಾತ್ರಿ ಒಂದು ನಿಮಿಷ ಕಣ್ಣುಮುಚ್ಚದೆ ನರಳಿ ಕಳವಳಪಡುವನು. ಮೇರಿ ರಾತ್ರಿಯೆಲ್ಲ ಗಂಡನ ಬಳಿ ಕುಳಿತು, ಈ ಸಂಕಟವನ್ನು ನೋಡಿ ನೋಡಿ ತಲ್ಲಣಿಸುವಳು. ಬೆಳಗಾಯಿತೆಂದರೆ ಇಬ್ಬರೂ ಅವರವರ ಶಾಲೆಗಳನ್ನು ಹುಡುಕಿಕೊಂಡು ಹೋಗಲೇಬೇಕು. ಪ್ರಯೋಗಶಾಲೆಯಲ್ಲಿ ಸಂಶೋಧನೆಯ ಕೆಲಸವಂತೂ ಇಬ್ಬರ ಬಾಳಿಗೆ ಅಂಟಿಬಂದು ಕಿತ್ತರೂ ಕೀಳದ ಕೆಲಸ. ಒಂದುಸಲ, ಒಂದೇ ಒಂದು ಸಲ ಪಿಯರಿ ಇದಕ್ಕಾಗಿ ಪಶ್ಚಾತ್ತಾಪಪಟ್ಟು 'ನಾವು ಆರಿಸಿಕೊಂಡಿರುವ ಈ ಜೀವನ ಕಠಿಣವಾದದ್ದು' ಎಂದು ಹೇಳಿದ. ಆ ಮಾತುಗಳೊಡನೆ, ಮೇರಿಯ ಹೃದಯದಲ್ಲಿ ಕೆಲವು ತಿಂಗಳುಗಳಿಂದ ತಲೆದೋರಿದ್ದ ಭಯ ಅಲ್ಲಿ ಚೆನ್ನಾಗಿ ನಾಟಿತು. ಮೇರಿ ಈ ಭಯದಿಂದ ನಡುಗಿ ಹೋದಳು. ಬಾಳಿನ ದುರದೃಷ್ಟ ಸನ್ನಿವೇಶಗಳು ಹೇಗಿದ್ದ ಮನುಷ್ಯನನ್ನು ಎಂತಹ ಸ್ಥಿತಿಗೆ ತಂದಿಟ್ಟಿವೆ! ಇಂತಹ ಮಾತು ಪಿಯರಿಯ ಬಾಯಿಂದ ಬರಬೇಕಾದರೆ, ಅವನ ಬಲವೆಲ್ಲ ಶೋಷಿಸಿಹೋಗಿರಬೇಕು! ಬಂದಿರುವ ಭಯಂಕರವಾದ ಕಾಯಿಲೆ ಜೀವ ತೆಗೆದುಬಿಡುವುದೋ ಏನೋ! ತನ್ನ ಪಿಯರಿ ತನ್ನನ್ನು ಬಿಟ್ಟು ಹೊರಟೇ ಹೋದರೋ! ಮೇರಿ ತಲ್ಲಣಿಸಿ 'ಪಿಯರಿ' ಎಂದಳು.

ಆ ಗದ್ಗದವಾದ, ಘೋರವಾದ ಸ್ವರವನ್ನು ಕೇಳಿ ಪಿಯರಿ ಬೆಚ್ಚಿ ತಿರುಗಿ ನೋಡಿದ.

'ಏನಾಯಿತು ಮೇರಿ? ಏನಾಯಿತು?'

'ಪಿಯರಿ,....ನಮ್ಮಲ್ಲಿ ಒಬ್ಬರು ಕಣ್ಮರೆಯಾಗಿ ಹೊರಟುಹೋದರೆ ....ಇನ್ನೊಬ್ಬರು ಉಳಿಯಬಾರದು....ನಾವು ಒಬ್ಬರನ್ನು ಇನ್ನೊಬ್ಬರು ಅಗಲಿ ಇರಲಾರೆವು ಅಲ್ಲವೆ?'

ಮೇರಿಗೆ ಆ ಕ್ಷಣದಲ್ಲಿ ತಾನು ಅಗಾಧವಾಗಿ ಪ್ರೀತಿಸುತ್ತಿದ್ದ ತನ್ನ ಪಿಯರಿ ಹೊರತು, ಉಳಿದೆಲ್ಲ ವಸ್ತುಗಳು, ತನ್ನ ವಿಜ್ಞಾನ, ಸಂಶೋಧನೆ ಎಲ್ಲ ಮರೆತುಹೋದುವು. ಪಿಯರಿ, ದುಃಖದಿಂದ ವಿಕೃತವಾಗಿದ್ದ ಹೆಂಡತಿಯ ಮುಖವನ್ನು ಒಂದು ಕ್ಷಣ ನೋಡಿ ಖಂಡಿತವಾಗಿ ಹೇಳಿದ. 'ನೀನು

ಹೇಳುವುದು ತಪ್ಪು. ಏನೇ ಆಗಲಿ, ಆತ್ಮವಿಲ್ಲದೆ ಬರೀ ಶರೀರದಂತೆ ಇರಬೇಕಾದರೂ, ಕೆಲಸ ಮಾಡಲೇಬೇಕು.'

ಇವೆಲ್ಲ ಆಗುವುದಕ್ಕೆ ಮೊದಲೇ, ಮೇರಿಯ ಪಾಲಿಗೆ ಅತ್ಯಂತ ಸಂಕಟಕರವಾದ ಘಟನೆಯೊಂದು ನಡೆದುಹೋಗಿತ್ತು. ಪ್ರೊಫೆಸರ್ ಸ್ಕ್ಲೊಡೊವ್‌ಸ್ಕಿ, ನಾಲ್ಕು ಮಕ್ಕಳಿಗೆ ದೇವತಾಸ್ವರೂಪನಾಗಿದ್ದ ತಂದೆ ೧೯೦೨ ಮೇ ತಿಂಗಳಲ್ಲಿ ತೀರಿಹೋದ. ೧೮೯೯ನೆಯ ಇಸವಿಯಲ್ಲಿ ಮೇರಿಯೂ ಪಿಯರಿಯೂ ರಜದ ದಿನಗಳಲ್ಲಿ ಪೋಲೆಂಡಿಗೆ ಹೋದರು. ಮದುವೆಯಾದ ಮೇಲೆ ಮೇರಿ ಮಾತೃಭೂಮಿಯಲ್ಲಿ ಕಾಲಿಟ್ಟದ್ದು ಇದೇ ಮೊದಲಬಾರಿ. ವಾರ್ಸಾದಲ್ಲಿ ತಂದೆಯನ್ನು ಬೀಳ್ಕೊಂಡು ಪ್ಯಾರಿಸ್ಸಿಗೆ ಹೊರಟ ಎಳೆಯ ಹುಡುಗಿ ಮೇನ್ಯಾ ಸ್ಕ್ಲೊಡೊವ್‌ಸ್ಕಳಲ್ಲಿ ಈಗೆಷ್ಟು ವ್ಯತ್ಯಾಸವಾಗಿದೆ! ಮೇರಿ ಕ್ಯೂರಿ ಈಗ ಗಂಡನನ್ನೂ ಮಗುವನ್ನೂ ಜೊತೆಗೂಡಿ ಬಂದಿದ್ದಾಳೆ. ಉರುಳಿಹೋದ ವರ್ಷಗಳು ಮೇರಿಯ ಮುಖದಲ್ಲಿ ಗೆರೆಗಳನ್ನು ಮೂಡಿಸಿದ್ದರೆ, ಅದು ಆ ಅಪೂರ್ವವಾದ, ಅದ್ಭುತವಾದ ಸಾಧನೆಯ ಫಲ. ಇಬ್ಬರು ವಿಜ್ಞಾನಿಗಳೂ ಜಾಕೋಪೇನ್‌ನಲ್ಲಿ ಬ್ರೊನ್ಯಳ ಮನೆಯನ್ನು ಸೇರಿದರು. ಸ್ಕ್ಲೊಡೊವ್‌ಸ್ಕಿಯೂ, ಹೆಲಾ ಮತ್ತು ಅವಳ ಗಂಡನೂ ಇಲ್ಲಿ ಸೇರಿದರು. ಎರಡು ಜನಾಂಗದವರಲ್ಲಿ, ಮೂರು ತಲೆಮಾರಿನವರಲ್ಲಿ, ನಾಲ್ಕು ಮನೆಯವರಲ್ಲಿ ಇಲ್ಲೊಂದು ಸ್ನೇಹ ವಿಶ್ವಾಸಗಳ ಪ್ರವಾಹ ಹರಿಯಿತು. ಮಧ್ಯೆ ಎಲ್ಲರಿಗೂ ಸೇರಿದವನಾಗಿ, ಎಲ್ಲರ ಪ್ರೀತಿಗೆ ಆಸ್ಪದನಾಗಿ, ಎಲ್ಲ ಹೃದಯಗಳನ್ನೂ ಒಂದಾಗಿ ಬೆಸೆಯುತ್ತಿದ್ದ ಪ್ರೊಫೆಸರ್ ಸ್ಕ್ಲೊಡೊವ್‌ಸ್ಕಿ ಅವನ ಸಂತೋಷ ಎಷ್ಟರ ಮಟ್ಟಿನದೋ ಅದನ್ನು ಯಾರು ಅಳೆಯಬಲ್ಲರು? ಹೊಟ್ಟೆಯ ಪಾಡಿಗೆಂದು, ಶಿಷ್ಯರನ್ನು ಹುಡುಕಿಕೊಂಡು ಅಲೆಯುತ್ತಿದ್ದ ತನ್ನ ನಾಲ್ಕು ಮಕ್ಕಳು, ತಾಯಿಲ್ಲದೆ ಬೆಳೆದ ತನ್ನ ದಿಟ್ಟಮಕ್ಕಳು, ಈಗ ನಾಲ್ಕು ಮನೆಗೆ ಆಧಾರವಾಗಿದ್ದಾರೆ. ತನ್ನ ಮನೆತನವನ್ನು ಬೆಳಸುತ್ತಿರುವ ಜೋಸೆಫ್ ಸುಪ್ರಸಿದ್ಧ ವೈದ್ಯನಾಗಿದ್ದಾನೆ. ಬ್ರೊನ್ಯ ತನ್ನ ಗಂಡನೊಡನೆ ಸ್ಯಾನಿಟೋರಿಯಮ್ ಒಂದನ್ನು ಕಟ್ಟಿದ್ದಾಳೆ. ಹೆಲಾ ತನ್ನ ಗಂಡನೊಡನೆ ಸುಖವಾಗಿ ಇದ್ದಾಳೆ. ಕೊನೆಯದಾಗಿ, ತನ್ನ ಕಿರಿಯ ಮಗು, 'ತನ್ನ ಪುಟ್ಟ ತುಂಟಿ' ಮೇನ್ಯ ಪ್ರಯೋಗಶಾಲೆಯಲ್ಲಿ ಯಶಸ್ವಿಯಾಗಿ ಸಂಶೋಧನೆ ಮಾಡುತ್ತಿ

ದ್ದಾಳೆ. ಸಂಶೋಧನೆ ಮಾಡುವುದೆಂದರೇನೆಂಬುದನ್ನು ಸ್ವತಃ ವಿಜ್ಞಾನಿಯಾಗಿದ್ದ ಸ್ಕ್ಲೊಡೊವ್‌ಸ್ಕಿ ಚೆನ್ನಾಗಿ ಬಲ್ಲವನಾಗಿದ್ದ. ಈ ಹೊತ್ತಿಗೆ ಮೇರಿ ಇನ್ನೂ ರೇಡಿಯಂ ಕಂಡುಹಿಡಿದಿರಲಿಲ್ಲ. ಮುಂದೆ ರೇಡಿಯಂ ವಿಷಯವಾಗಿ ಪ್ರಕಟವಾಗಿದ್ದ ಪುಸ್ತಕವನ್ನು ತನ್ನ ಕಿರಿಯ ಮಗಳ ಹೆಸರನ್ನು ಕೊನೆಯಲ್ಲಿಟ್ಟುಕೊಂಡಿದ್ದ ವಿಷಯಗಳನ್ನು ತಂದೆ ಓದಿ ಚೆನ್ನಾಗಿ ಮನನ ಮಾಡಿದ.

ಇಲ್ಲಿ ಹೊರಜನಾಂಗದವನಾಗಿದ್ದ ಪಿಯರಿ ಎಲ್ಲರ ಆದರಕ್ಕೆ ಪಾತ್ರ. ಉಳಿದವರೆಲ್ಲ ಪೋಲರು, ತಮ್ಮ ಭವ್ಯವಾದ ಪೋಲೆಂಡನ್ನು ಪಿಯರಿಗೆ ಬಿಚ್ಚಿ ಬಿಚ್ಚಿ ತೋರಿಸುವುದರಲ್ಲಿ ಒಬ್ಬರಿಗೊಬ್ಬರು ಸ್ವಲ್ಪವೂ ಸೋಲರು. ಪಿಯರಿ ಈ ಜನಗಳ ಮುಂದೆ ಅಚ್ಚ ಪೋಲಿಷ್ ಭಾಷೆಯಲ್ಲೇ ಮಾತನಾಡುವನು. ಫ್ರೆಂಚ್ ನಾಲಗೆ ಪೋಲಿಷ್ ಭಾಷೆಯನ್ನು ಸರಿಯಾಗಿ ಉಚ್ಚರಿಸುತ್ತಿರಲಿಲ್ಲವೆಂಬುದೇನೋ ನಿಜ. ಆದರೂ, ಮನೆಯಲ್ಲಿ ಪ್ರತಿಯೊಬ್ಬರೂ ಇವನ ತಪ್ಪಿಲ್ಲದ ಮಾತನ್ನು ಕೇಳಿ ಬೆಕ್ಕಸಬೆರಗಾಗುವರು. ಪಿಯರಿ ಮಾತಾಡುತ್ತ ಆಡುತ್ತ, ಹೆಮ್ಮೆಯ ಮುಗುಳುನಗೆಯಿಂದ ಬೆಳಗುವ ಹೆಂಡತಿಯ ಮುಖದ ಕಡೆಗೆ ನೋಡುವನು.

ಮೂರು ವರ್ಷ ಕಳೆಯುವ ಹೊತ್ತಿಗೆ ೧೯೦೨ನೆಯ ಇಸವಿಯ ಮೇ ತಿಂಗಳಲ್ಲಿ ಮೇರಿ ದುಃಖದಿಂದ ತಲ್ಲಣಿಸುತ್ತ ಪುನಃ ಪೋಲೆಂಡ್ ಕಡೆಗೆ ಹೊರಟಳು. ತಂದೆಗೆ ಇದ್ದಕ್ಕಿದ್ದ ಹಾಗೆ ಕಾಯಿಲೆಯಾಗಿ ಶಸ್ತ್ರಚಿಕಿತ್ಸೆ ಆಗಿದೆಯೆಂದು ಒಂದು ಕಾಗದ ಬಂತು. ಸ್ವಲ್ಪ ಗುಣವಾಗಿದೆಯೆಂದು ಇನ್ನೊಂದು ಕಾಗದ, ಹಿಂದೆಯೇ ಕೊನೆಗಾಲ ಪ್ರಾಪ್ತವಾಗಿದೆಯೆಂದು ಒಂದು ಟೆಲಿಗ್ರಾಮ್. ಮೇರಿ ಆತಂಕ ಆತುರಗಳಿಂದ ಊರಿಗೆ ಹೊರಟಳು. ಉದ್ವೇಗ ವೇದನೆಗಳು ಹೊಟ್ಟೆ ಹಿಡಿಸಲಾರದೆ ಮೇರಿ ಎರಡೂವರೆ ದಿನ ಪ್ರಯಾಣ ಮಾಡಿ ಅಣ್ಣನ ಮನೆಗೆ ಬಂದು ತಲುಪಿದಳು. ದಾರಿಯಲ್ಲೇ ತಂದೆ ತೀರಿಹೋದ ಸಮಾಚಾರ ತಿಳಿದು ತಾನು ಬರುವ ತನಕ ಮಣ್ಣು ಮಾಡಕೂಡದೆಂದು ತಂತಿ ಕೊಟ್ಟಿದ್ದಳು. ಮನೆಗೆ ಬಂದು ಮೇರಿ ಕಾಫಿನ್ ಇಟ್ಟಿದ್ದ ಕೋಣೆಗೆ ಹೋದಳು. ತಂದೆಯ ಮುಖವನ್ನು ತಿರುಗಿ ನೋಡುವುದು ಸಾಧ್ಯವಿಲ್ಲವೇ ಎಂದು ಯೋಚಿಸಿದಾಗ ದುಃಖ ಒತ್ತರಿಸಿ ಬಂತು. ತಾಯಿಯನ್ನು ಕಳೆದುಕೊಂಡಾಗಿನಿಂದ ತನ್ನ ಪುಟ್ಟ ಹೃದಯದ ಪ್ರೀತಿಯನ್ನೆಲ್ಲ

ಸೂರೆಗೊಂಡಿದ್ದ ತಂದೆಗೆ, ತಾನು ಪ್ಯಾರಿಸ್‌ಗೆ ಓದಲು ಹೊರಟಾಗ ಹೇಳಿದ್ದ ಮಾತೇನು? ತಂದೆ ಇದ್ದು ಕಣ್ಣು ಮುಚ್ಚಬೇಕಾಗಿದ್ದುದು ತನ್ನ ಬಳಿಯಲ್ಲಿ! ಮೇರಿ ದೊಡ್ಡ ಅಪರಾಧ ಮಾಡಿದುದಾಗಿ ಭಾವಿಸಿದಳು. ತಂದೆ ಎಲ್ಲರಿಗಿಂತ ಹೆಚ್ಚಾಗಿ ತನ್ನಿಂದಲೇ ಹೆಮ್ಮೆಪಟ್ಟನೆಂದು ಸುಖಿಯಾದನೆಂಬ ಭಾವ ಮೇರಿಗೆ ಹೊಳೆಯಲೇ ಇಲ್ಲ. ಮೇರಿ ಕಾಫಿನ್ ಮುಚ್ಚಳ ತೆಗೆಯಲೇಬೇಕೆಂದು ಮಗುವಿನಂತೆ ಹಟ ಹಿಡಿದಳು. ತೆರೆದಿದ್ದ ಕಾಫಿನ್ ಒಳಗೆ ಮಲಗಿದ್ದ, ಜೀವ ಬಿಟ್ಟುಹೋಗಿದ್ದ ತಂದೆಯ ಶರೀರದ ಮುಂದೆ ಕುಳಿತು ಮೇರಿ ತನ್ನ ಅಪರಾಧವನ್ನೆಲ್ಲ ಹೇಳಿಕೊಂಡು ಕ್ಷಮೆ ಬೇಡಿದಳು. ಇಷ್ಟು ದಿನ ಉಳಿದು ಬಂದ ಹೊಂದಿಕೆ ತಂದೆಯ ಹಿಂದೆಯೇ ಹೋಗಿ ಬಿಡಬಾರದೆಂದು ಮೇರಿ ಸೆಪ್ಟೆಂಬರ್ ತಿಂಗಳಲ್ಲಿ ಪುನಃ ಪೋಲೆಂಡಿಗೆ ಹೋಗಿ ನಾಲ್ಕು ಮಕ್ಕಳೂ ಅಲ್ಲಿ ಸೇರಬೇಕಾಯಿತು. ಮೇರಿ ಇನ್ನಷ್ಟು ಕಡ್ಡಿಯಾಗಿ ಇನ್ನಷ್ಟು ಬಿಳಿಚಿಕೊಂಡು ಪ್ಯಾರಿಸ್‌ಗೆ ಹಿಂತಿರುಗಿದಳು. ಯಾವ ವಿಷಯದಲ್ಲೂ ಆಸಕ್ತಿ ಮಾಯವಾಗಿ ಹೋಗಿತ್ತು. ನರಮಂಡಲವೆಲ್ಲ ಜರ್ಝರಿತವಾಗಿತ್ತು. ಮೇರಿ ರಾತ್ರಿ ಎದ್ದು ನಿದ್ರೆಯಲ್ಲೇ ಮನೆಯಲ್ಲೆಲ್ಲ ಓಡಾಡುವಳು.

ಇಂತಹ ಕಷ್ಟಗಳೂ ದುಃಖಗಳೂ ಮೈಯನ್ನೆಲ್ಲ ಮುತ್ತಿದ್ದರೂ ಮೇರಿ ಸಂಶೋಧನೆಯ ಮತ್ತು ಪ್ರಯೋಗಶಾಲೆಯ ಹವ್ಯಾಸವನ್ನು ಮಾತ್ರ ಬಿಡಲಿಲ್ಲ. ವಿಜ್ಞಾನದ ಹುಚ್ಚು ಒಂದು ಸಲ ಹಿಡಿದರೆ ಸಾಕು! ಅದು ತನ್ನ ದಾಸರ ಬೆನ್ನು ಬಗ್ಗಿಸಿ ಕೆಲಸ ಮಾಡಿಸುತ್ತದೆ.

೧೮೯೯ರಿಂದ ಹಿಡಿದು ೧೯೦೪ರ ವರೆಗೆ, ಜೀವವನ್ನು ನಡುಗಿಸುವ ಬಡತನದ ಮಧ್ಯೆ, ಕರುಳನ್ನು ಕೊರೆಯುವ ದುಃಖಗಳ ನಡುವಿನಲ್ಲಿ ಮೇರಿಯೂ, ಪಿಯರಿಯೂ, ಬೇರೆ ಬೇರೆಯಾಗಿ, ಅಥವಾ ಇಬ್ಬರೂ ಸೇರಿ ಸುಮಾರು ಹನ್ನೆರಡು ಚಿಕ್ಕ ಚಿಕ್ಕ ಪುಸ್ತಕಗಳನ್ನು ಪ್ರಕಟಿಸಿದರು. ರೇಡಿಯಂ ವಿಷಯವಾಗಿದ್ದ ವಿವಿಧ ಭಾಗಗಳ ಮೇಲೆ ಪ್ರಕಟವಾಗಿರುವ ಆ ಪ್ರೌಢ ಲೇಖನಗಳು ದೊಡ್ಡ ದೊಡ್ಡ ವಿಜ್ಞಾನಿಗಳಿಗೆ ಹೊರತು ಇತರರಿಗೆ ಅರ್ಥವಾಗುವುದೇ ಇಲ್ಲ. ೧೯೦೦ರಿಂದ ಮುಂದಕ್ಕೆ ಈ ಇಬ್ಬರು ವಿಜ್ಞಾನಿಗಳಿಗೆ, ದೇಶದೇಶದ ವಿಜ್ಞಾನಿಗಳಿಂದ ಕಾಗದಗಳು ಬರತೊಡಗಿದುವು. ಇಂಗ್ಲೆಂಡ್, ಆಸ್ಟ್ರಿಯಾ, ಜರ್ಮನಿ, ಡೆನ್‌ಮಾರ್ಕ್‌ಗಳಿಂದ ರೇಡಿಯಂ ವಿಷಯವಾಗಿ

ಪ್ರಶ್ನೆಗಳ ಸುರಿಮಳೆಯೇ ಬರುತ್ತಿತ್ತು. ಅನೇಕ ವಿಜ್ಞಾನಿಗಳು ರೇಡಿಯೋ ಚಟುವಟಿಕೆಯುಳ್ಳ ಇತರ ವಸ್ತುಗಳಿವೆಯೇ ಎಂದು ನೋಡಲು ಸಂಶೋಧನೆಗಳಲ್ಲಿ ತೊಡಗಿದರು ಇದರ ಪರಿಣಾಮವಾಗಿ, ರೇಡಿಯಂ ಗುಂಪಿಗೆ ಸೇರಿದ ಅನೇಕ ಧಾತುಗಳು, ಮೀಸೋಥೋರಿಯಂ, ರೇಡಿಯೋ ಥೋರಿಯಂ, ಐಯೋನಿಯಂ ಪ್ರೊಟಾಕ್ಟಿನಿಯಂ, ರೇಡಿಯೋ ಲೆಡ್ ಮುಂತಾದುವೆಲ್ಲ ಬೆಳಕಿಗೆ ಬಂದುವು. ೧೯೦೩ರಲ್ಲಿ ಇಂಗ್ಲೆಂಡಿನ ಇಬ್ಬರು ವಿಜ್ಞಾನಿಗಳು, ರೇಡಿಯಂ ಸರ್ವದಾ ಸ್ವಲ್ಪ ಪರಿಮಾಣದಷ್ಟು ಹೀಲಿಯಂ ಅನಿಲವನ್ನು ಉತ್ಪತ್ತಿ ಮಾಡುತ್ತಲೇ ಇರುತ್ತದೆಂದು ಕಂಡುಹಿಡಿದರು. ಇಂಗ್ಲೆಂಡ್ ದೇಶದ ಇನ್ನೊಬ್ಬ ವಿಜ್ಞಾನಿ ರೇಡಿಯೋ ಚಟುವಟಿಕೆಯುಳ್ಳ ಧಾತುಗಳೆಲ್ಲ ನಿಧಾನವಾಗಿ ತಾವೇ ಒಡಲಾವಣೆ ಹೊಂದುತ್ತವೆಂದು ೧೯೦೦ನೆಯ ಇಸವಿಯಲ್ಲಿಯೇ ಕಂಡುಹಿಡಿದನು.

ಮೇರಿ ಕ್ಯೂರಿ ಡಾಕ್ಟರ್ ಡಿಗ್ರಿ ಪಡೆಯುವುದಕ್ಕೋಸ್ಕರ ಆರಿಸಿಕೊಂಡ ವಿಷಯ ಇಷ್ಟೊಂದು ಅಗಾಧವಾಗಿ ಪರಿಣಮಿಸಿತ್ತು. ಐದು ವರ್ಷಗಳಾಗುವ ತನಕ ಮೇರಿಗೇನೋ ಡಾಕ್ಟರ್ ಡಿಗ್ರಿಗೋಸ್ಕರ ನಿಲ್ಲುವ ವಿರಾಮವೇ ಇರಲಿಲ್ಲ. ೧೯೦೩ನೆಯ ಇಸವಿ ಜೂನ್ ೨೫ನೆಯ ದಿನ ಮೇಡಮ್ ಕ್ಯೂರಿ ಪರೀಕ್ಷಕರ ಎದುರಿಗೆ ನಿಂತು ಡಾಕ್ಟರ್ ಡಿಗ್ರಿಯನ್ನು ಪಡೆದಳು. ಡಾಕ್ಟರ್ ಡಿಗ್ರಿಯನ್ನು ಪಡೆಯಲು ಮೇರಿ 'ರೇಡಿಯೋ ಚಟುವಟಿಕೆಯುಳ್ಳ ವಸ್ತುಗಳ ಮೇಲಿನ ಸಂಶೋಧನೆ' ಎಂಬ ವಿಷಯವಾಗಿ ಭಾಷಣ ಮಾಡಬೇಕಾಗಿತ್ತು. ಇದರ ಸಂಬಂಧವಾಗಿ ಮೇರಿಯ ಜೀವನದಲ್ಲಿ ಒಂದು ಅಪರೂಪವಾದ ವಿಷಯ ನಡೆಯಿತು. ಮೇರಿ ಕಪ್ಪಾದ ಉಣ್ಣೆಯ ಹೊಸ ಉಡುಪೊಂದನ್ನು ಕೊಂಡುಕೊಂಡಳು. ಅದು ನಡೆದುದು ಮಾತ್ರ ಹೀಗೆ. ಮೇರಿಯ ಭಾಷಣವನ್ನು ಕೇಳುವುದಕ್ಕೋಸ್ಕರವೇ ಪ್ಯಾರಿಸ್‌ಗೆ ಬಂದಿದ್ದ ಬ್ರೊನ್ಯ ತಂಗಿಯ ಜೀರ್ಣವಾದ ಹಳೆಯ ಬಟ್ಟೆಗಳನ್ನು ನೋಡಿ ನಾಚಿಕೆಗೇಡೆಂದು ಬೈದು ಅವಳನ್ನು ಬಲವಂತವಾಗಿ ಅಂಗಡಿಗೆ ಎಳೆದುಕೊಂಡು ಹೋದಳು. ಅಲ್ಲಿ ಎಲ್ಲೋ ನೋಡುತ್ತ ಮುನಿದು ಕುಳಿತಿದ್ದ ತಂಗಿಯನ್ನು ಗಮನಿಸದೆ ಬ್ರೊನ್ಯ ಬಟ್ಟೆಯನ್ನು ಚುನಾಯಿಸಿ, ಅಂಗಡಿಯವಳ ಹತ್ತಿರ ಮಾತಾಡಿ ಹೊಸ ಉಡುಪೊಂದನ್ನು ಹೊಲಿಯುವುದಕ್ಕೆ

ಹಾಕಿದಳು. ಇಪ್ಪತ್ತು ವರ್ಷಗಳ ಹಿಂದೆ ೧೮೮೩ನೇ ಇಸವಿಯ ಜೂನ್ ತಿಂಗಳಲ್ಲಿ ಹಿಂದೊಂದು ಬಾರಿ ಶಾಲೆಯನ್ನು ಬಿಡುವಾಗ ಚಿನ್ನದ ಪದಕವನ್ನು ಪಡೆಯಲು ಹೋಗುತ್ತಿದ್ದ ತನ್ನ 'ಪುಟ್ಟ ಮೇನ್ಯಾಳಿಗೆ' ಅಕ್ಕ ಹೀಗೆಯೇ ಕರಿಯ ಉಡುಪನ್ನು ಉಡಿಸಿ ಕಳುಹಿಸಿದ್ದಳು.

---

## ಅಧ್ಯಾಯ ಹದಿನಾಲ್ಕು

# ರೇಡಿಯಂ



ನಾಲ್ಕು ವರ್ಷದ ಅವಿಶ್ರಾಂತವಾದ ದುಡಿತದಿಂದ ಬೆಳಕು ಕಂಡ ರೇಡಿಯಂ ವಿಜ್ಞಾನಪ್ರಪಂಚದಲ್ಲಿ ಕ್ರಾಂತಿಯನ್ನುಂಟುಮಾಡಿತು. ಭೌತ ಶಾಸ್ತ್ರದ ಎಷ್ಟೋ ಸಿದ್ಧಾಂತಗಳು ಕಳಚಿಬಿದ್ದುವು. ಒಂದು ಧಾತುವಿನ ಅಣುಗಳು ಬೇರೆ ಧಾತುವಿನ ಅಣುಗಳಾಗಿ ರೂಪಾಂತರ ಹೊಂದುವುದು, ಒಂದು ಧಾತು ಸಿಧಾನವಾಗಿ ಒಡಲಾವಣೆ ಹೊಂದಿ ಬೇರೆ ಧಾತುವಾಗುವುದು, ಅಸಾಧ್ಯ ಎಂಬ ಸಿದ್ಧಾಂತ ಏನಾಯಿತು? ರೇಡಿಯಂ ಧಾತು ಬೇರೆ ಧಾತುವಾದ ಹೀಲಿಯಂ ಕಣಗಳನ್ನು ತನ್ನ ಮೈಯಿಂದ ಗಾಳಿಗೆ ಎರಚುತ್ತಿತ್ತು. ಜೊತೆಗೆ ತಾನೇ ರೂಪಾಂತರ ಹೊಂದುತ್ತಿತ್ತು. ಕಿರಣಗಳನ್ನು ಎರಚುತ್ತಿದ್ದ ರೇಡಿಯಂ ಶಾಖವನ್ನೂ ಬೀರುತ್ತಿತ್ತು. ಜಡವಸ್ತುವೆಂದು ಎಣಿಸಲ್ಪಡುವ ವಸ್ತುವೊಂದು ಇಷ್ಟೊಂದು ವಿಧವಾದ ಶಕ್ತಿಯನ್ನು ಹೊಂದಿದ್ದುದು ಶತಮಾನಗಳಿಂದ ಬೆಳೆದುಬಂದ ವಿಜ್ಞಾನದಲ್ಲಿ ಇಲ್ಲಿಯ ತನಕ ತಿಳಿದಿರಲಿಲ್ಲ. ರೇಡಿಯಂ ಇಟ್ಟಿದ್ದ ಗಾಜಿನ ಕೊಳವೆ ಊದಾಬಣ್ಣಕ್ಕೆ ತಿರುಗಿತು. ಹತ್ತಿಯಲ್ಲಾಗಲಿ, ಕಾಗದದಲ್ಲಾಗಲಿ ರೇಡಿಯಂ ಸುತ್ತಿಟ್ಟರೆ, ರೇಡಿಯಂ ಅದನ್ನು ಸಿಧಾನವಾಗಿ ಸುಟ್ಟು ಪುಡಿಪುಡಿ ಮಾಡುತ್ತಿತ್ತು. ರೇಡಿಯಂ ಕಿರಣಗಳು ಕರಿಯ ಕಾಗದವನ್ನು ಭೇದಿಸಿಕೊಂಡು ಹೋದುವು. ಸೀಸದ ದಪ್ಪ ತಗಡು ಮಾತ್ರ ಅದನ್ನು ತಡೆಯಬಲ್ಲುದು.

ಶುದ್ಧವಾದ ರೇಡಿಯಂ ಕ್ಲೋರೈಡ್ ಮನೆಯಲ್ಲುಪಯೋಗಿಸುವ ಉಪ್ಪಿನಂತೆ ಬಿಳಿಯ ಪುಡಿ. ಅದರ ಪ್ರಕಾಶ ಸೂರ್ಯನ ಬೆಳಕಿನಲ್ಲಿ ಕಾಣುವುದಿಲ್ಲ. ಅರ್ಧ ಕತ್ತಲೆ ಮಾಡಿದರೆ ರೇಡಿಯಂ ಕಿರಣಗಳು ಕಾಣಿಸಿಕೊಳ್ಳುತ್ತವೆ. ಪೂರ್ತಿ ಕತ್ತಲೆಯಲ್ಲಿ ಆ ಕಿರಣಗಳ ಬೆಳಕಿನಿಂದ ಅಕ್ಷರಗಳನ್ನು ಓದಬಹುದು. ರೇಡಿಯಂ ಧಾತುವಿನ ಅದ್ಭುತಶಕ್ತಿ ಇಷ್ಟಕ್ಕೆ ಮುಗಿಯುವುದಿಲ್ಲ. ಅದು ಸಾಧಾರಣ ವಸ್ತುಗಳನ್ನು ಹೊಳೆಯುವಂತೆ ಮಾಡಬಲ್ಲುದು. ಅದರ ಕಿರಣಗಳನ್ನು ಬೀರುವ ಶಕ್ತಿಯಂತೂ ಅಂಟುರೋಗದಂತೆ ಹರಡುತ್ತದೆ. ಅದರ ಬಳಿಯಿರುವ ಪ್ರತಿಯೊಂದು ವಸ್ತುವೂ, ಮರ, ಮನುಷ್ಯ, ಪ್ರಾಣಿ ಜಡ ವಸ್ತುಗಳೂ, ಅತ್ಯಲ್ಪ ಪ್ರಮಾಣದಲ್ಲಾದರೂ ರೇಡಿಯೊ ಚಟುವಟಿಕೆಯನ್ನು ಹೊಂದುತ್ತವೆ. ಮೇರಿಯ ಪ್ರಯೋಗಶಾಲೆಯಲ್ಲಿದ್ದ ಸಾಧನಗಳು, ಕುರ್ಚಿ, ಮೇಜು, ಮೇರಿ ಮತ್ತು ಪಿಯರಿಯ ಬಟ್ಟೆಗಳು, ಕೊನೆಗೆ ಪ್ರಯೋಗಶಾಲೆಯ ಧೂಳು ಕೂಡ ಈ ಶಕ್ತಿಯನ್ನು ಸಂಪಾದಿಸಿದುವು. ಸೂಕ್ಷ್ಮವಾದ ಅಳತೆಗಳನ್ನು ಮಾಡುವಾಗ ಮೇರಿಗೆ ಇವೆಲ್ಲ ತೊಡಕುಗಳಾಗಿದ್ದುವು. ಈ ಇಬ್ಬರು ವಿಜ್ಞಾನಿಗಳು ಸತ್ತ ಎಷ್ಟೋ ವರ್ಷದ ಮೇಲೆ, ಪರೀಕ್ಷಿಸಿದಾಗ, ಅವರು ಪ್ರಯೋಗಶಾಲೆಯಲ್ಲಿ ಉಪಯೋಗಿಸುತ್ತಿದ್ದ ಬರೆವಣಿಗೆಯ ಪುಸ್ತಕ ಈಗಲೂ ರೇಡಿಯೋ ಚಟುವಟಿಕೆಯನ್ನು ತೋರಿಸಿತು.

ರೇಡಿಯಂ ಮನುಷ್ಯಚರ್ಮದ ಮೇಲೆ ಬೇರೆ ಪ್ರಭಾವವನ್ನುಂಟು ಮಾಡಿತು. ಅದನ್ನು ಮೊದಲು ಸೂಚಿಸಿದವರು ಇಬ್ಬರು ಜರ್ಮನ್ ವೈಜ್ಞಾನಿಕರು. ಪಿಯರಿ ಒಡನೆಯೇ ಕುತೂಹಲಭರಿತನಾಗಿ ರೇಡಿಯಂ ಕಿರಣಗಳಿಗೆ ತನ್ನ ತೋಳನ್ನೇ ಒಡ್ಡಿದ. ಸುಮಾರು ಆರು ಚದರ ಸೆಂಟಿಮೀಟರ್‌ಗಳಷ್ಟು ಭಾಗ ಚರ್ಮ ಕೆಂಪಾಗಿ ಸುಟ್ಟಹಾಗಾಯಿತು. ಆದರೆ ನೋವೇನೂ ಕಾಣಿಸಿಕೊಳ್ಳಲಿಲ್ಲ. ಕೆಲವು ದಿನಗಳ ಹೊತ್ತಿಗೆ ಮೂಡಿದ್ದ ಕೆಂಪು ಗಾಢವಾಗಿ ಇಪ್ಪತ್ತನೇ ದಿನ ಚರ್ಮ ಸುಲಿದು ಗಾಯವಾಯಿತು. ಪಿಯರಿ ಗಾಯಕ್ಕೆ ಬಟ್ಟೆಕಟ್ಟಿದನು. ನಲವತ್ತೆರಡನೇ ದಿನ ಹೊಸ ಚರ್ಮ, ಆರೋಗ್ಯಕರವಾದ ಚರ್ಮ, ಗಾಯದ ಅಂಚುಗಳಿಂದ ಮಧ್ಯಭಾಗಕ್ಕೆ ಬೆಳೆದುಬಂತು. ಕೆಲವು ದಿನಗಳ ಹೊತ್ತಿಗೆ ಆಳವಾಗಿ ಗಾಯವಾಗಿದ್ದ ಮಧ್ಯಭಾಗದಲ್ಲಿ ಇನ್ನೂ ಹೊಸ ಚರ್ಮ ಹುಟ್ಟಿರಲಿಲ್ಲ.

ಎಷ್ಟೋ ಸಲ ರೇಡಿಯಂ ವಿಷಯವಾಗಿ ಪ್ರಯೋಗವನ್ನು ಮಾಡುತ್ತಿದ್ದವರಿಗೆ ಬೆಟ್ಟಿನ ತುದಿಗಳು ಗಟ್ಟಿಯಾಗಿ ಒಂದೊಂದು ಸಲ ತುಂಬ ನೋವನ್ನುಂಟುಮಾಡುತ್ತಿತ್ತು. ಒಂದು ಸಲ ಹದಿನೈದು ದಿನವಾದ ಮೇಲೆ ಚರ್ಮ ಸುಲಿದರೂ ನೋವು ಮಾತ್ರ ಎರಡು ತಿಂಗಳಾದರೂ ಗುಣವಾಗಲಿಲ್ಲ. ಇನ್ನೊಂದು ಸಲ ಹೆನ್ರಿ ಬೆಕ್ವೆರಲ್ ರೇಡಿಯಂ ಇದ್ದ ಗಾಜಿನ ಕೊಳವೆಯನ್ನು ಜೇಬಿನಲ್ಲಿಟ್ಟುಕೊಂಡಿದ್ದಾಗ, ರೇಡಿಯಂ ಅವನ ಮೈಯನ್ನು ಸುಟ್ಟುಬಿಟ್ಟಿತ್ತು. ಬೆಕ್ವೆರಲ್ ಆಶ್ಚರ್ಯಗೊಂಡು ಕ್ಯೂರಿದಂಪತಿಗಳ ಬಳಿಗೆ ಹೋಗಿ ದೂರು ಹೇಳಿಕೊಂಡ. 'ನಾನು ಈ ರೇಡಿಯಂ ಪ್ರೀತಿಸುತ್ತೇನೆ ಆದರೂ ನನಗೆ ಅದರ ಮೇಲೆ ಕೋಪಬಂದಿದೆ.' ರೇಡಿಯಂ ಧಾತುವಿನ ನಡತೆಗೆ, ಈ ಕ್ಯೂರಿ ದಂಪತಿಗಳಲ್ಲದೆ ಮತ್ತೆ ಯಾರು ಹೊಣೆ?

ಪಿಯರಿ, ಪ್ರಾಣಿಗಳ ಶರೀರದ ಮೇಲೆಲ್ಲ ಪ್ರಯೋಗಗಳನ್ನು ನಡೆಸಿ ಕೊನೆಗೆ ಈ ನಿರ್ಧಾರಕ್ಕೆ ಬಂದ. ರೇಡಿಯಂ ಅನಾರೋಗ್ಯಕರವಾದ, ಕ್ಯಾನ್ಸರ್ ತಗಲಿರುವ ಭಾಗವನ್ನು ಸುಟ್ಟು ಹೊಸದಾದ, ಆರೋಗ್ಯಕರವಾದ ಭಾಗಗಳು ಹುಟ್ಟುವಂತೆ ಮಾಡುತ್ತದೆ. ಕೆಲವು ಫ್ರೆಂಚ್ ವೈದ್ಯರು ಕ್ಯಾನ್ಸರ್ ಕಾಯಿಲೆಯ ರೋಗಿಗಳನ್ನು ರೇಡಿಯಮ್ಮಿನಿಂದ ಗುಣಪಡಿಸಿದರು. ಈ ವಿಧವಾದ ಚಿಕಿತ್ಸೆಗೆ 'ಕ್ಯೂರಿ ಥೆರಾಪಿ' ಎಂದು ಹೆಸರಾಯಿತು.

ಯಾವ ಚಿಕಿತ್ಸೆಗೂ ಜಗ್ಗದ ಕ್ಯಾನ್ಸರ್, ರೇಡಿಯಂ ಇಂದ ಗುಣವಾಗುತ್ತದೆಂದು ತಿಳಿದ ಕೂಡಲೆ, ಅದರ ಪ್ರಾಧಾನ್ಯ ಇನ್ನೂ ಹೆಚ್ಚಾಯಿತು. ರೇಡಿಯಂ ಹೆಚ್ಚು ಹೆಚ್ಚು ಪ್ರಮಾಣದಲ್ಲಿ ಬೇಕಾಯಿತು. ಅದನ್ನು ತೆಗೆಯುವ ಉದ್ಯೋಗವೇ ಹುಟ್ಟಿಕೊಂಡಿತು. ಪ್ರತಿಸಮಯದಲ್ಲೂ ಮೇರಿ ಮತ್ತು ಪಿಯರಿ ಕ್ಯೂರಿಯ ಸಹಾಯ ಬೇಕಾಗಿಯೇ ಇತ್ತು. ೧೯೦೪ರಲ್ಲಿ ರೇಡಿಯಂ ತೆಗೆದು ವೈದ್ಯರಿಗೆ ಒದಗಿಸುವುದಕ್ಕೋಸ್ಕರ ಒಂದು ಯಂತ್ರಾಲಯ ಸ್ಥಾಪಿತವಾಯಿತು. ಅದಕ್ಕೆ ಸೇರಿದಂತೆ ಇದ್ದ ಒಂದು ಪ್ರಯೋಗಶಾಲೆಯಲ್ಲಿ ಮೇರಿ ಮತ್ತು ಪಿಯರಿ ಕೆಲಸ ಮಾಡಿದರು. ರೇಡಿಯಂ ಬೆಲೆ, ಒಂದು ಗ್ರಾಮ್ ತೂಕದಷ್ಟು ಪರಿಮಾಣಕ್ಕೆ ೭,೫೦,೦೦೦ ಫ್ರಾಂಕುಗಳು ಎಂದು ಗೊತ್ತಾಯಿತು. ಅಮೇರಿಕಾದವರು ರೇಡಿಯಂ ತೆಗೆಯುವ ಉದ್ಯಮವನ್ನು ಕೈಕೊಳ್ಳಲು ಪ್ರಯತ್ನಪಟ್ಟರು. ಶುದ್ಧವಾದ ರೇಡಿಯಂ

ಬೇರ್ಪಡಿಸಬೇಕಾದರೆ ತಿಳಿಯಬೇಕಾದ ಸೂಕ್ಷ್ಮವಿಷಯಗಳೆಲ್ಲವನ್ನೂ ತಮಗೆ ಹೇಳಿಕೊಡಬೇಕೆಂದು ಪಿಯರಿಗೆ ಅಲ್ಲಿಂದ ಕಾಗದ ಬಂತು. ಮೇರಿ ಮತ್ತು ಪಿಯರಿ ರೇಡಿಯಂ ಕಂಡು ಹಿಡಿದವರು, ಅದರ ಮೇಲಿನ ಅಧಿಕಾರವನ್ನೆಲ್ಲ ವಹಿಸಿಕೊಳ್ಳಬಹುದಾಗಿತ್ತು. ಇವರಿಬ್ಬರನ್ನು ಐಶ್ವರ್ಯದಲ್ಲಿ ಮುಳುಗಿಸ ಬಲ್ಲ ಸಮಯ ತಾನಾಗಿ ಒದಗಿ ಬಂದಿತ್ತು. ಅದನ್ನು ಬೇಡವೆಂದು ದೂಡಿ ದರೆ ಆ ತಪ್ಪು ಅವರಿಬ್ಬರದೇ ! ಪಿಯರಿ ಈ ವಿಷಯವಾಗಿ ಮೇರಿಯನ್ನು ಸಲಹೆ ಕೇಳಿದ. ಅವನ ಮನಸ್ಸು ಹಣ ಒದಗಿದರೆ ಒಂದು ಒಳ್ಳೆಯ ಪ್ರಯೋಗಶಾಲೆಯನ್ನು ಕಟ್ಟಿಸಿಯೇನು ಎನ್ನುತ್ತಿತ್ತು. ಮೇರಿ ಒಂದೆರಡು ನಿಮಿಷ ಯೋಚಿಸಿ, ಹೀಗೆ ಹಣ ಒದಗಿತೆಂದು, ಮಾಡಿದ ಸಂಶೋಧನೆ ಯನ್ನು ಪ್ರಕಟಿಸದೆ ಬಿಡುವುದು ವೈಜ್ಞಾನಿಕರಿಗೆ ಒಪ್ಪುವ ರೀತಿಯಲ್ಲ ಎಂದಳು. ಊಯ್ಯಾಲೆಯಾಡುತ್ತಿದ್ದ ಪಿಯರಿಯ ಮನಸ್ಸು ಸುಲಭವಾಗಿ ಸ್ಥಿಮಿತಕ್ಕೆ ನಿಂತಿತು. ಪಿಯರಿ ತಮ್ಮ ಸಂಶೋಧನೆಯ ಪ್ರತಿಯೊಂದು ಸೂಕ್ಷ್ಮವಿಷಯವನ್ನೂ ವಿಶದವಾಗಿ ಬರೆದು ಅಮೇರಿಕಾಕ್ಕೆ ಕಳುಹಿಸಿ ಕೊಟ್ಟ. ವೈಜ್ಞಾನಿಕರಿಬ್ಬರೂ ಅಪಾರವಾದ ಧನದ ರಾಶಿಯನ್ನು ಕಡೆ ಗಂಡು, ವಿಜ್ಞಾನದ ಗೌರವ ಉಳಿಸಿದರು.

ಇದಾದ ಕಾಲುಗಂಟೆಯೊಳಗೆ ಮೇರಿಯೂ ಪಿಯರಿಯೂ ತಮ್ಮ ತಮ್ಮ ಬೈಸಿಕಲ್‌ಗಳನ್ನು ಹತ್ತಿ, ಹತ್ತಿರದಲ್ಲಿದ್ದ ವನಪ್ರಾಂತಕ್ಕೆ ಹೊರಟರು. ಕಾಲಿಗೆ ತೊಡಕಿದ ನಿಧಿಯನ್ನು ಒಲ್ಲದೆ ಹೋದ ಈ ವಿಲಕ್ಷಣ ವ್ಯಕ್ತಿಗಳಿ ಬ್ಬರೂ ಕೈತುಂಬ ಕಾಡು ಹೂವು ಎಲೆಗಳನ್ನು ತುಂಬಿಕೊಂಡು ಸಾಯಂ ಕಾಲಕ್ಕೆ ಮನೆಗೆ ಹಿಂತಿರುಗಿದರು.

—

## ಅಧ್ಯಾಯ ಹದಿನೈದು

# ಕೀರ್ತಿ



ಇಲ್ಲಿಂದ ಮುಂದೆ ಈ ಇಬ್ಬರೂ ವಿಜ್ಞಾನಿಗಳ ಬಾಳಿನಲ್ಲಿ ಮುಗಿಲು ಮುಟ್ಟುವ ಕೀರ್ತಿ ಕಾಲಿಟ್ಟಿತು. ಪ್ರಭಾಮಯವಾದ, ಶಕ್ತಿಯುಕ್ತವಾದ ರೇಡಿಯಂ. ಈ ಎರಡು ವ್ಯಕ್ತಿಗಳನ್ನೂ, ಅವರು ಬೇಡಬೇಡವೆಂದು ಅಡಗಿಕೊಂಡರೂ ಜನರ ದೃಷ್ಟಿಗೆ ಎಳೆದು ತಂದಿತು. ಈ ಅಪಾರ ಕೀರ್ತಿ ಮೇರಿಯನ್ನೂ ಪಿಯರಿಯನ್ನೂ ಹುದುಗಿಕೊಳ್ಳುವಂತೆ ಮಾಡಿತು, ಅವರ ಹೃದಯದಲ್ಲಿ ನೋವನ್ನುಂಟುಮಾಡಿತು. ಎಂದರೆ, ಅದು ಸುಳ್ಳು, ಅಸ್ವಾಭಾವಿಕ ಎಂಬ ಭಾವನೆ ಎಲ್ಲರಲ್ಲಿಯೂ ಹುಟ್ಟಿತು. ಆದರೆ ನಡೆದುದು, ಮಾತ್ರ ಹೀಗೆಯೇ. ಕೀರ್ತಿ ಬಂದು ತೊಡಕಿಕೊಂಡುದು, ವಿಜ್ಞಾನದ ಮೇಲಿನ ಮೋಹದಿಂದ, ಹುಚ್ಚಿನಿಂದ ಕೆಲಸ ಮಾಡುತ್ತಿದ್ದ ಇಬ್ಬರಿಗೂ ನೋವನ್ನುಂಟುಮಾಡಿತು. ಇಬ್ಬರೂ ಪ್ರತಿಭಾವಂತರು. ವಿಜ್ಞಾನದಲ್ಲಿ ಅಗಾಧವಾದ ಪ್ರೀತಿಯನ್ನು ಇಟ್ಟಿದ್ದವರು. ಇಬ್ಬರಲ್ಲಿಯೂ ಆಡಂಬರವಾಗಲಿ ತೋರಿಕೆಯ ಹೆಮ್ಮೆಯಾಗಲಿ ಇರಲಿಲ್ಲ. ಒಂದು ಹೃದಯದ, ಪ್ರತಿಬಿಂಬ ಇನ್ನೊಂದೊ ಎಂದು ತೋರುತ್ತಿದ್ದ ಈ ಜೀವನಗಳಲ್ಲಿ ಕೀರ್ತಿ ಬೇಡವೆಂದು ಅಲ್ಲಗಳೆಯುವ ಈ ಗುಣವೂ ಸರಿಸಮನಾಗಿದೆ ಎಂದು ಕಂಡುದು ಈಗಲೇ!

ಫ್ರಾನ್ಸ್‌ನಲ್ಲಿ ಮೇರಿಯೂ, ಪಿಯರಿಯೂ ವಿಜ್ಞಾನದ ಕೆಲವು ಸಣ್ಣ ಸಣ್ಣ ಬಹುಮಾನಗಳನ್ನು ಪಡೆದಿದ್ದರು. ಆದರೆ ದೊಡ್ಡ ವಿಜ್ಞಾನಿಗಳೆಂದು, ಕ್ಯೂರಿ ದಂಪತಿಗಳನ್ನು ಮೊದಲು ಗೌರವಿಸಿದ ದೇಶ ಇಂಗ್ಲೆಂಡ್. ೧೯೦೩ನೆಯ ಜೂನ್‌ನಲ್ಲಿ ರೇಡಿಯಂ ಮೇಲೆ ಭಾಷಣಗಳನ್ನು ಕೊಡಬೇಕೆಂದು ಇಂಗ್ಲೆಂಡಿನ ರಾಯಲ್ ಇನ್‌ಸ್ಟಿಟ್ಯೂಷನ್‌ರವರಿಂದ ಕರೆ ಬಂತು. ಪಿಯರಿ ಒಪ್ಪಿ ಮೇರಿಯನ್ನೂ ಕರೆದುಕೊಂಡು ಹೊರಟ. ಹಳೆಯ ಸ್ನೇಹಿತ,—

ಪಿಯರಿಯ ಯೋಗ್ಯತೆಯನ್ನು ಮೊದಲೇ ಅರಿತಿದ್ದ—ಲಾರ್ಡ್ ಕೆಲ್ವಿನ್ ಇವರಿಗೋಸ್ಕರ ಕಾದಿದ್ದ. ಪಿಯರಿ ಸ್ನೇಹಿತನಿಗೋಸ್ಕರ ಅಮೂಲ್ಯವಾದ ರೇಡಿಯಂ ಕಣವೊಂದನ್ನು ತೆಗೆದುಕೊಂಡೇ ಹೊರಟಿದ್ದ.

ಭಾಷಣವನ್ನು ಕೇಳುವುದಕ್ಕೆ ಸಂಜೆ, ಇಂಗ್ಲೆಂಡಿನ ವಿಜ್ಞಾನಿಗಳು ಸಮಸ್ತರೂ ಸೇರಿದ್ದರು ಆ ದಿನ, ರಾಯಲ್ ಇನ್‌ಸ್ಟಿಟ್ಯೂಷನ್ನಿನ ಚರಿತ್ರೆಯಲ್ಲಿ ಅಪೂರ್ವವಾದ ವಿಷಯವೊಂದು ನಡೆದಿತ್ತು. ಈ ಗಂಡುಜೋಡಿನಲ್ಲಿ ಹೆಣ್ಣೊಂದು ಲಾರ್ಡ್‌ಕೆಲ್ವಿನ್ ಪಕ್ಕದಲ್ಲಿ ಕಾಣಿಸುತ್ತಿತ್ತು. ವಿಜ್ಞಾನಿಗಳಿಗೆ ಮಾತ್ರ ಪ್ರವೇಶ ಸಿಕ್ಕುತ್ತಿದ್ದ ರಾಯಲ್ ಇನ್‌ಸ್ಟಿಟ್ಯೂಷನ್‌ನಲ್ಲಿ ತಾನೂ ವಿಜ್ಞಾನಿಯೆಂಬ ಕೆಚ್ಚನ್ನಿಟ್ಟುಕೊಂಡು ಸ್ಥಾನಪಡೆದ ಹೆಂಗುಸು ಮೇರಿಯನ್ನು ಬಿಟ್ಟರೆ ಇಲ್ಲಿಯತನಕ ಮತ್ತೆ ಯಾರೂ ಇರಲಿಲ್ಲ.

ಪಿಯರಿ ಫ್ರೆಂಚ್ ಭಾಷೆಯಲ್ಲಿ ರೇಡಿಯಂ ವಿಷಯವಾಗಿ ಭಾಷಣ ಮಾಡಿದ. ಅದರ ಗುಣವಿಶೇಷಗಳನ್ನೆಲ್ಲ ವರ್ಣಿಸಿದ. ಕತ್ತಲೆಮಾಡಿ, ಅದರ ಅಪೂರ್ವವಾದ ಶಕ್ತಿಯನ್ನೆಲ್ಲ ಪ್ರಯೋಗಗಳನ್ನು ಮಾಡಿತೋರಿಸಿದ. ನೋಡುತ್ತ ಕುಳಿತಿದ್ದ ವಿಜ್ಞಾನಿಗಳ ಎದೆಯಲ್ಲಿ ಉತ್ಸಾಹ ಸಂತೋಷಗಳು ಕೊಚ್ಚಿ ಹರಿದುವು. ಇಂಗ್ಲೆಂಡಿಗೆ ಇಂಗ್ಲೆಂಡೇ ಈ ಉತ್ಸಾಹದಲ್ಲಿ ಭಾಗ ವಹಿಸಿತು. ರೇಡಿಯಂ ಕಂಡುಹಿಡಿದ ಈ ವ್ಯಕ್ತಿಗಳನ್ನು ಜನಗಳೆಲ್ಲ ನೋಡಬೇಕು ಎಂದರು. ಎಲ್ಲೆಲ್ಲೂ ಔತಣಕೂಟಗಳಾದುವು. ವಿಜ್ಞಾನಿಗಳನ್ನು ಜನ ನೋಡಿರಲಿಲ್ಲವೆಂದಲ್ಲ. ಆದರೆ ಇಲ್ಲಿಯತನಕ ಸೃಷ್ಟಿಯಾಗದೆ ಇದ್ದ ಈ ಹೆಣ್ಣು ಭೌತಶಾಸ್ತ್ರಜ್ಞಳಲ್ಲಿ ಸಾವಿರಾರು ಜನರ ದೃಷ್ಟಿ ನೆಲಸಿತ್ತು. ಆ ಹೆಣ್ಣು ವಿಚಿತ್ರವಾಗಿಯೂ ಇತ್ತು. ನಾಜೂಕಿನ ಹೆಸರಿಲ್ಲದ ದಪ್ಪ ಕಪ್ಪುಬಟ್ಟೆ, ಪ್ರಯೋಗ ಮಾಡಿ ಮಾಡಿ ಒರಟಾಗಿದ್ದ ಕೈ—ಆ ಕೈಗಳಲ್ಲಿ ಕೈಚೀಲಗಳೂ ಇರಲಿಲ್ಲ—ಮದುವೆಯ ಉಂಗುರವೂ ಕಾಣಿಸದ ಬೆರಳುಗಳು, ಇವೆಲ್ಲ ವಿಚಿತ್ರಗಳಲ್ಲದೆ ಇನ್ನೇನು ? ಮೇರಿಯ ಪಕ್ಕದಲ್ಲಿ ಕುಳಿತಿದ್ದ ವ್ಯಕ್ತಿಗಳು ಅವರನ್ನು ಹೆಂಗುಸರೆಂದರೆ ಚೆನ್ನಾಗಿ ಒಪ್ಪುತ್ತಿತ್ತು. ಒಬ್ಬೊಬ್ಬರ ಕೊರಳಿನಲ್ಲಿಯೂ ಸೊಗಸಾದ ವಜ್ರಗಳು ಮಿನುಗುಟ್ಟುತ್ತಿದ್ದುವು. ಮೇರಿ ಇಂತಹ ಒಡವೆಗಳನ್ನು ಎಂದೂ ನೋಡದೇ ಇದ್ದವಳು ಅವುಗಳ ಪ್ರಭೆಯನ್ನು ನೋಡಿ ನೋಡಿ ಸಂತೋಷಪಟ್ಟಳು. ಯಾವಾಗಲೂ ಸುತ್ತಲಿನ ವಿಷಯಗಳಲ್ಲಿ

ಗಮನವನ್ನೇ ಇಡದ ಪಿಯುರಿಯ ದೃಷ್ಟಿಯೂ ಇಲ್ಲಿ, ಈ ಅಮೂಲ್ಯವಾದ ವಜ್ರಗಳ ಮೇಲೆ ನೆಲಸಿತ್ತು. ಅಲ್ಲಿಂದ ಮನೆಗೆ ಹೋದಮೇಲೆ ಮೇರಿ ಗಂಡನನ್ನು ಕುರಿತು, 'ಅಂತಹ ವಜ್ರಗಳಿವೆಯೆಂದೇ ನಾನು ತಿಳಿದಿರಲಿಲ್ಲ. ಅವು ಎಷ್ಟು ಸುಂದರವಾಗಿದ್ದುವು!' ಎಂದಳು. ಪಿಯುರಿ ನಗುತ್ತ ಉತ್ತರ ಕೊಟ್ಟು, 'ಊಟವಾಗುವ ಹೊತ್ತಿನಲ್ಲಿ ಏನೂ ಯೋಚಿಸುವುದಕ್ಕೆ ತಿಳಿಯದೆ ನಾನೊಂದು ಉಪಾಯ ಹುಡುಕಿದ್ದೆ. ಪ್ರತಿ ಹೆಂಗಸು ತನ್ನ ಕೊರಳಿನಲ್ಲಿ ಧರಿಸಿದ್ದ ಆ ವಜ್ರಗಳಲ್ಲಿ ಎಷ್ಟೊಂದು ಪ್ರಯೋಗಶಾಲೆಗಳನ್ನು ಕಟ್ಟಬಹುದೆಂದು ಲೆಕ್ಕಹಾಕುತ್ತಿದ್ದೆ. ಭಾಷಣಕ್ಕೋಸ್ಕರ ಏಳುವ ಹೊತ್ತಿಗೆ ನಾನು ಲೆಕ್ಕ ಹಾಕಿದ ಸಂಖ್ಯೆ ಅದ್ಭುತವಾಗಿಹೋಗಿತ್ತು.'

ಪಿಯುರಿಯೂ, ಮೇರಿಯೂ ಫ್ರಾನ್ಸಿಗೆ ಹಿಂತಿರುಗಿದ ಮೇಲೆ, ೧೯೦೩ನೇ ನವೆಂಬರ್‌ನಲ್ಲಿ ರಾಯಲ್ ಇನ್‌ಸ್ಟಿಟ್ಯೂಷನ್‌ನವರು ಇವರಿಬ್ಬರಿಗೂ ಡೇವೀ ಪದಕವನ್ನು ಕೊಟ್ಟು ಗೌರವಿಸಿದರು. ಕಾಯಿಲೆಯಾಗಿದ್ದ ಮೇರಿಯನ್ನು ಪ್ಯಾರಿಸ್‌ನಲ್ಲಿಯೇ ಬಿಟ್ಟು ಪಿಯುರಿ ಪದಕವನ್ನು ತರಲು ಇಂಗ್ಲೆಂಡಿಗೆ ಹೋಗಿ ಬಂದ.

ಸ್ವೀಡನ್‌ನಿಂದ ಇನ್ನೊಂದು ಗೌರವ, ಇವರಿಬ್ಬರನ್ನೂ ಜಗದ್ವಿಖ್ಯಾತರನ್ನಾಗಿ ಮಾಡಿದ ಗೌರವ ಕಾದಿತ್ತು. ೧೯೦೩ ಡಿಸೆಂಬರ್ ೧೦ ನೇ ದಿನ ಸ್ವೀಡನ್ ದೇಶ ಆ ಸಲದ ಭೌತಿಕಶಾಸ್ತ್ರದ 'ನೊಬೆಲ್' ಬಹುಮಾನದಲ್ಲಿ ಅರ್ಧವನ್ನು ಹೆನ್ರಿಬೆಕ್ವೆರೆಲ್‌ಗೂ, ಉಳಿದರ್ಧವನ್ನು ಕ್ಯೂರಿ ದಂಪತಿಗಳಿಗೂ ಹಂಚಿಕೊಟ್ಟಿತು. ಬಹುಮಾನವನ್ನು ಸ್ವೀಡನ್ನಿಗೆ ಹೋಗಿ ಸ್ವೀಕರಿಸಲು ಮೇರಿಗಾಗಲಿ, ಪಿಯುರಿಗಾಗಲಿ ಸಾಧ್ಯವಾಗದೆಹೋಗಿ, ಫ್ರೆಂಚ್ ಮಂತ್ರಿ, ಇವರಿಗಾಗಿ ಅದನ್ನು ಸ್ವೀಕರಿಸಿದ

'ನೊಬೆಲ್' ಬಹುಮಾನ ಬಂದದ್ದೇ ತಡ, ಕ್ಯೂರಿ ದಂಪತಿಗಳ ಹೆಸರು, ರೇಡಿಯಂ ವಿಷಯ ಪೂರ್ವಾರ್ಧ ಪಶ್ಚಿಮಾರ್ಧಗೋಳಗಳಲ್ಲಿ ತಾನೇ ತಾನಾಗಿ ಹಬ್ಬಿತು. ಜನ ಬೆಕ್ಕಸಬೆರಗಾದರು. ವಿಜ್ಞಾನಪ್ರಪಂಚದಲ್ಲಿ ಹೆಂಗಸೊಬ್ಬಳು ಕಾಲಿಟ್ಟದ್ದು, ವಿಜ್ಞಾನಿಗಳ ಪಂಕ್ತಿಯಲ್ಲಿ ಗಣ್ಯಸ್ಥಾನ ಪಡೆದದ್ದು ಇದೇ ಮೊದಲಬಾರಿ! ಯಾವ ಯಾವ ಪತ್ರಿಕೆಯಲ್ಲಿ ನೋಡಿದರೂ ಇವರಿಬ್ಬರ ಭಾವಚಿತ್ರ. ಜೊತೆಗೆ ಈ ವಿಲಕ್ಷಣ ದಂಪತಿಗಳ ಬಣ್ಣಬಣ್ಣದ

ವರ್ಣನೆ. ಸರಿಸಮಾನಾಗಿ ಶಕ್ತಿಯುಕ್ತವಾದ, ಆದರೂ ಒಂದರ ಆಧಾರವನ್ನೊಂದು ತೋರುತ್ತಿದ್ದ ಈ ಬಾಳುಗಳನ್ನು ಯಾವ ಯಾವ ದೃಷ್ಟಿಯಿಂದ ಯಾವ ಯಾವ ಕೋನದಿಂದ ನೋಡಿದರೂ ಸಾಲದು ಎಂಬ ಭಾವ ಜನರಲ್ಲಿ ಹುಟ್ಟಿಹೋಗಿತ್ತು. ಈ ವ್ಯಕ್ತಿಗಳಿಗೆ ಸಂಬಂಧಿಸಿದ ಪ್ರತಿಯೊಂದು ವಸ್ತು ಏಗೂ ಹೊಸ ಗೌರವವೊಂದು ದೊರಕಿತು. ಪತ್ರಿಕೆಗಳಲ್ಲ ಮೇರಿಯ ಭಾವ ಚಿತ್ರದ ಪಕ್ಕದಲ್ಲಿ ಮೇರಿಯ ಆಕೃತಿಯ ನುತ್ತು ರೂಪಿಸ ವರ್ಣನೆ, ಐರೀನ್ ತನ್ನ ದಾದಿಯೊಡನೆ ಆಡುತ್ತಿದ್ದ ಮಾತು, ಮನೆಯಲ್ಲಿ ಒಲೆಯ ಮುಂದೆ ಕುಳಿತಿರುತ್ತಿದ್ದ ಮೇರಿಯ ಬೆಕ್ಕು 'ಡಿಡಿ'ಯ ವಿಷಯ ಇವೆಲ್ಲ ಕಾಣಿಸಿಕೊಂಡುವು. ಇವರು ವಾಸಮಾಡುತ್ತಿದ್ದ ಪುಟ್ಟ ಮನೆ 'ಯೋಗಿಗಳ ಆವಾಸಸ್ಥಾನ' ಎನ್ನಿಸಿಕೊಂಡಿತು. ಲಾಯದಲ್ಲಿದ್ದ ಪ್ರಯೋಗಶಾಲೆ, ರೇಡಿಯಂ ಧಾತುವನ್ನು ಮೊದಲು ಹೊರಕ್ಕೆ ತೋರಿದ ಪ್ರಯೋಗಶಾಲೆ ಕೀರ್ತಿಯ ಶಿಖರಕ್ಕೇರಿತು. ಪತ್ರಿಕಾ ಪ್ರತಿನಿಧಿಗಳು ಅಲ್ಲಿಗೆ ಮುತ್ತಿಗೆ ಹಾಕಿದರು. ಆ ಒಡಕು ನೆಲ, ಆ ಮುರುಕು ಗೋಡೆ, ಕೊಳೆಯ ಕಿಟಕಿಗಳ ವಿಷಯ ಕತೆಯೊಂದರಂತೆ ಪತ್ರಿಕೆಗಳಲ್ಲಿ ಪ್ರಕಟವಾಯಿತು. ಛಾವಣಿ ಸೋರುತ್ತಿದ್ದ ಈ ಕೊಳಕು ಲಾಯದಲ್ಲಿ ಕೆಲಸ ಮಾಡುತ್ತಿದ್ದ ಇಷ್ಟೊಂದು ಪ್ರತಿಭಾಶಾಲಿಗಳಾದ ವಿಜ್ಞಾನಿಗಳಿಗೆ, ನೊಬೆಲ್ ಬಹುಮಾನ ದೊರಕುವುದಕ್ಕೆ ಮೊದಲು, ಬೇರೆ ಸುಸಜ್ಜಿತವಾದ ಪ್ರಯೋಗಶಾಲೆಯನ್ನು ಕೊಟ್ಟವರು ಮಾತ್ರ ಯಾರೂ ಇರಲಿಲ್ಲ. ಮೇರಿಗೂ ಪಿಯರಗೂ ದಿನವೂ ದಿನವೂ ವಿಧ ವಿಧವಾದ ಕಾಗದಗಳು ರಾಶಿರಾಶಿಯಾಗಿ ಬರತೊಡಗಿದುವು. ಕೆಲವರು ಕೈ ಬರೆಹ ಕೇಳುವರು, ಕೆಲವರು ಹಣ ಕೇಳುವರು. ಕೆಲವರಿಗೆ ಇವರ ಭಾವಚಿತ್ರ ಬೇಕು. ಕೆಲವು ಕಾಗದಗಳಲ್ಲಿ ರೇಡಿಯಂ ಮೇಲಿನ ಕವಿತೆಗಳು, ಪದ್ಯಗಳು ಇದ್ದುವು. ಒಬ್ಬ ಅಮೇರಿಕನ್ ಒಂದು ಜೂಜಿನ ಕುದುರೆಗೆ ಮೇರಿಯ ಹೆಸರಿಡಲು ಅನುಮತಿ ಸಿಕ್ಕುವುದೇ ಎಂದು ಕೇಳಿದ್ದ. ಒಂದು ಸಲ ಪಿಯರಿಯ ಭಾಷಣ ನಡೆಯುವುದೆಂದು, ನಡೆಯುವ ತಾರೀಖು ತಪ್ಪಾಗಿ ಪತ್ರಿಕೆಗಳಲ್ಲಿ ಪ್ರಕಟವಾಗಿತ್ತು. ಎರಡು ಮೂರು ದಿನಗಳಲ್ಲಿ ತಮಗೆ ಟಿಕೆಟ್ ಕಳುಹಿಸಿ ಕೊಡಬೇಕೆಂದು ಇನ್ನೂರು ಜನರಿಂದ ಪ್ರಾರ್ಥನಾ ಪತ್ರ ಬಂದಿದ್ದುವು.

ಮೇರಿಯೂ ಪಿಯರಿಯೂ ಈ ಹಾವಳಿಯಿಂದ ತಪ್ಪಿಸಿಕೊಳ್ಳಲು ತಮ್ಮ

ಗುರುತು ತಿಳಿಯದ ದೂರ ದೂರದ ಹಳ್ಳಿಗಳಿಗೆ ಹೋಗಿ, ಅಲ್ಲಿ ಬೇರೆ ಹೆಸರಿನಿಂದ ಒಂದೆರಡು ದಿನ ಶಾಂತವಾಗಿ ಕಳೆಯುವರು. ಇಷ್ಟಕ್ಕೂ ಇವರನ್ನು ಸುಲಭವಾಗಿ ಗುರುತಿಸಬಲ್ಲವರು ಯಾರು? ತನ್ನ ದೇಹದ ಕಡೆಗೆ ಗಮನವಿಲ್ಲದೆ, ಉಡುಪಿನಲ್ಲಿ ಓರಣವಿಲ್ಲದೆ ಹಳ್ಳಿಯ ರಸ್ತೆಯಲ್ಲಿ ಹೋಗುತ್ತಿರುವ ಈ ಎತ್ತರವಾದ ಆಳು, ಹಿಂದೆ ಹಿಂದೆ ನೆರಳಿನಂತೆ ಹಿಂಬಾಲಿಸುತ್ತಿರುವ, ಹಳ್ಳಿಯ ರೈತರ ಹೆಂಗುಸಿನಂತೆ ಕಾಣುವ ಇನ್ನೊಂದು ವ್ಯಕ್ತಿ. ಇವರಿಬ್ಬರು ವಿಜ್ಞಾನಪ್ರಪಂಚದಲ್ಲಿ ಅದ್ಭುತವಾದ ಸಾಧನೆ ಮಾಡಿ ನೊಬೆಲ್ ಬಹುಮಾನ ಪಡೆದವರು ಎಂದು ಯಾರು ಊಹಿಸಬಲ್ಲರು? ಒಬ್ಬ ಅಮೇರಿಕನ್ ಪತ್ರಿಕೆಯ ಪ್ರತಿನಿಧಿ ಇವರನ್ನು ಹಾಗೂ ಹೀಗೂ ಹಿಂಬಾಲಿಸಿದವನು, ಇವರು ಉಳಿದುಕೊಂಡಿದ್ದ ಗುಡಿಸಿಲಿನ ಮುಂದೆ ನಿಂತಾಗ ಬೆರಗಾಗಿಹೋದ. ಕ್ಯೂರಿ ದಂಪತಿಗಳು ಯಾರು ಅವರು ಇಲ್ಲಿ ಇಳಿದಿದ್ದಾರೆಯೋ ಎಂಬ ಬಲವಾದ ಅನುಮಾನ ಹುಟ್ಟಿಬಿಟ್ಟಿತ್ತು. ಮೆಡೇಮ್ ಕ್ಯೂರಿಯನ್ನು ನೋಡಿ ಮಾತಾಡಬೇಕೆಂದು ಬಂದಿದ್ದವನು ಅವಳು ಯಾರಿರಬಹುದು ಎಂದು ಎಲ್ಲಾದರೂ ವಿಚಾರಿಸೋಣ ಎಂದುಕೊಂಡ. ಮುಂದೆ ಅಲ್ಲಿಯೇ ತನ್ನ ಕಾಲಿನಿಂದ ಜೋಡನ್ನು ಕಳಚಿ ಮರಳನ್ನು ಆಚೆಗೆ ಕೊಡವುತ್ತಿದ್ದ ಹೆಂಗುಸಿನ ಬಳಿ ಹೋಗಿ ವಿಚಾರಿಸಿದ. ಹೆಂಗುಸು ಮುಖವನ್ನೆತ್ತಿದರೆ, ಅದು ಈಗಾಗಲೇ ಸಾವಿರಾರು ಪತ್ರಿಕೆಗಳಲ್ಲಿ ಕಾಣಿಸಿಕೊಂಡ ಅದೇ ಪರಿಚಯದ ಮುಖ. ಪತ್ರಿಕಾ ಪ್ರತಿನಿಧಿಗೆ ತಕ್ಷಣ ಗುರುತು ತಿಳಿಯಿತು. ಈ ಹೆಂಗುಸೇ ಮೆಡೇಮ್ ಕ್ಯೂರಿ ಎಂದು ತಿಳಿದ ಕೂಡಲೆ ಸಂತೋಷವೂ ಆಯಿತು. ತಾನು ಮೇರಿ ಕ್ಯೂರಿಯನ್ನು ಸಂಧಿಸಿದ ಸನ್ನಿವೇಶವೇ ಎಷ್ಟೋ ಸೋಜಿಗವಾಗಿದೆ. ಅಲ್ಲದೆ ಮೆಡೇಮ್ ಕ್ಯೂರಿಯ ಬಾಳಿನ ಘಟನೆಗಳನ್ನೆಲ್ಲ ಈಗ ಅವಳ ಬಾಯಿಂದಲೇ ಹೊರಡಿಸಬಹುದು. ಪತ್ರಿಕಾ ಪ್ರತಿನಿಧಿ ಕೇಳಿದ ಪ್ರಶ್ನೆಗಳಿಗೆ ಮೇರಿ ತಾನು ರೇಡಿಯಂ ಕಂಡುಹಿಡಿದಿದ್ದುಂಟು, ಅದರ ಮೇಲಿನ ಪ್ರಯೋಗಗಳು ಇನ್ನೂ ಮುಂದುವರಿಯುತ್ತಿವೆ ಎಂದುತ್ತರ ಹೇಳಿದಳು. ಮುಂದಕ್ಕೆ ತನ್ನ ವ್ಯಕ್ತಿಯ ವಿಷಯವಾಗಿ, ಬಾಳಿನ ವಿಷಯವಾಗಿ ಕೇಳಿದ ಪ್ರಶ್ನೆಗಳಿಗೆ ಒಂದೇ ಒಂದು ಉತ್ತರ ಕೊಟ್ಟು ಮಾತನ್ನು ಅಲ್ಲಿಗೆ ನಿಲ್ಲಿಸಿದಳು, 'ವಿಜ್ಞಾನಪ್ರಪಂಚದಲ್ಲಿ ನಾವು ಆಸಕ್ತಿ ವಹಿಸಬೇಕಾದ್ದು ವಿಷಯಗಳಲ್ಲಿ; ವ್ಯಕ್ತಿಗಳಲ್ಲಲ್ಲ!'

ಇಂತಹ ಅಭೂತಪೂರ್ವವಾದ ಕೀರ್ತಿ, ಕಟ್ಟೆಯೊಡೆದ ಪ್ರವಾಹದಂತೆ ನುಗ್ಗಿ ಮೇರಿಯ ಮತ್ತು ಪಿಯರಿಯ ಜೀವಗಳನ್ನು ಹೆಮ್ಮೆಯಲ್ಲಿ ಮುಳುಗಿಸಬೇಕಾಗಿತ್ತು ! ಆದರೆ ಇತರ ಎಲ್ಲ ವಿಷಯಗಳಲ್ಲಿದ್ದಂತೆ ಈ ವಿಷಯದಲ್ಲೂ ಕ್ಯೂರಿ ದಂಪತಿಗಳು ವಿಲಕ್ಷಣ ವ್ಯಕ್ತಿಗಳು. ಜೀವಮಾನದಲ್ಲಿ ಅತ್ಯಮೋಘವಾದ ಜಯ, ಯಶಸ್ಸು ತೇಲಿ ಬಂದಾಗ ಇವರು ಅದರಿಂದ ತಪ್ಪಿಸಿಕೊಂಡರು, ಅದರಿಂದ ದೂರವಾಗಿ ಅಡಗಿಕೊಂಡರು. ವಿದ್ಯಾರ್ಥಿನಿಯಾಗಿ ಮೇರಿ ಸ್ಕ್ಲೊಡೊವ್‌ಸ್ಕ, ಜ್ಞಾನ ಸಂಪಾದಿಸುವುದಕ್ಕೆ ಪಟ್ಟ ಪಾಡೇನು? ತೆತ್ತ ಬೆಲೆ ಎಂತಹುದು? ಆದರೆ ಮೇರಿಗೆ ತನ್ನ ಬಾಳಿನ ಆ ಭಾಗ ಮುಂದೆ ಎಂದೆಂದಿಗೂ ಹೆಮ್ಮೆ ತುಂಬಿಕೊಡುತ್ತಿದ್ದುದುಂಟು. ಮುಂದೆ ಪಿಯರಿಯನ್ನು ಮದುವೆಯಾದ ಮೇಲೆ, ಸಂಪಾದಿಸುವ ಗಂಡುಸಿನ ಆಶ್ರಯ ಪಡೆದ ಮೇಲೆ ತಾನೇ ಮೇರಿಗೆ ಸಿಕ್ಕಿದ ಭೋಗವೇನು? ಬಡತನವನ್ನು ಯಾವಾಗಲೂ ಬೆನ್ನಿಗೆ ಕಟ್ಟಿಕೊಂಡಿದ್ದ ಮೇರಿ ಅದನ್ನು ನೀಗಲು ಶಕ್ತಿಮೀರಿ ದುಡಿದಳು, ಗಂಡುಸಿಗಿಂತ ಹೆಚ್ಚಾಗಿ ದುಡಿದಳು. ಅಲ್ಲಿ, ಸೋರುವ ಜೀರ್ಣವಾದ ಪ್ರಯೋಗಶಾಲೆಯಲ್ಲಿ ನಾಲ್ಕು ವರ್ಷಗಳ ಕಾಲ ಅವಿಚ್ಛಿನ್ನವಾಗಿ ದುಡಿದಾಗ ಆದ ದೇಹದಂಡನೆ ಎಷ್ಟರ ಮಟ್ಟಿನದು? ಇಷ್ಟಾದರೂ ಜೀವನ ಮೇರಿ ಮತ್ತು ಪಿಯರಿಯ ಭಾಗಕ್ಕೆ ಯಾವಾಗಲೂ ಸೌಂದರ್ಯಮಯವಾಗಿತ್ತು! ಸುಖಸಂತೋಷ, ಒಂದಕ್ಕೊಂದು ಆಶ್ರಯವಾಗಿದ್ದ ಆ ಬಾಳುಗಳಲ್ಲಿ ತುಂಬಿ ಹರಿಯುತ್ತಿತ್ತು. ಪ್ರಯೋಗಶಾಲೆಯಲ್ಲಿ ಬೆನ್ನು ಮುರಿಯುವಂತೆ ಮಾಡಿದ ಕೆಲಸ, ಕೀರ್ತಿ, ಯಶಸ್ಸುಗಳನ್ನು ನಿರೀಕ್ಷಿಸದೆ ದುಡಿದ ದುಡಿತ ಆ ಸುಖ ಸಂತೋಷದ ಮುಖ್ಯ ಭಾಗ! ವಿಜ್ಞಾನದ ಮೋಹ ಅಂತಹುದು!

ಇಂತಹ ದುಡಿತದಲ್ಲಿ ಸುಖ ಕಂಡ ಮೇರಿ ಕೀರ್ತಿ ಯಶಸ್ಸುಗಳನ್ನು ಬೇಡ ಎಂದು ದೂಡಿದ್ದರಲ್ಲಿ ಅಷ್ಟೇನೂ ಆಶ್ಚರ್ಯವಿಲ್ಲ. ಆದರೂ 'ನೊಬೆಲ್' ಬಹುಮಾನದಿಂದ ಬಂದ ಹಣ, ಈ ಬಡವಿಜ್ಞಾನಿಗಳ ಪಾಲಿಗೆ ಅಗಾಧವಾದ ನಿಧಿಯಂತೆ ಬಂದ ಹಣ ಮೇರಿಗೆ ಸಂತೋಷವನ್ನೇನೋ ಉಂಟುಮಾಡಿತು. ಮೇರಿಯ ಭಾಗಕ್ಕೆ ಈ ಹಣದಿಂದ, ಅನುಕೂಲ್ಯವಾದ ಉಪಕಾರ ಬಂದಿತ್ತು. ಕಾಯಿಲೆಯಿಂದ ಜರ್ಝರಿತನಾಗಿದ್ದ ತನ್ನ ಪಿಯರಿ, ಬಡತನಕ್ಕೋಸ್ಕರ ದುಡಿಯಲೇಬೇಕೆಂದು ದುಡಿಯುತ್ತಿದ್ದವನು ಇನ್ನು ಮುಂದೆ ಶಾಲೆಯ

ಕೆಲಸದಿಂದ ವಿಶ್ರಾಂತಿ ಪಡೆಯಬಹುದಾಗಿತ್ತು. ಈ ಗಂಡಸಿಗೆ ವಿಶ್ರಾಂತಿಯನ್ನು ಒದಗಿಸಲಾರದೆ ಮೇರಿ ಎಷ್ಟೋ ದಿನದಿಂದ ತಲ್ಲಣಿಸುತ್ತಿದ್ದಳು. ಪಿಯರಿ ಮುಂದೆ ಶಾಲೆಯ ಕೆಲಸವನ್ನು ಬಿಟ್ಟುಬಿಟ್ಟ. ಮೇರಿ ಮಾತ್ರ ತಾನು ಶಾಲೆಯಲ್ಲಿ ಕಲಿಸುವುದನ್ನು ಬಿಡಲಿಲ್ಲ. ದೇಹದಲ್ಲಿ ಬಲವಿರುವತನಕ ಕೆಲಸಮಾಡದೇ ಇರುವುದು ಆ ಜೀವಕ್ಕೆ ಒಗ್ಗಿಬರುತ್ತಿರಲಿಲ್ಲ.

ಪಿಯರಿಗಂತೂ ಈ ಕೀರ್ತಿ ಯಶಸ್ಸುಗಳು ತನ್ನನ್ನು ಕುಹಕ ಮಾಡು ವಂತಿದ್ದುವು. ನಾಲ್ಕುವರ್ಷ ಪ್ರಯತ್ನಪಟ್ಟುಪಟ್ಟು ಸಿಕ್ಕದೆಹೋಗಿದ್ದ ಪ್ರೊಫೆಸರ್ ಕೆಲಸ ಅವನಿಗೆ ದೊರೆತದ್ದು ಸ್ವೀಡನ್ ಮತ್ತು ಇಂಗ್ಲೆಂಡ್ ಅವನನ್ನು ಗೌರವಿಸಿದ ಮೇಲೆ. ಪಿಯರಿಗೆ ಇದು ದುಃಖವನ್ನುಂಟುಮಾಡಿತು. ಸೋರ್ಬನ್ನಿನಲ್ಲಿ ತನ್ನ ಭಾಷಣವೊಂದು ನಡೆದಾಗ ಪಿಯರಿ ಈ ವಿಷಯವನ್ನು ಪ್ರಸ್ತಾಪಿಸಿ, ನೋರುವ ಲಾಯವನ್ನಾದರೂ ಒದಗಿಸಿಕೊಟ್ಟ ತನ್ನ ಶಾಲೆಯ ಉಪಕಾರವನ್ನು ನೆನೆದ.

ಇಲ್ಲಿಂದ ಮುಂದೆ ಕ್ಯೂರಿ ದಂಪತಿಗಳ ಹೆಸರು ಜಗದ್ವಿಖ್ಯಾತವಾಯಿತು. ಆದರೆ ಮೇರಿಯ ಮನಸ್ಸಿಗೆ ಶಾಂತಿಯೇನೂ ಸಿಕ್ಕಿರಲಿಲ್ಲ. ಪಿಯರಿಯ ಕಾಯಿಲೆ ಗುಣಮುಖವಾಗುವ ಚಿಹ್ನೆಯೇ ಇರಲಿಲ್ಲ. ಆರಾಮವಿಲ್ಲದೆ ದುಡಿದುಡಿದು ಮೇರಿಯ ಮನಸ್ಸೆಲ್ಲ ಜಡವಾಗಿ ಹೋಗಿತ್ತು. ಬಸುರಿಯಾಗಿದ್ದ ಮೇರಿಗೆ ಇನ್ನೊಂದು ಜೀವವನ್ನು ಈ ದುಃಖಪ್ರಪಂಚಕ್ಕೆ ತಾನು ತರುವುದು ತಪ್ಪು ಎಂಬ ಭಾವನೆ ಬೆಳೆದುಹೋಗಿತ್ತು. ಆದರೆ ೧೯೦೪ರನೆಯ ಡಿಸೆಂಬರ್ ೬ನೇ ದಿನ ಇನ್ನೊಂದು ಹೆಣ್ಣುಮಗು—ಈವ್—ಹುಟ್ಟಿದ ಮೇಲೆ ಮೇರಿಯ ಮನಸ್ಸಿನ ಸ್ಥಿತಿ ಬದಲಾಯಿಸಿತು. ಎಳೆಯ ಮಗುವಿನ ನಗುವಿನೊಡನೆ ಜೀವನದಲ್ಲಿ ಸಂತೋಷ ತೇಲಿಬಂತು. ಬಾಳಿನಲ್ಲಿ ಮಾಯವಾಗಿದ್ದ ಉತ್ಸಾಹ ಮೊಳೆಯಿತು. ಪ್ರಯೋಗಶಾಲೆಯ ಕೆಲಸದಲ್ಲಿ ಅಭಿರುಚಿ ಹುಟ್ಟಿತು. ಇದೇ ಸಮಯಕ್ಕೆ ಪಿಯರಿಯ ಕಾಯಿಲೆ ಸ್ವಲ್ಪ ಗುಣವಾಗಿ ಶರೀರದಲ್ಲಿ ಬಲಕೂಡಿಕೊಂಡಿತು. ಕ್ಯೂರಿ ದಂಪತಿಗಳು ಈ ಸಲ ಸ್ವೀಡನ್ನಿಗೆ ಹೋಗಿ ಅಲ್ಲಿ 'ನೊಬೆಲ್' ಭಾಷಣಗಳನ್ನು ಕೊಟ್ಟುಬಂದರು. ಮೇರಿಯ ಮತ್ತು ತನ್ನ ಪರವಾಗಿ ಪಿಯರಿಯೇ ಭಾಷಣಗಳನ್ನು ಮಾಡಿದ.

ಪ್ಯಾರಿಸ್‌ನಲ್ಲಿ ಕ್ಯೂರಿ ದಂಪತಿಗಳ ಪ್ರೀತಿಮಯ ಸಂಸಾರ ಎಂದಿನಂತೆ

ಶಾಂತವಾಗಿ ಸರಳವಾಗಿ ನಡೆದುಬರುತ್ತಿತ್ತು. ಮನೆಯಲ್ಲಿ ಏಳೆಂಟು ಜನ ಅಚ್ಚುಮೆಚ್ಚಿನ ಗೆಳೆಯರು ಬಂದು ಹೋಗುತ್ತಲೇ ಇರುತ್ತಿದ್ದರು. ಪ್ರತಿ ಭಾನುವಾರ ಮಧ್ಯಾಹ್ನದ ಹೊತ್ತಿನಲ್ಲಿ ಇವರೆಲ್ಲ ಪಿಯರಿಯ ಮನೆಯಲ್ಲಿ ಒಟ್ಟುಗೂಡುವರು. ಪ್ರತಿಯೊಬ್ಬರೂ ವಿಜ್ಞಾನಪ್ರಪಂಚದಲ್ಲಿ ಘಟಾನು ಘಟಿಗಳು. ಮೇರಿ ಮಗುವನ್ನು ಪಕ್ಕದಲ್ಲಿ ಕೈಗಾಡಿಯಲ್ಲಿ ಮಲಗಿಸಿ ಕೊಂಡು ಮಗುವಿನ ಬಟ್ಟೆಯನ್ನು ಹೊಲಿಯುತ್ತ ಇವರ ಮಧ್ಯೆ ಕುಳಿತು ಕೊಳ್ಳುವಳು. ಪ್ರತಿಭಾಶಾಲಿಗಳಾದ ವಿಜ್ಞಾನಿಗಳು ತಮ್ಮತಮ್ಮ ಸಂಶೋಧನೆಗಳ ವಿಷಯವನ್ನೆಲ್ಲ ಚರ್ಚಿಸುವರು. ಸಂಶೋಧನೆಯ ವಿಷಯು ರೇಡಿಯಂ ಬಿಟ್ಟರೆ ಬೇರೆ ಇಲ್ಲ. ರೇಡಿಯಂ ಅಷ್ಟು ಪ್ರಬಲವಾಗಿ ಹರಡಿ ಬಿಟ್ಟಿತ್ತು. ವಿಜ್ಞಾನಿಗಳು, ಗೆಳೆಯರು ಮೇರಿಯ ಸಂಶೋಧನೆ ಎಲ್ಲಿಗೆ ಬಂತು ಎಂದು ಕೇಳುವರು. ಪಕ್ಕದಲ್ಲಿ ಮಗುವನ್ನಿಟ್ಟುಕೊಂಡು ಕೈಯಲ್ಲಿ ಹೊಲಿಗೆ ಹಿಡಿದ ಈ ಹೆಣ್ಣು, ಗಂಡಸರ ಮಧ್ಯೆ ಕುಳಿತು ವಿಜ್ಞಾನದ ವಿಷಯ ವನ್ನು ಗಂಡಸರಿಗೆ ಸರಿಸಮನಾಗಿ ಚರ್ಚಿಸುವಳು. ಕೆಲವುಸಲ ವಿಜ್ಞಾನ ಜಾರಿ ಮಾತಿನ ವಿಷಯ ಬೇರೆಯಾಗುವುದು. ಡಾಕ್ಟರ್ ಕ್ಯೂರಿ ರಾಜ ಕೀಯ ವಿಷಯವನ್ನು ತೆಗೆಯುವನು. ಗೆಳೆಯರಲ್ಲೊಬ್ಬ ಅರ್‌ಬೇನ್ ಮೇರಿ ಯನ್ನು ಹಾಸ್ಯಮಾಡುವನು. ನಾಜೂಕಿಲ್ಲದ ಅವಳ ಉಡುಪನ್ನು ಗೇಲಿ ಮಾಡುವನು. ಹೆಂಗುಸಿನ ಬಿನ್ನಾಣ ಸ್ವಲ್ಪವೂ ಇಲ್ಲ ಎಂದು ಹಳಿಯುವನು. ಅರ್‌ಬೇನ್‌ನ ಬೋಧನೆಯನ್ನೆಲ್ಲ ಮೇರಿ ಆಶ್ಚರ್ಯಚಕಿತಳಾಗಿ ಮೂಕಳಾಗಿ ಕೇಳುವಳು.

ಕೊನೆಗೆ ಪ್ರಪಂಚವೆಲ್ಲ ಕ್ಯೂರಿ ದಂಪತಿಗಳ ಪ್ರತಿಭೆಯನ್ನು ಒಪ್ಪಿದ ಮೇಲೆ ಫ್ರಾನ್ಸ್ ಅದರಲ್ಲೂ ಸೋರ್ಬನ್ ಪಿಯರಿಯ ಯೋಗ್ಯತೆಗೆ ತಕ್ಕ ಸ್ಥಾನವನ್ನು ಕೊಡುವ ಆಲೋಚನೆ ಮಾಡಿತು. ಎಲ್ಲದಕ್ಕಿಂತ ಮೊದಲು ಸೈನ್ಸ್ ಅಕ್ಯಾಡೆಮಿಯ ಸದಸ್ಯನಾಗಿ ಚುನಾಯಿತನಾಗಬೇಕಾಗಿತ್ತು. ಸೈನ್ಸ್ ಅಕ್ಯಾಡೆಮಿಯ ಸದಸ್ಯತ್ವಕ್ಕೆ ಉಮೇದುವಾರನಾಗಿ ಪಿಯರಿ ನಿಲ್ಲುವುದು ಇದು ಎರಡನೆಯ ಸಲ. ಮೊದಲನೆಯ ಕಟುವಾದ ಅನುಭವ ಇನ್ನೂ ನೆನಪಿಸಲ್ಲಿತ್ತು. ತಿರುಗಿ ಅದರಲ್ಲಿ ಸಿಕ್ಕಿಕೊಳ್ಳುವುದು ಪಿಯರಿಯ ಮನಸ್ಸಿಗೇನೂ ಹಿತವಿರಲಿಲ್ಲ. ಆದರೆ ಇತರ ಎಷ್ಟೋ ವಿಷಯಗಳಂತೆ ಇದೂ

ಅನಿವಾರ್ಯ. ಪಿಯರಿ ಉಮೇದವಾರನಾಗಿ ನಿಲ್ಲುವ ಮನಸ್ಸುಮಾಡಿದ. ಹಿಂದಿನಂತೆ ಆದೀತೆಂಬ ಚಿಂತೆ ಗೆಳೆಯರಿಗೆಲ್ಲ ಹತ್ತಿತ್ತು. ಆದರೆ ಹಿಂದಿನ ಪಿಯರಿ ಯಾರ ಕಣ್ಣಿಗೂ ಕಾಣದೆ ನೋರುವ ಲಾಯದಲ್ಲಿ ಹೆಣಗಬಲ್ಲ ಹುಚ್ಚ ವಿಜ್ಞಾನಿ! ಈಗಿನ ಪಿಯರಿಗೆ 'ನೋಬೆಲ್' ಬಹುಮಾನ ಬಂದಿದೆ. ಸದಸ್ಯನಾಗುವ ಭರವಸೆ ಈಗ ಬಲವಾಗಿದೆ. ಮೊದಲಸಲ ಪಿಯರಿಯನ್ನು ಉಮೇದವಾರನಾಗಲು ತಿದ್ದಿ ತಯಾರುಮಾಡಿದ್ದ ಮಾಸ್‌ಕಾರ್ಟ್ ತಿರುಗಿ ಈ ಸಲ ಕಾಗದ ಬರೆಬರೆದು ಬೋಧನೆಯ ಸುರಿಮಳೆಯನ್ನೇ ಸುರಿಸಿದ. ಪಿಯರಿಗಿಂತ ಈ ಗೆಳೆಯನ ಆತಂಕವೇ ಹೆಚ್ಚಾಗಿತ್ತು. ಹೇಗಾದರೂ ಮಾಡಿ ಧೈರ್ಯವನ್ನೆಲ್ಲ ವಹಿಸಿ ಅಕ್ಯಾಡೆಮಿಯ ಸದಸ್ಯರನ್ನೆಲ್ಲ ನೋಡಿ ಮುಗಿಸಿ ಬಿಡು ಎಂದು ಒತ್ತಿ ಒತ್ತಿ ಹೇಳಿದ. ಕೊನೆಗೆ ಎಲ್ಲೋ ಕೆಲವು ಮತಗಳನ್ನು ಹೆಚ್ಚಾಗಿ ಪಡೆದು ಪಿಯರಿಯೇನೋ ಚುನಾಯಿತನಾದ. ಆ ಮೇಲೆ ತನ್ನ ಗೆಳೆಯನಿಗೆ ಬರೆದ ಕಾಗದದಲ್ಲಿ ಪಿಯರಿ ಹೀಗೆ ಬರೆದಿದ್ದಾನೆ. 'ನನಗೆ ಅಕ್ಯಾಡೇಮಿಯಲ್ಲಿ ಸೇರಬೇಕೆಂಬ ಅಭಿಲಾಷೆ ಇರಲಿಲ್ಲ. ಅಕ್ಯಾಡೆಮಿಗೂ ನನ್ನನ್ನು ಸೇರಿಸಿಕೊಳ್ಳುವುದು ಇಷ್ಟವಿರಲಿಲ್ಲ. ಅಂತೂ ನಾನು ಅಲ್ಲಿ ಪ್ರವೇಶ ಮಾಡಿದ್ದೇನೆ.' ಇನ್ನೊಂದು ಕಾಗದದಲ್ಲಿ 'ಅಕ್ಯಾಡೆಮಿಯ ಉಪಯೋಗವೇನೆಂಬುದು ನನಗೆ ಇನ್ನೂ ಪತ್ತೆಯಾಗಿಲ್ಲ' ಎಂದು ಬರೆದಿದ್ದಾನೆ.

ಇಲ್ಲಿಂದ ಮುಂದಿನ ಹೆಜ್ಜೆಯೆಂದರೆ ಪ್ರೊಫೆಸರ್ ಪದವಿ. ಭೌತಶಾಸ್ತ್ರದ ಪ್ರೊಫೆಸರ್ ಕೆಲಸವೊಂದು ಪಿಯರಿಗಾಗಿಯೇ ಸೃಷ್ಟಿಯಾಯಿತು. ಇಲ್ಲಿಗೆ ಪಿಯರಿಯ ಬಾಳಿನ ಹಂಬಲ ನೆರವೇರಬೇಕಾಗಿತ್ತು. ಕಾಯಿಲೆಯಿಂದ ಕುಗ್ಗಿ ಹೋಗಿ ನಿರ್ವಾಹವಿಲ್ಲದೆ ದುಡಿಯುತ್ತಿದ್ದ ಶಾಲೆಯ ಕೆಲಸವೆಲ್ಲಿ? ವಿರಾಮಕ್ಕೂ ಅವಕಾಶ ಕೊಟ್ಟು ಹಣ ಸಂಪಾದನೆಗೂ ಮಾರ್ಗ ಮಾಡಿಕೊಡುವ ವಿಶ್ವವಿದ್ಯಾಲಯದ ಕೆಲಸವೆಲ್ಲಿ? ಪಿಯರಿಗೂ ಮೇರಿಗೂ ತುಂಬ ಸಂತೋಷವೇ ಆಯಿತು. ಪಿಯರಿ ವಿಶ್ವವಿದ್ಯಾಲಯಕ್ಕೆ ಸೇರಿದಂತೆ ತನ್ನ ಪ್ರಯೋಗಶಾಲೆ ಯಾವುದು, ಎಂದು ಅಧಿಕಾರಿಗಳನ್ನು ಪ್ರಶ್ನಿಸಿದ. ಆ ಪ್ರಶ್ನೆ ಎದ್ದೇಯಿಲ್ಲವೆಂದು ಉತ್ತರ ಬಂತು. ಕೇಳಿ ಪಿಯರಿಯ ಮನಸ್ಸು ರೋಸಿಹೋಯಿತು. ತನಗೆ ಅತ್ಯಂತ ಪ್ರಿಯವಾದ ಪ್ರಯೋಗಶಾಲೆ ಸಿಕ್ಕದೆ ಹೋದಮೇಲೆ ಆ

ಸಹವಾಸವೇ ಬೇಡ ಎಂದು ಪಿಯರಿ ಹೇಳಿದ. ಕೊನೆಗೂ ಕೊಸರಾಡಿ ಕೊಸರಾಡಿ ವಿಶ್ವವಿದ್ಯಾಲಯ ದೊಡ್ಡದೊಂದು ಉಪಕಾರ ಭಾರವನ್ನು ಪಿಯರಿಯ ಮೇಲೆ ಹೊರಿಸಿದಂತೆ ಮಾಡಿ ಸೋರ್ಬನ್‌ನಿಂದ ದೂರದಲ್ಲಿ ಒಂದು ಪ್ರಯೋಗಶಾಲೆಯನ್ನು ಕಟ್ಟಿಸಿಕೊಡುವುದಾಗಿ ಹೇಳಿತು. ಪ್ರಯೋಗಶಾಲೆಯನ್ನು ಸಜ್ಜುಗೊಳಿಸುವುದಕ್ಕೆಂದು ವಿಶ್ವವಿದ್ಯಾಲಯದಿಂದ ಪಿಯರಿಗೆ ಹಣವೂ ಒದಗಿತು. ಆದರೆ ಇನ್ನೇನು ತನ್ನ ಆಕಾಂಕ್ಷೆ ಫಲಿಸಿತು ಎನ್ನುವಷ್ಟರಲ್ಲಿ ಈ ಹಣದಲ್ಲಿ ಪಿಯರಿ ಪ್ರಯೋಗಶಾಲೆಯ ಕಟ್ಟಡ ಕಟ್ಟಲು ಹಿಡಿದ ಹಣವನ್ನು ಕೊಟ್ಟುಬಿಡಬೇಕೆಂದು ತಿಳಿದುಬಂತು. ಉಳಿದ ಹಣ ಯಾವುದಕ್ಕೂ ಸಾಲದೆ ಹೋಯಿತು. ಅಂತೂ ಪಿಯರಿಯ ಹೃದಯದ ಒಂದು ಬಲವಾದ ಆಸೆ ಪೂರ್ಣವಾಗಲೇ ಇಲ್ಲ. ವಿಜ್ಞಾನದ ಗೀಳು ಹಿಡಿದಾಗಿನಿಂದ ಅವನ ಮನಸ್ಸಿನಲ್ಲಿ ಆಳವಾಗಿ ಬೇರೂರಿದ್ದ ಆಕಾಂಕ್ಷೆ ಅದು. ಈ ಅದ್ಭುತ ಮೇಧಾವಿಗಳಾದ ವಿಜ್ಞಾನಿಗಳ ಬಾಳಿನಲ್ಲಿ ಒಂದು ಸೋಜಿಗದ ಭಾಗವಾಗಿ ಸೇರಿದ್ದ, ಸೋರುವ ಲಾಯದಲ್ಲಿನ ಪ್ರಯೋಗಶಾಲೆ ಮೇರಿಗೂ ಪಿಯರಿಗೂ ಹೆಚ್ಚು ಸುಖವನ್ನೇನೂ ಉಂಟುಮಾಡಿರಲಿಲ್ಲ. ಚೆನ್ನಾಗಿ ಸಜ್ಜುಗೊಳಿಸಿದ ಪ್ರಯೋಗಶಾಲೆಯೊಂದಿದ್ದಿದ್ದರೆ, ನಾಲ್ಕು ವರ್ಷ ಕಾಲ ಬೆಳಕು ಕಾಣಲು ಸಮ್ಮತಿಸದೆಹೋದ ರೇಡಿಯಂ ಎರಡು ವರ್ಷಗಳಲ್ಲಿ ಈಚೆಗೆ ಬರಬಹುದಾಗಿತ್ತು. ಪಿಯರಿ ಮತ್ತು ಮೇರಿಯ ಶರೀರ ಇಷ್ಟೊಂದು ಹಿಂಡಿಹೋಗುತ್ತಲೂ ಇರಲಿಲ್ಲ. ಅಂತೂ ಎಷ್ಟೋ ವರ್ಷಗಳು ಕಾದರೂ ಪಿಯರಿಗೆ ಪ್ರಯೋಗಶಾಲೆಯೇನೋ ಸಿಕ್ಕಲಿಲ್ಲ. ಸಾವು ದಿನದಿನಕ್ಕೆ ಕ್ಷಣ ಕ್ಷಣಕ್ಕೆ ಪಿಯರಿಗೆ ಹತ್ತಿರವಾಗಿ, ತನ್ನದಾಗಿ ಒಳ್ಳೆಯ ಪ್ರಯೋಗಶಾಲೆಯನ್ನು ಅವನು ನೋಡುವ ಮೊದಲೇ ಮೃತ್ಯು ಅವನನ್ನು ನುಂಗಿಹಾಕಿತು. ಮುಂದೆ ಎಂಟು ವರ್ಷ ಕಳೆದುಹೋದ ಮೇಲೆ ಮೇರಿ ಒಂದು ಒಳ್ಳೆಯ ಪ್ರಯೋಗಶಾಲೆಯನ್ನೇನೋ ಕಟ್ಟಿದಳು. ಆದರೆ ಮೇರಿಯ ಹೃದಯದಲ್ಲಿ ಆರದ ಬೇಗೆಯೊಂದು ಮಾಯದ ನೋವೊಂದು ಅದರ ಜೊತೆಯಲ್ಲೇ ಮನೆ ಮಾಡಿತು. ತನ್ನ ಪಿಯರಿ ಹಾತೊರೆದು ಹಂಬಲಿಸುತ್ತಿದ್ದೂ ಒಳ್ಳೆಯ ಪ್ರಯೋಗಶಾಲೆಯೊಂದನ್ನು ಪಡೆಯದೆ ಕಣ್ಣುಮುಚ್ಚಿದನಲ್ಲ ಎಂದು ಅವಳ ಮನಸ್ಸು ಬಾಳಿನ ಕೊನೆಯ ತನಕ ಕೊರೆದುಕೊಳ್ಳುತ್ತಿತ್ತು.

೧೯೦೪ನೆಯ ನವೆಂಬರ್ ತಿಂಗಳಲ್ಲಿ ಮೇರಿ ಪಿಯರಿಯ ಪ್ರಯೋಗ ಶಾಲೆಯ ಮುಖ್ಯಸ್ಥೆಯಾಗಿ ಸೋರ್ಬಾನ್ನಿನಿಂದಲೇ ನೇಮಕವಾದಳು. ಅವಳ ಸಂಬಳ ವರ್ಷಕ್ಕೆ ಎರಡು ಸಾವಿರದ ನಾನೂರು ಫ್ರಾಂಕುಗಳೆಂದು ಗೊತ್ತಾಯಿತು. ಹಳೆಯ ಲಾಯದ ಸಾಮಾನುಗಳನ್ನೆಲ್ಲ ಕ್ಯೂರಿ ದಂಪತಿಗಳು ಹೊಸ ಪ್ರಯೋಗಶಾಲೆಯ ಕೋಣೆಗಳಿಗೆ ಸಾಗಿಸಿದರು. ಇದಾದ ಮೇಲೆ ಎಷ್ಟೋ ಸಲ ಮೇರಿಯೂ, ಪಿಯರಿಯೂ ತಮ್ಮ ಹೆಮ್ಮೆಯ ಸಂಕೇತವಾದ ಆ ಪ್ರೀತಿಯ ಮುರುಕು ಲಾಯವನ್ನು ನೋಡಲು ಬರುತ್ತಿದ್ದರು.

ಆ ಮುರುಕು ಲಾಯ ಅಷ್ಟೊಂದು ಪ್ರಿಯವಾಗಿರುವುದಕ್ಕೆ ಕಾರಣವೂ ಇತ್ತು. ಈ ಎರಡು ಜೀವಗಳನ್ನು ಬಂಧಿಸಿದ್ದುದು ವಿಜ್ಞಾನ ಮತ್ತು ಕೆಲಸ. ಮದುವೆಯಾದಾಗ ವಿಜ್ಞಾನದ ಆಸರೆಯಲ್ಲಿ ಪ್ರೇಮ ಉದಯವಾಗಿತ್ತು. ಆ ಪ್ರೇಮ ದಿನ ಕಳೆದಂತೆ ವರ್ಷ ಕಳೆದಂತೆ ಒಬ್ಬರನ್ನೊಬ್ಬರು ಅರಿತಂತೆ ಗಾಢವಾಗಿ ಅನಂತವಾಯಿತು. ಒಬ್ಬರಲ್ಲೊಬ್ಬರಿಗೆ ಅಪಾರವಾದ ಗೌರವ ತಾನಾಗಿ ಮೊಳೆಯಿತು. ಈ ಪ್ರೀತಿಯಲ್ಲಿ, ಈ ಗೌರವದಲ್ಲಿ ಒಂದು ಅಪೂರ್ವವಾದ ವಿಶೇಷವಿದೆ ಎರಡು ವ್ಯಕ್ತಿಗಳೂ ಪ್ರತಿಭಾಶಾಲಿಗಳಾದರೂ ಸರಿಸಮಾನರಾದರೂ ಇಲ್ಲಿ ಅಸೂಯೆ ಸುಳಿಯುತ್ತಿರಲಿಲ್ಲ. ಪಿಯರಿಯ ಪ್ರತಿಭೆ ಮೇರಿಯ ಹೃದಯದಲ್ಲಿ ಹೆಮ್ಮೆಯನ್ನುಕ್ಕಿಸುತ್ತಿತ್ತು. ಮೇರಿಯ ಪ್ರಚಂಡ ಮೇಧಾವಿತನ ಪಿಯರಿಗೆ ಅಗಾಧವಾದ ಸಂತೋಷವನ್ನು ಕೊಡುತ್ತಿತ್ತು. ಒಂದೊಂದು ವೇಳೆ ವಿಜ್ಞಾನಿಗಳ ಗುಂಪಿನಲ್ಲಿ ತನ್ನ ವಾದ ಹಿಡಿದು ಬಲವಾಗಿ ಚರ್ಚಿಸಬೇಕಾಗಿ ಬಂದಾಗ ಮೇರಿ ಹೆದರಿ ನೀರಾಗಿ ತನ್ನ ಗಂಡನ ಕಡೆಗೆ ತಿರುಗಿ ಅವನ ಸಹಕಾರವನ್ನು ಬೇಡುವಳು. ಪಿಯರಿ ತನಗಿಂತ ಬುದ್ಧಿಶಕ್ತಿಯಲ್ಲಿ ತುಂಬ ಹೆಚ್ಚಿನವನು, ಎಂಬ ಭಾವನೆ ಅವಳಲ್ಲಿ ಬೆಳೆದು ಹೋಗಿತ್ತು. ಅವಳ ಮೆಚ್ಚಿಕೆ, ಗೌರವ, ಬಲವಾಗಿ ತನ್ನ ಗಂಡನಂತಹ ಪರಿಪೂರ್ಣ ವ್ಯಕ್ತಿ ಬೇರೊಬ್ಬನಿಲ್ಲ ಎಂದು ಮೇರಿ ಯೋಚಿಸುವಳು.

ಇನ್ನೊಂದು ದಿನ ಪಿಯರಿಯ ಜೊತೆಯವರು ಕೆಲವರು ತಾವು ಬಿಡಿಸಲಾಗದೆ ಹೋದ ಗಣಿತದ ಒಂದು ಸಮಸ್ಯೆಯನ್ನು ಪಿಯರಿಯ ಮುಂದೆ ತಂದು ಹಿಡಿದರು. ಪಿಯರಿ, ಮೆಡೇಮ್ ಕ್ಯೂರಿ ಬರಲಿ ಗಣಿತದ ಈ ಭಾಗ ಅವಳಿಗೆ ಚೆನ್ನಾಗಿ ಗೊತ್ತು ಎಂದು ಹೇಳಿದ. ಪಿಯರಿ ಹೇಳಿದ್ದಂತೆಯೇ ಮೇರಿ

ಬಂದ ಮೇಲೆ, ಕೆಲವೇ ನಿಮಿಷಗಳಲ್ಲಿ ಆ ಕಷ್ಟವಾದ ಸಮಸ್ಯೆಯನ್ನು ಬಿಡಿಸಿ ಕೊಟ್ಟಳು.

೧೯೦೬ರ ಈಸ್ಟರ್ ದಿನಗಳಲ್ಲಿ ಕ್ಯೂರಿ ದಂಪತಿಗಳು ಹಳ್ಳಿಗೆ ಹೋದರು. ಭಾನುವಾರ ಬೈಸಿಕಲ್ ಹತ್ತಿ ಹೊರಟು ಕಾಡುಹೂಗಳನ್ನು ಆರಿಸಿ ತಂದರು. ಮಾರನೆಯ ದಿನ ಆಯಾಸಪಟ್ಟಿದ್ದ ಪಿಯರಿ ಹುಲ್ಲಮೇಲೆ ಸುಮ್ಮನೆ ಮಲಗಿದ್ದ. ಮುಂದೆ ಮಕ್ಕಳಿಬ್ಬರೂ ಕುಣಿಯುತ್ತ ಆಡುತ್ತಿದ್ದರು. ಐರಿಸ್ ಚಿಟ್ಟೆಗಳನ್ನು ಅಟ್ಟಿಸಿಕೊಂಡು ಹೋಗುತ್ತಿದ್ದಳು. ಆ ಪ್ರಶಾಂತವಾದ ವಾತಾವರಣದಲ್ಲಿ ಪಿಯರಿ ಮಕ್ಕಳ ಕಡೆಗೆ ಒಂದು ಸಲ ನೋಡಿ ಹೆಂಡತಿಯ ಕಡೆಗೆ ತಿರುಗಿ ಹೇಳಿದ, 'ಜೀವನ ನಿನ್ನೊಡನೆ ಎಷ್ಟೊಂದು ಮಧುರವಾಗಿದೆ ಮೇರಿ!' ಮಧ್ಯಾಹ್ನ ಒಬ್ಬರಾಗುತ್ತಲೊಬ್ಬರು ಕಿರಿಯ ಮಗುವನ್ನು ಭುಜದ ಮೇಲೆತ್ತಿಕೊಂಡು ಮೇರಿ, ಪಿಯರಿ ಕಾಡು ಪ್ರದೇಶದಲೆಲ್ಲ ಅಲೆದಾಡಿದರು. ಹನ್ನೊಂದು ವರ್ಷಗಳ ಕಾಲ ಇಷ್ಟೊಂದು ಮಧುರವಾಗಿ ನಡೆದ ಸಂಸಾರ, ದಿನದಿನಕ್ಕೂ ಹೆಚ್ಚು ಹೆಚ್ಚು ಸುಂದರವಾಗುತ್ತಿದ್ದ ಜೀವನ ೧೯೦೬ನೇ ಏಪ್ರಿಲ್ ೧೯ಕ್ಕೆ ಮುಗಿದು ಹೋಯಿತು. ಆದಿನ ಪಿಯರಿ ತನ್ನ ಪ್ರೀತಿಯನ್ನೆಲ್ಲ ಸೂರೆ ಕೊಟ್ಟಿದ್ದ, ಹೆಂಡತಿ, ಮಕ್ಕಳು ವಿಜ್ಞಾನ ಎಲ್ಲವನ್ನೂ ಹಿಂದೆಬಿಟ್ಟು ದುರಂತ ಮರಣಕ್ಕೆ ತುತ್ತಾಗಿ ಹೋದ. ಸಾಯುವುದಕ್ಕೆ ಐದು ದಿನಗಳ ಮುಂಚೆ ಬರೆದ ಪ್ರಯೋಗಶಾಲೆಯ ಡೈರಿಯಲ್ಲಿ ಪಿಯರಿ ಹೀಗೆ ಬರೆದಿದ್ದಾನೆ: ' ಮೆಡೇಮ್ ಕ್ಯೂರಿ ಮತ್ತು ನಾನು ಕೆಲಸ ಮಾಡುತ್ತಿದ್ದೇವೆ..' ಆ ಮಾತುಗಳಲ್ಲಿ ಅವರಿಬ್ಬರ ಜೀವನದ ಸೂತ್ರ ಅಡಕವಾಗಿದೆ ಕೆಲಸ ಅವರನ್ನು ಒಂದುಗೂಡಿಸಿತು, ಒಬ್ಬರನ್ನೊಬ್ಬರು ಪ್ರೀತಿಸುವ ಹಾಗೆ ಮಾಡಿತು. ಜೊತೆಯಾಗಿ ಕೆಲಸಮಾಡಿದರೆ ಸಾಕೆಂದು ಇಬ್ಬರೂ ಮದುವೆಯಾದರು. ಕೆಲಸ ಮಾಡುತ್ತ ಮಾಡುತ್ತ ತಾನು ಸಾಯುತ್ತೇನೆಂದು ತಿಳಿಯದೆಯೇ ಪಿಯರಿ ಮಧ್ಯವಯಸ್ಸಿನಲ್ಲಿ ಸತ್ತುಹೋದ. ಗಂಡನನ್ನು ಕಳೆದುಕೊಂಡ ಮೇರಿ ಮುಪ್ಪಿನತನಕ ದೇಹ ತೇದು ತೇದು ಮಾರನೆಯ ವರ್ಷ ಕೆಲಸ ಮಾಡಿಯೇನೆಂದು ಹೇಳಿ ಸಾವು ತನ್ನನ್ನು ನುಂಗುತ್ತಿದೆ ಎಂದು ತಿಳಿಯದೆ ಪ್ರಾಣ ಬಿಟ್ಟಳು.

—

ಅಧ್ಯಾಯ ಹದಿನಾರು

# ಅಪಘಾತ



೧೯೦೬ನೆಯ ಏಪ್ರಿಲ್ ೧೯ನೆಯ ಗುರುವಾರದ ದಿನ ಬೆಳಕು ಹರಿದರೂ ಮಳೆ ಸುರಿಯುತ್ತಲೇ ಇತ್ತು. ಮೋಡ ದಟ್ಟವಾಗಿ ಕವಿದು ಇನ್ನೂ ಕತ್ತಲು ತುಂಬಿಯೇ ಇತ್ತು. ಮೇರಿಗೂ ಪಿಯರಿಗೂ ಹೊರಗಿನ ವಾತಾವರಣ ಬೇಸರವನ್ನುಂಟುಮಾಡುತ್ತಿದ್ದರೂ ಕೈತುಂಬ ಕೆಲಸ ಕಾದಿತ್ತು. ಬೆಳಗಿನ ಕೆಲಸದ ಧಾವಂತದಲ್ಲಿ ಮೇರಿ ಮತ್ತು ಪಿಯರಿಗೆ ವಿರಾಮವಾಗಿ ಕೂರುವುದಕ್ಕೆ ಹೊತ್ತಿರಲಿಲ್ಲ. ಮೇರಿಯೊಬ್ಬಳೇ ತನ್ನ ಮಕ್ಕಳು ಮತ್ತು ಮಾವನೊಡನೆ ಬೆಳಗಿನ ಊಟ ತೀರಿಸಿದಳು. ಪಿಯರಿಗೆ ಸೋರ್ಬನ್ನಿನ ಪ್ರೊಫೆಸರ್‌ಗಳೊಡನೆ ಹೊರಗೆ ಊಟವಿತ್ತು. ಊಟ ಮುಗಿದ ಮೇಲೆ ಸುಮಾರು ಮಧ್ಯಾಹ್ನ ಎರಡೂವರೆ ಗಂಟೆಗೆ ಪಿಯರಿ ನಗುನಗುತ್ತ ತನ್ನ ಜೊತೆಯವರಿಂದ ಬೀಳ್ಕೊಂಡು ಅಲ್ಲಿಂದ ಹೊರಬಿದ್ದ. ಮೋಡ ಕವಿದಿದ್ದ ಆಕಾಶದ ಕಡೆಗೊಂದು ಸಲ ನೋಡಿ ತನ್ನ ಕೊಡೆಯನ್ನು ಬಿಚ್ಚಿ ಸುರಿಯುತ್ತಿರುವ ಮಳೆಯಲ್ಲೇ ಹೊರಟ. ತನ್ನ ಪುಸ್ತಕಗಳ ಪ್ರಕಾಶಕರನ್ನು ನೋಡಬೇಕಾಗಿತ್ತು. ಆದರೆ ಅಲ್ಲಿ ಮುಷ್ಕರ ನಡೆಯುತ್ತಿದ್ದು ಬಾಗಿಲು ಮುಚ್ಚಿದ್ದರಿಂದ ಇನ್‌ಸ್ಟಿಟ್ಯೂಟ್ ಕಡೆಗೆ ತಿರುಗಿದ. ವಾಹನಗಳ ಗಲಾಟೆಯಿಂದ ತುಂಬಿದ್ದ ರಸ್ತೆ ಬಿಟ್ಟು ಗಲಭೆಯಿಲ್ಲದ ರಸ್ತೆಗೆ ತಾನಾಗಿ ಅವನ ಕಾಲುಗಳು ತಿರುಗಿದುವು. ಪಿಯರಿ ಏನೋ ಯೋಚನೆಯಲ್ಲಿ ಮಗ್ನನಾಗಿ ಕನಸಿನಲ್ಲಿ ನಡೆಯುವವನಂತೆ ಒಂದು ಸಲ ರಸ್ತೆಯ ಅಂಚಿನಲ್ಲಿ, ಒಂದು ಸಲ ರಸ್ತೆಯಲ್ಲಿ ಗಾಡಿಯೊಂದರ ಹಿಂದೆ ಹಿಂದೆ ನಡೆದು ಹೋಗುತ್ತಲೇ ಇದ್ದ. ಎದುರು ಕಡೆಯಿಂದ ಸಾಮಾನು ತುಂಬುವ ಭಾರವಾದ ಜೋಡು ಕುದುರೆಯ ಗಾಡಿಯೊಂದು ನಿಧಾನವಾಗಿ ಈ ಕಡೆಗೇ ಬರುತ್ತಿತ್ತು. ಪಿಯರಿ ಬೇರೆ ಪಕ್ಕಕ್ಕೆ ಹೋಗೋಣ

ಎಂದು ಯೋಚಿಸಿ ತಾನು ಅನುಸರಿಸುತ್ತಿದ್ದ ಗಾಡಿಯನ್ನು ಬಿಟ್ಟು ತಟಕ್ಕನೆ ಎಡಗಡೆಗೆ ನುಗ್ಗಿದ ಸಾಮಾನಿನ ಗಾಡಿ ಅದೇ ಕ್ಷಣದಲ್ಲಿ ಈ ಗಾಡಿಯ ಪಕ್ಕಕ್ಕೆ ಬಂದಿತ್ತು. ಪಿಯರಿ ಈ ಕಡೆಯ ಕುದುರೆಯ ಮೇಲೆ ನುಗ್ಗಿದ್ದ. ಚಕಿತನಾಗಿ ಪಿಯರಿ ಕುದುರೆಯ ಆಸರೆಯಲ್ಲಿ ನಿಲ್ಲುವುದಕ್ಕೆ ಹೋದ. ದುರದೃಷ್ಟಕ್ಕೋ ಎಂಬಂತೆ ಕುದುರೆ ಹಿಂಗಾಲ ಮೇಲೆ ನೆಗೆದು ಪಿಯರಿಯನ್ನು ಒದ್ದೆಯ ನೆಲದ ಮೇಲೆ ಕೆಡವಿಬಿಟ್ಟಿತು. ಪಿಯರಿ ಕುದುರೆಗಳ ಕಾಲ ಮಧ್ಯದಲ್ಲಿ ಸಿಕ್ಕಿಹೋದ. ಆದರೆ ಅಪಾಯವೇನೂ ಆಗಿರಲಿಲ್ಲ. ಬೀದಿಯಲ್ಲಿ ಹೋಗುತ್ತಿದ್ದ ಜನ ಒಂದೇ ಉಸಿರಿನಲ್ಲಿ ಗಾಡಿಯವನನ್ನು 'ನಿಲ್ಲಿಸು ನಿಲ್ಲಿಸು' ಎಂದು ಕೂಗಿದರು ಗಾಡಿ ಹೊಡೆಯುವವನು ಲಗಾಮನ್ನು ಎಷ್ಟೆಷ್ಟು ಜಗ್ಗಿದರೂ ಗಾಡಿ ಮುಂದಕ್ಕೆ ಹೋಗುತ್ತಲೇ ಇತ್ತು. ಇಷ್ಟಾದರೂ ಪಿಯರಿಗೆ ಅಪಾಯವೇನೂ ಆಗಿರಲಿಲ್ಲ ಗಾಯ ಕೂಡ ಆಗಿರಲಿಲ್ಲ. ಕುದುರೆಗಳ ಕಾಲು ಅವನನ್ನು ದಾಟಿಕೊಂಡು ಹೋದುವು. ಮುಂದಿನ ಚಕ್ರಗಳೆರಡರ ಮಧ್ಯದ ಭಾಗದಲ್ಲಿ ಪಿಯರಿಯ ಶರೀರ ಅಪಾಯವನ್ನು ಸುಲಭವಾಗಿ ತಪ್ಪಿಸಿಕೊಂಡಿತ್ತು. ಆ ಕ್ಷಣದಲ್ಲಿ ಆ ನಿಮಿಷದಲ್ಲಿ ಪಿಯರಿಯ ಅಮೂಲ್ಯವಾದ ಜೀವ ಉಳಿಯಬಹುದಾಗಿತ್ತು. ಆದರೆ ಗಾಡಿಯ ಚಕ್ರಗಳು ಇನ್ನೂ ಮುಂದಕ್ಕೆ ಉರುಳಿದುವು. ಹಿಂದಿನ ಎಡಗಡೆಯ ಚಕ್ರ ಪಿಯರಿಯ ಹಣೆಯ ಮೇಲೆ ಉರುಳಿ ಹೋಯಿತು. ಆರು ಟನ್ನುಗಳಷ್ಟು ಭಾರಹೊತ್ತಿದ್ದ ಗಾಡಿ ಪಿಯರಿಯ ತಲೆಯ ಚಿಪ್ಪನ್ನು ಚೂರು ಚೂರಾಗಿ ಮಾಡಿತು. ಬುದ್ಧಿಸಾಗರವನ್ನೇ ಅಡಗಿಸಿಟ್ಟುಕೊಂಡಿದ್ದ ಪಿಯರಿಯ ಮಿದುಳು ಹತ್ತಾರು ಕಡೆ ದಾರಿಮಾಡಿಕೊಂಡು ಚಿಪ್ಪಿನಿಂದ ಈಚೆಗೆ ಹರಿದುಬಂತು !

ಜನ ಆಕಸ್ಮಿಕ ನಡೆದುಹೋದ ಸ್ಥಳದಲ್ಲಿ ಮುತ್ತಿದರು. ಗಾಡಿ ಹೊಡೆಯುವವನನ್ನು ಬಾಯಿಗೆ ಬಂದಂತೆ ಬೈದರು. ಪೋಲೀಸಿನವರು ಜೀವ ಹಾರಿಹೋದ ಶರೀರವನ್ನು ಸಾಗಿಸಲು ಗಾಡಿಗಳನ್ನೆಲ್ಲ ಕರೆದು ನೋಡಿದರು. ಹೆಣವನ್ನು ಇಟ್ಟುಕೊಳ್ಳಲು ಯಾವ ಗಾಡಿಯೂ ಒಪ್ಪಲಿಲ್ಲ. ಕೊನೆಗೆ ಸ್ಟ್ರೆಚರ್‌ನಲ್ಲಿ ದೇಹವನ್ನು ಪೋಲೀಸ್‌ಠಾಣೆಗೆ ಸಾಗಿಸಿಕೊಂಡು ಹೋದರು. ಪಿಯರಿಯ ಜೇಬಿನಲ್ಲಿದ್ದ ಕಾಗದಗಳಿಂದ ಪಿಯರಿ ಯಾರೆಂಬುದು ನಿಮಿಷ

ಮಾತ್ರದಲ್ಲಿ ಗೊತ್ತಾಯಿತು. ಈ ಸುದ್ದಿ ಎಲ್ಲೆಲ್ಲಿಯೂ ಹಬ್ಬಿತು. ಸತ್ತವನು ದೇಶಕ್ಕೆ ಅಲಂಕಾರ ಪ್ರಾಯನಾದ ದೊಡ್ಡ ವಿಜ್ಞಾನಿ ಎಂದು ತಿಳಿಯುತ್ತಲೇ ಜನ ಕೋಪದಿಂದ ಹುಚ್ಚೆದ್ದರು. ಒಡನೆ ನೂರಾರು ಮುಷ್ಟಿಗಳು ಗಾಡಿಯವನನ್ನು ಹೊಡೆದು ಹಾಕಲು ಎದ್ದುವು. ಪುನಃ ಪೋಲೀಸಿನವರು ಗಾಡಿಯವನನ್ನು ರಕ್ಷಿಸಬೇಕಾಯಿತು.

ಠಾಣೆಯಲ್ಲಿ ಒಬ್ಬ ವೈದ್ಯ ಪಿಯರಿಯ ತಲೆಯನ್ನು ಚೆನ್ನಾಗಿ ತೊಳೆದು ಪರೀಕ್ಷಿಸಿದ. ತಲೆಯ ಚಿಪ್ಪು ಹದಿನಾರು ಚೂರುಗಳಾಗಿದ್ದುವು. ಸೋರ್ಬನ್ನಿಗೆ ಟೆಲಿಫೋನ್ ಮೂಲಕ ಸುದ್ದಿ ಹೋಯಿತು. ಒಂದು ಗಳಿಗೆಯಾಗುವುದರೊಳಗಾಗಿ ಠಾಣೆಗೆ ಬಂದು ತಲುಪಿದ್ದ ಪಿಯರಿಯ ಪ್ರಯೋಗಶಾಲೆಯ ಸಹಾಯಕ, ಶವದ ಮುಂದೆ ಬಿಕ್ಕಿ ಬಿಕ್ಕಿ ಅಳುತ್ತ ನಿಂತಿದ್ದ. ತನಗೆ ತಿಳಿಯದಂತೆಯೇ ಪಿಯರಿಯ ಸಾವಿಗೆ ಕಾರಣನಾಗಿದ್ದ ಗಾಡಿಯವನ ಕೆನ್ನೆಯ ಮೇಲೆ ಕಣ್ಣೀರ ಕೋಡಿ ಹರಿಯುತ್ತಿತ್ತು.

ಈ ಅತ್ಯಂತ ದುಃಖದ ಸುದ್ದಿಯನ್ನು ಮೇರಿಗೆ ತಿಳಿಸಲು ಸರ್ಕಾರದ ಕಡೆಯಿಂದ ಹೋದ ಮನುಷ್ಯ, ಮೆಡೇಮ್ ಕ್ಯೂರಿ ಮನೆಯಲ್ಲಿಲ್ಲವೆಂದು ತಿಳಿದು ಹಿಂದಿರುಗಿ ಬಂದ. ಇಷ್ಟು ಹೊತ್ತಿಗೆ ವಿಶ್ವವಿದ್ಯಾಲಯದ ಅಧಿಕಾರಿಗಳು ಇಬ್ಬರು ಕ್ಯೂರಿಯ ಮನೆಗೆ ಹೋದರು. ಮನೆಯಲ್ಲಿದ್ದ ಪಿಯರಿಯ ತಂದೆ ಡಾಕ್ಟರ್ ಕ್ಯೂರಿ, ದೊಡ್ಡ ಅಧಿಕಾರಿಗಳು ಮನೆಗೆ ಬಂದಿದ್ದನ್ನು ಕಂಡು ಆಶ್ಚರ್ಯಚಕಿತನಾಗಿ ಮುಂದೆ ಬಂದ. ಹೊಸಬರಿಬ್ಬರ ಮುಖಭಾವ ಸಾವಿನ ಸುದ್ದಿಯನ್ನು ಒಡೆದು ಹೇಳುವಂತಿತ್ತು. ಬಂದಿದ್ದವರು ಮೆಡೇಮ್-ಕ್ಯೂರಿ ಮನೆಯಲ್ಲಿಲ್ಲದ್ದನ್ನು ಕೇಳಿ ತಂದಿದ್ದ ಕೆಟ್ಟ ಸುದ್ದಿಯನ್ನು ಹೇಳಲೇ ಇಲ್ಲ. ಆದರೆ ಇವರ ವಿಕೃತ ಮುಖಗಳನ್ನು ನೋಡಿ ಮುದುಕನಿಗೆ ಹೇಗೆ ಹೊಳೆಯಿತೋ ಏನೋ, ಡಾಕ್ಟರ್ ಕ್ಯೂರಿ ಎಚ್ಚರ ತಪ್ಪಿದವನಂತೆ 'ನನ್ನ ಮಗ ಸತ್ತುಹೋದ' ಎಂದು ತಾನೇ ಹೇಳಿದ. ಬಂದಿದ್ದವರು ಆಕಸ್ಮಿಕ ಹೇಗೆ ನಡೆಯಿತು ಎಂದೆಲ್ಲ ವಿವರಿಸಿದರು. ಕೇಳಿ ಮುದುಕ ತಂದೆಯ ಒಣಗಿದ ಸುಕ್ಕುಗಟ್ಟಿದ ಕೆನ್ನೆಗಳ ಮೇಲೆ ಕಣ್ಣೀರು ಕಾಲುವೆಯಾಗಿ ಹರಿಯಿತು.

ಆರು ಗಂಟೆಯ ಹೊತ್ತಿಗೆ ಮೇರಿ ನಗುನಗುತ್ತ ಒಳಕ್ಕೆ ಬಂದಳು. ಒಳಗಿದ್ದವರ ಮುಖಗಳನ್ನು ನೋಡಿ ಭಯಪಟ್ಟಳು. ವಿಶ್ವವಿದ್ಯಾಲಯದ

ಪಾಲ್ ಅಪ್ಪೆಲ್ ಎಲ್ಲವನ್ನೂ ಇನ್ನೊಂದು ಸಲ ವಿವರಿಸಿ ಹೇಳಿದ. ಮೇರಿಗೆ ಅರ್ಥವಾಯಿತೋ ಇಲ್ಲವೋ ಯಾರಿಗೂ ತಿಳಿಯದು. ಕಣ್ಣಲ್ಲಿ ನೀರಿರಲಿಲ್ಲ. ಮುಖದಲ್ಲಿ ಏನೂ ಭಾವವೂ ಇರಲಿಲ್ಲ. ಎಷ್ಟೋಹೊತ್ತು ಸ್ತಬ್ಧಳಾಗಿ ಕುಳಿತಮೇಲೆ ಅವಳ ತುಟಿ ಅಲ್ಲಾಡಿತು. 'ಪಿಯರಿ ಸತ್ತುಹೋದನೆ? ಸತ್ತೇಹೋದನೆ?' ತಿಳಿದ ಸುದ್ದಿ ಸುಳ್ಳಾದೀತೇ ಎಂದು ಮೇರಿಯ ಹೃದಯ ಅಂಗಲಾಚುತ್ತಿತ್ತು. ಅವಳು ಯಾವ ಮಾತನ್ನೂ ಆಡಲಿಲ್ಲ. ಕಣ್ಣೀರು ಸುರಿಸಲಿಲ್ಲ. ಕಂಗೆಟ್ಟ ಮುಖದಿಂದ ಗಂಡನ ದೇಹವನ್ನು ತಂದುಕೊಡಿ ಎಂದು ಕೇಳಿಕೊಂಡಳು. ಐರೀನ್‌ಳನ್ನು ತನ್ನ ಗೆಳತಿಯೊಬ್ಬಳಿಗೆ ಒಪ್ಪಿಸಿ ವಾರ್ಸಾಕ್ಕೆ ತಂತಿಕೊಟ್ಟು ಸುದ್ದಿಯನ್ನು ತಿಳಿಸಿದಳು. ಕೊನೆಗೆ ಕೊಚ್ಚೆಯಾಗಿದ್ದ ತೋಟಕ್ಕೆ ಹೋಗಿ ತೊಡೆಯ ಮೇಲೆ ಮೊಣಕೈ ಊರಿ ಅಂಗೈಗಳಲ್ಲಿ ತಲೆಹೊತ್ತು ಮಾತಾಡದೆ ಪಿಯರಿಯನ್ನು ಕಾಯುತ್ತ ಕುಳಿತಿದ್ದಳು.

ಮೊದಲು ಪಿಯರಿಯ ಜೇಬಿನಲ್ಲಿದ್ದ ಸಾಮಾನುಗಳೆಲ್ಲ ಬಂದುವು. ಗಡಿಯಾರ ಗಾಜು ಕೂಡ ಒಡೆಯದೇ ನಡೆಯುತ್ತಲೇ ಇತ್ತು. ಎಂಟು ಗಂಟೆಯ ಹೊತ್ತಿಗೆ ಪಿಯರಿಯ ಶರೀರದೊಡನೆ ಗಾಡಿ ಬಂತು. ಮೇರಿ ಗಾಡಿಯ ಮೇಲೆ ಹತ್ತಿ, ಹನ್ನೊಂದು ವರ್ಷದಿಂದ ತಾನು ಅಪಾರವಾಗಿ ಪ್ರೀತಿಸಿದ್ದ, ಪಿಯರಿಯ ಶಾಂತವಾದ ಮುಖದ ಕಡೆಗೆ ನೋಡಿದಳು. ಪಿಯರಿಯ ಗೆಳೆಯನೊಬ್ಬ ಜೀವ ಬಿಟ್ಟುಹೋಗಿದ್ದ ಶರೀರವನ್ನು ಒಳಕ್ಕೆ ಹೊತ್ತು ತಂದ. ಮೇರಿ ದೇಹದ ಪಕ್ಕದಲ್ಲಿ ಕುಳಿತಳು. ದೇಹದಲ್ಲಿ ಕಾವಿನ್ನೂ ಆರಿಯೇ ಇರಲಿಲ್ಲ. ಕೀಲುಗಳು ಸೆಡೆತುಕೊಂಡಿರಲಿಲ್ಲ. ಮೇರಿ ಹೃದಯ ಒಡೆದವಳಾಗಿ ಆ ಶಾಂತವಾದ ಮುಖವನ್ನೂ ಕೈಗಳನ್ನೂ ಮುದ್ದಿಟ್ಟಳು

ಮಾರನೆಯ ದಿನ ಪಿಯರಿಯ ಅಣ್ಣ ಜಾಕ್ವೆಸ್ ಕ್ಯೂರಿ ಬಂದ. ಸತ್ತ ತಮ್ಮನ ಪ್ರತಿಮೂರ್ತಿಯಂತೆ ಬಂದು ನಿಂತ ಜಾಕ್ವೆಸ್ ಕ್ಯೂರಿಯನ್ನು ನೋಡಿ ಮೇರಿಯ ತಡೆಗಟ್ಟಿದ್ದ ಕಣ್ಣೀರು ಪ್ರವಾಹದಂತೆ ಉಕ್ಕಿಬಂತು. ಮೇರಿ ಬಿಕ್ಕಿಬಿಕ್ಕಿ ಅತ್ತಳು.

ಪಿಯರಿ ಕ್ಯೂರಿಯ ದುರಂತ ಮರಣದ ಸುದ್ದಿ ಕಾಡುಗಿಚ್ಚಿನಂತೆ ಎಲ್ಲೆಲ್ಲಿಯೂ ಹಬ್ಬಿತು. ದುಃಖಸೂಚಕವಾದ ತಂತಿಗಳು ಕಾಗದಗಳು ದೊರೆಗಳಿಂದ, ಕವಿಗಳಿಂದ, ವಿಜ್ಞಾನಿಗಳಿಂದ, ಗೆಳೆಯರಿಂದ ರಾಶಿ ರಾಶಿ-

ಯಾಗಿ ಬಂದು ಸುರಿದವು. ಪತ್ರಿಕೆಗಳಲ್ಲಿ ಪಿಯರಿಯ ಮರಣದ ಸನ್ನಿವೇಶ ಉದ್ದುದ್ದವಾಗಿ ವರ್ಣಿತವಾಯಿತು. ಪಿಯರಿಯ ಗೆಳೆಯರು, ಪ್ರಯೋಗ ಶಾಲೆಯ ಸಹಾಯಕರು, ಆಳುಗಳು ಕಣ್ಣೀರಿಟ್ಟರು.

ಎಪ್ರಿಲ್ ೨೧ನೆಯ ಶನಿವಾರ ಪಿಯರಿಯ ಶರೀರವನ್ನು ಸಂಸ್ಕಾರ ಕ್ಕೋಸ್ಕರ ಸ್ಮಶಾನಭೂಮಿಗೆ ಕೊಂಡೊಯ್ದರು. ಮೇರಿ ಮಾವನ ಜೊತೆ ಯಲ್ಲಿ ದೇಹದ ಹಿಂದೆ ಹೊರಟಳು. ಮಗನನ್ನು ಕಳೆದುಕೊಂಡಿದ್ದ ಎಪ್ಪತ್ತೊಂ ಬತ್ತು ವಯಸ್ಸಿನ ಹಣ್ಣುಹಣ್ಣು ಮುದುಕನ ತೋಳ ಆಸರೆಯಲ್ಲಿ, ಗಂಡ ನನ್ನು ಕಳೆದುಕೊಂಡು ಒಂಟಿಯಾದ ಈ ಹೆಂಗುಸು ಕಪ್ಪು ಬಟ್ಟೆಯನ್ನು ಮೈತುಂಬ ಧರಿಸಿ ಹೊರಟಳು. ಹೃದಯದಲ್ಲಿ ಇನ್ನು ಡಿಯಾದ ಕತ್ತಲೆ ಮನೆ ಮಾಡಿತ್ತು. ಸ್ಮಶಾನಭೂಮಿಯಲ್ಲಿ ಸತ್ತು ಮಲಗಿದ್ದ ತಾಯಿಯ ಬಳಿ ಮಗನನ್ನೂ ಇಳಿಸಿದರು. ಮೇರಿ ಎಚ್ಚರತಪ್ಪಿದವಳಂತೆ ಏನೂ ಅರ್ಥವಾಗ ದವಳಂತೆ ಅಲುಗಾಡದೆ ನಿಂತಿದ್ದಳು ಹೂವಿನ ಹಾರ ತಂದ ಕೂಡಲೆ, ತಟಕ್ಕನೆ ಅದನ್ನು ತೆಗೆದುಕೊಂಡು ಹೆಣದ ಪೆಟ್ಟಿಗೆಯ ಮೇಲೆ ಉದುರಿಸಿ ದಳು. ಅಲ್ಲಿದ್ದವರು ದುಃಖ ಸೂಚಿಸಿದ್ದಕ್ಕೆ ಒಂದು ಮಾತನ್ನೂ ಉತ್ತರ ಕೊಡದೆ ಮೇರಿ ಮಾವನೊಡನೆ ಮನೆಗೆ ಹಿಂದಿರುಗಿದಳು

ಮೇರಿ ಅತ್ಯಂತ ಪ್ರಿಯವಾದ ವಸ್ತುವೊಂದನ್ನು ಕಳೆದುಕೊಂಡರೂ ಇತರರ ಮುಂದೆ ಆ ವೇದನೆಯ ಉದ್ರೇಕವನ್ನು ತೋರಗೊಡಲಿಲ್ಲ. ಈ ಕಣ್ಣೀರಿಲ್ಲದ ಅಳು, ಮೂಕ ನೋವು ಇತರರಿಗೆ ಅರ್ಥವಾಗುವಂತಿರಲಿಲ್ಲ. ಆದರೆ ಮೇರಿಯ ಹೃದಯ ಮಾತ್ರ ಯಾತನೆಯನ್ನು ತಾಳಲಾರದೆ ಒಡೆದು ಹೋಗುವಂತಿತ್ತು. ಸ್ಮಶಾನಭೂಮಿಯಲ್ಲಿ ಸ್ಮಾರಕಶಿಲೆಯ ಮೇಲೆ ಕಾಣಿಸಿ ಕೊಂಡ 'ಪಿಯರಿ ಕ್ಯೂರಿ' ಎನ್ನುವ ಹೆಸರು ಅಲ್ಲಿ ಹೇಗೆ ಬಂತು ಎಂದು ಮೇರಿ ಯೋಚಿಸುವಳು. ಪಿಯರಿ ಸತ್ತುಹೋದನೆಂದರೆ ಅವಳ ಹೃದಯ ಒಡಂಬಡುತ್ತಿರಲಿಲ್ಲ. ಮನೆಯಲ್ಲಿ ಕುಳಿತಿದ್ದು ಬಾಗಿಲು ಶಬ್ದವಾದರೆ, ಎಂದಿ ನಂತೆ ಮುಖದಲ್ಲಿ ಶಾಂತಿ, ಕರುಣೆಗಳನ್ನು ಬೀರುತ್ತ ಪಿಯರಿ ಒಳಕ್ಕೆ ಬಂದಾ ನೇನೋ ಎಂದು ಮೇರಿ ಭಾವಿಸುವಳು. ಪಿಯರಿ ಸತ್ತ ಹೊಸದರಲ್ಲಿ ಮೇರಿ ತನ್ನ ಹೃದಯವನ್ನು ಭೇದಿಸಿಕೊಂಡು ಬರುತ್ತಿದ್ದ ಮಾತುಗಳನ್ನು, ಯೋಚನೆ ಗಳನ್ನು ಡೈರಿಯಲ್ಲಿ ಬರೆದಿಟ್ಟಿದ್ದಾಳೆ. ಅದರಲ್ಲಿ ತನ್ನ ಹೃದಯದ ತಲ್ಲಣವನ್ನೆಲ್ಲ

ತನ್ನ ಮನಸ್ಸಿನ ಭಾವಗಳನ್ನೆಲ್ಲ ಕಣ್ಮರೆಯಾದ ಪಿಯರಿಯ ಮುಂದೆ ತೋಡಿ ಕೊಂಡಿದ್ದಾಳೆ. ಯಾರಿಂದಲೂ ಆರಿಸಲಾಗದ ತೀರಿಸಲಾಗದ ದುಃಖವನ್ನು ಮೇರಿ ಇತರರ ಮುಂದೆ ಹಲ್ಲುಕಚ್ಚಿಕೊಂಡು ಒಚ್ಚಿಟ್ಟುಕೊಂಡಳು. ಪಿಯರಿ ಸತ್ತ ದಿನದಿಂದ ಮೇರಿ ತನ್ನ ಜೊತೆಗಾರನಿಲ್ಲದ ಪ್ರಪಂಚದ ಸಂಬಂಧ ವನ್ನೆಲ್ಲ ತ್ಯಜಿಸಿದವಳಂತೆ ಇತರರಿಂದ ಬೇರೆಯಾದಳು. ಪಿಯರಿಯಂತಹ ಗಂಡ ನನ್ನು ಕಳೆದುಕೊಂಡ ದುಸ್ಸಹವಾದ ದುಃಖವನ್ನು ಜನಗಳಿಗೆ ಹೇಳಿಕೊಳ್ಳುವು ದಕ್ಕೆ ಮೇರಿಗೆ ಸಾಧ್ಯವಿರಲಿಲ್ಲ. ಅವಳ ಮನಸ್ಸಿನ ತಳಮಳವನ್ನು, ಒಂಟಿ ಯಾಗಿ ಹೋದ ಅವಳ ಬಾಳಿನ ವೇದನೆಯನ್ನು ಪಿಯರಿಯಲ್ಲದೆ ಯಾರು ಅರಿಯಬಲ್ಲರು ? ಇತರರ ಮುಂದೆ ಕಂಬನಿಯ ಸುಳಿವನ್ನು ತೋರಗೊಡದ ಈ ಹೆಂಗುಸು ಧಾರಾಕಾರವಾಗಿ ಕಣ್ಣೀರು ಸುರಿಸುತ್ತ ಜೀವ ಬಿಟ್ಟುಹೋದ ಪಿಯರಿಯನ್ನು ಕರೆದು ತನ್ನ ಹೃದಯದಲ್ಲಿ ಪುನಃ ಸೇರಿಸಿಕೊಂಡಿದ್ದಾಳೆ.

'. . . . ಪಿಯರಿ, ನನ್ನ ಪಿಯರಿ, ಗಾಯವಾದ ಮನುಷ್ಯ ನಿದ್ರೆಯಲ್ಲಿ ಮೈಮರೆತಿರುವಂತೆ, ತಲೆಯ ಗಾಯಕ್ಕೆ ಬಟ್ಟೆ ಕಟ್ಟಿಕೊಂಡು, ನೀನು ಅಲ್ಲಿ ಶಾಂತವಾಗಿ ಮಲಗಿದ್ದೀಯೆ. ನಿನ್ನ ಮುಖ ಶಾಂತವಾಗಿ, ಗಂಭೀರವಾಗಿದೆ.

' ಶನಿವಾರ ಬೆಳಿಗ್ಗೆ ನಿನ್ನನ್ನು ಪೆಟ್ಟಿಗೆಯೊಳಗೆ ಮಲಗಿಸಿದೆವು. ನಾನು ನಿನ್ನ ತಲೆಯ ಕಡೆ ಹಿಡಿದೆತ್ತಿದೆ. ಕೊನೆಯ ಸಲ ತೊರೆಯುತ್ತಿದ್ದ ಮುಖ ವನ್ನು ಮುತ್ತಿಟ್ಟೆವು. ಆಮೇಲೆ ತೋಟದಿಂದ ಕೆಲವು ಹೂಗಳನ್ನೂ, ನೀನು ಒಲವಿನಿಂದ ಪ್ರೀತಿಸುತ್ತಿದ್ದ ನನ್ನ ವಿದ್ಯಾರ್ಥಿ ದಿಸದ ಭಾವಚಿತ್ರವನ್ನೂ ಪೆಟ್ಟಿಗೆಯ ಮೇಲೆ ಇಟ್ಟೆವು. ಎಲ್ಲೋ ಕೆಲವು ಸಲ ನೋಡುವ ಹೊತ್ತಿಗೇ ಯಾರನ್ನು ನೀನು ಮೆಚ್ಚಿ ನಿನ್ನ ಜೀವನದ ಭಾಗಿಯನ್ನಾಗಿ ಮಾಡಿಕೊಳ್ಳಲು ಹಿಂಜರಿಯದೆ ಮುಂದೆ ಬಂದು ಆ ಭಾಗ್ಯ ನೀಡಿದೆಯೋ ಅವಳ ಭಾವಚಿತ್ರ ನಿನ್ನೊಡನೆ ಸಮಾಧಿಯೊಳಕ್ಕೆ ಹೋಗಬೇಕು. ಸರಿಯಾದ ದಾರಿಯಲ್ಲಿ ಹೋಗುತ್ತಿದ್ದೇನೆಂದು ನಿರ್ಧರವಾಗಿ ತಿಳಿದು, ಸ್ವಲ್ಪವೂ ಹಿಂಜರಿಯದೆ ನೀನು ನಡೆದುಕೊಂಡದ್ದು ನಿನ್ನ ಬಾಳಿನಲ್ಲೆಲ್ಲ ಇದೊಂದೇ ಸಲ ಎಂದು ಎಷ್ಟೋ ಸಲ ನೀನು ನನಗೆ ಹೇಳುತ್ತಿದ್ದೆ. ನನ್ನ ಪಿಯರಿ, ನೀನು ತಪ್ಪು ಹೆಜ್ಜೆ ಇಡ ಲಿಲ್ಲ. ನಾವಿಬ್ಬರೂ ಒಟ್ಟಿಗಿರುವುದಕ್ಕೋಸ್ಕರ ಹುಟ್ಟಿದವರು. ನಮ್ಮಿಬ್ಬರ ವಿವಾಹ ಆಗಲೇಬೇಕಾಗಿತ್ತು.

'ಪೆಟ್ಟಿಗೆ ಮುಚ್ಚಿ ಹೋಯಿತು, ನೀನು ಕಣ್ಮರೆಯಾದೆ. ಭಯಂಕರ ವಾದ ಕಪ್ಪು ಒಟ್ಟೆಯಿಂದ ಪೆಟ್ಟಿಗೆಯನ್ನು ನಾನು ಸುತ್ತಿಗೊಡಲಿಲ್ಲ. ಹೂಗಳಿಂದ ಮುಚ್ಚಿ ಅದರ ಪಕ್ಕದಲ್ಲಿ ಕುಳಿತಿದ್ದೆ....

'ನೀನು ಸತ್ತುಹೋದ ಮೇಲಿನ ಭಾನುವಾರ ನಾನು ಮೊಟ್ಟ ಮೊದಲಸಲ ಪ್ರಯೋಗಶಾಲೆಗೆ ಜಾಕ್ವೆಸ್ ಜೊತೆಯಲ್ಲಿ ಹೋದೆ. ನಾವಿಬ್ಬರೂ ಸೇರಿ ಅರ್ಧ ಗುರುತುಮಾಡಿದ್ದ ಗ್ರಾಫಿಗೋಸ್ಕರ ಕೆಲವು ಅಳತೆಗಳನ್ನು ಮಾಡಲು ಹೋದೆ ಮಾಡುವುದು ನನ್ನ ಕೈಲಾಗದೆಹೋಯಿತು.

'ರಸ್ತೆಯಲ್ಲಿ ಯಾವುದೂ ಗಮನಿಸದೆ ಎಚ್ಚರ ತಪ್ಪಿದವಳಂತೆ ನಡೆಯುತ್ತೇನೆ ನಾನು ಆತ್ಮಹತ್ಯ ಮಾಡಿಕೊಳ್ಳುವುದಿಲ್ಲ ಸಾಯಬೇಕೆಂಬ ಅಭಿಲಾಷೆಯೂ ಇಲ್ಲ. ಆದರೂ ಇಲ್ಲಿ ಓಡಾಡುತ್ತಿರುವ ಇಷ್ಟೊಂದು ವಾಹನಗಳಲ್ಲಿ ನನ್ನ ಪ್ರೀತಿಯ ಪಿಯುರಿಗಾದ ಸ್ಥಿತಿಗೆ ನನ್ನನ್ನೂ ತರುವ ವಾಹನ ಯಾವುದೂ ಇಲ್ಲವೆ?'

ಪಿಯುರಿಯ ದೇಹದ ಸಂಸ್ಕಾರವಾದ ಮಾರನೆಯ ದಿನ ಸರಕಾರದವರು ದೇಶದ ಪರವಾಗಿ, ಪಿಯುರಿ ಕ್ಯೂರಿಯ ಹೆಂಡತಿಗೂ ಮತ್ತು ಮಕ್ಕಳಿಗೂ ಒಂದು ವೇತನವನ್ನು ಕೊಡುವುದಾಗಿ ಗೊತ್ತುಮಾಡಿದರು. ಜಾಕ್ವೆಸ್ ಕ್ಯೂರಿ ಇದನ್ನು ಮೇರಿಗೆ ತಿಳಿಸಿದಾಗ ಮೇರಿ 'ನನಗೆ ವೇತನ ಬೇಡ, ನನ್ನ ಮಕ್ಕಳ ಮತ್ತು ನನ್ನ ಹೊಟ್ಟೆಗೆ ಸಂಪಾದಿಸಿಕೊಳ್ಳಲು ಇನ್ನೂ ನನಗೆ ಶಕ್ತಿ ಇದೆ' ಎಂದಳು. ಪುನಃ ಕೆಲಸ ಅವಳನ್ನು ಇಂದ್ರಜಾಲದಂತೆ ಪ್ರಪಂಚಕ್ಕೆ ಕಟ್ಟಿಹಾಕುತಿತ್ತು.

—

ಅಧ್ಯಾಯ ಹದಿನೇಳು

## ಸೋರ್ಬನ್ನಿನಲ್ಲಿ ಪ್ರೊಫೆಸರ್

●

ಈ ಕೆಲಸದ ವಿಷಯದಲ್ಲಿ ಜಾಕ್ವೆಸ್ ಕ್ಯೂರಿ, ಬೊರ್ರ್ಯ ಮೊದಲಾದವರೆಲ್ಲ ಯೋಚಿಸಿದರು. ಪಿಯುರಿ ಅರ್ಧಕ್ಕೆ ಬಿಟ್ಟುಹೋದ ಪ್ರಯೋಗಶಾಲೆಯ ಕೆಲಸವನ್ನು ಪೂರ್ತಿ ಮಾಡುವ ಶಕ್ತಿ ಯಾರಿಗಿದೆ? ಮೇರಿಗೇನೋ

ಪ್ರಯೋಗಶಾಲೆಯಲ್ಲಿ ಪಿಯುರಿಯ ಕೈಕೆಳಗಿನ ಕೆಲಸ ಉಳಿದಿತ್ತು. ಆದರೆ ಈಗ ಪಿಯುರಿಯ ಸ್ಥಾನಕ್ಕೆ ಯಾರು ಬರಬೇಕು ? ಆ ಸಂದರ್ಭದಲ್ಲಿ ಪಿಯುರಿಯ ಸ್ಥಾನವನ್ನು ಅಲಂಕರಿಸುವ ಯೋಗ್ಯತೆ ಮೇರಿಗಲ್ಲದೆ ಯಾರಿಗೂ ಇರಲಿಲ್ಲ. ಸೋರ್ಬನ್ ಹಿಂದಿನ ಪದ್ಧತಿಗಳನ್ನು ಮುರಿದು ಹೆಂಗುಸನ್ನು ಪ್ರೊಫೆಸರ್ ಕೆಲಸಕ್ಕೆ ಸೇರಿಸಿಕೊಳ್ಳಬೇಕಾಗಿತ್ತು. ಪಾಲ್ ಅಪ್ಪೆಲ್ ಮುಂತಾದವರೆಲ್ಲ ಮೇರಿ ಕ್ಯೂರಿಯ ಪರವಾಗಿ ಬಲವಾಗಿ ವಾದಿಸಿದರು. ವಿಶ್ವ-ವಿದ್ಯಾಲಯದವರ ಔದಾರ್ಯದ ಪರಿಣಾಮವಾಗಿ ಸೋರ್ಬನ್ನಿನ ಇತಿಹಾಸದಲ್ಲಿ ಎಂದೂ ನಡೆಯದ ಅದ್ಭುತವಾದ ಘಟನೆಯೊಂದು ನಡೆಯಿತು. ಒಬ್ಬ ಹೆಂಗುಸು ೧೯೦೬ನೇ ಮೇ ತಿಂಗಳಲ್ಲಿ ಸೋರ್ಬನ್ನಿನ ಗಣ್ಯ ಅಧ್ಯಾಪಕ ವರ್ಗದಲ್ಲಿ ಸೇರಿದಳು. ಮೇರಿ ಕ್ಯೂರಿಯ ಸಂಬಳ ವರ್ಷಕ್ಕೆ ಹತ್ತುಸಾವಿರ ಫ್ರಾಂಕುಗಳೆಂದು ಗೊತ್ತಾಯಿತು.

ಪಿಯುರಿಯ ಸಾವಿನ ಸುದ್ದಿಯನ್ನು ಕೇಳಿ ಪ್ಯಾರಿಸ್‌ಗೆ ಬಂದಿದ್ದ ಜಾಕ್ವೆಸ್ ಕ್ಯೂರಿ ಮತ್ತು ಜೋಸೆಫ್ ತಮ್ಮ ಊರಿಗೆ ಹಿಂತಿರುಗಿದರು. ಬ್ರೊನ್ಯ ಡ್ಲುಸ್ಕಿಯೂ ಊರಿಗೆ ಹೋಗುವುದರಲ್ಲಿದ್ದಳು. ಒಂದು ದಿನ ಸಂಜೆ ಮೇರಿ ಅಕ್ಕನಿಗೆ ತನ್ನ ಜೊತೆಯಲ್ಲಿ ಬರಬೇಕೆಂದು ಸನ್ನೆ ಮಾಡಿ, ತನ್ನ ಮಲಗುವ ಕೋಣೆಯ ಕಡೆಗೆ ಹೊರಟಳು. ಬ್ರೊನ್ಯ ಏನೂ ತಿಳಿಯದೆ ತಂಗಿಯನ್ನು ಹಿಂಬಾಲಿಸಿದಳು. ಮೇರಿ ಒಂದು ಮಾತನ್ನೂ ಆಡದೆ, ಬೀರುವಿನ ಬಾಗಿಲು ತೆಗೆದು, ಕಾಗದದಲ್ಲಿ ಸುತ್ತಿದ್ದ ಒಂದು ಗಂಟನ್ನು ತೆಗೆದುಕೊಂಡು ಕೋಣೆಯಲ್ಲುರಿಯುತ್ತಿದ್ದ ಬೆಂಕಿಯ ಬಳಿ ಬಂದು ಕುಳಿತಳು. ಪಕ್ಕದಲ್ಲಿ ಕುಳಿತಿದ್ದ ಬ್ರೊನ್ಯಳ ಕಡೆಗೆ ತಿರುಗಿ ' ಬ್ರೊನ್ಯ, ನೀನು ನನಗೆ ಸಹಾಯ ಮಾಡಬೇಕು ' ಎಂದು ಹೇಳಿ ಹತ್ತಿರದಲ್ಲಿದ್ದ ಕತ್ತರಿಯನ್ನು ಕೈಗೆ ತೆಗೆದುಕೊಂಡಳು. ಬ್ರೊನ್ಯ ತಂಗಿಯ ನಡುಗುವ ಕೈಗಳನ್ನೂ ಕಾಗದದ ಸುರಳಿಯನ್ನೂ ನೋಡುತ್ತಿದ್ದಂತೆಯೇ, ಕಾಗದ ಬಿಚ್ಚಿ, ರಕ್ತ ಹೆಪ್ಪುಗಟ್ಟಿದ, ಕೆಸರು ತುಂಬಿದ ಒಟ್ಟೆಗಳ ಭಯಂಕರವಾದ ಗಂಟೊಂದು ಈಚೆಗೆ ಬಂತು. ಪಿಯುರಿ ದುರಂತ ಮರಣಕ್ಕೊಳಗಾದಾಗ ಧರಿಸಿದ್ದ ಆ ಒಟ್ಟೆಗಳನ್ನು ಮೇರಿ ಹಾಗೆಯೇ ಇಟ್ಟಿದ್ದಳು. ಈಗ ಕಣ್ಣೀರು ಸುರಿಸುತ್ತ ಅವುಗಳಲ್ಲಿ ಒಂದೊಂದನ್ನಾಗಿ ತೆಗೆದು ಕತ್ತರಿಸಿ ಬೆಂಕಿಯಲ್ಲಿ ಹಾಕುತ್ತ ಬಂದಳು. ಇದ್ದಕ್ಕಿದ್ದ

ಹಾಗೆ ಮೇರಿಯು ಕೈ ನಿಂತುಹೋಯಿತು. ಒಟ್ಟಿಗಳ ಸಂದಿಯಲ್ಲಿ ಗಟ್ಟಿಯಾಗಿ ನಿಂತಿದ್ದ ಪಿಯುರಿಯ ಮೆದುಳಿನ ಭಾಗಗಳನ್ನು ನೋಡಿ ಮೇರಿಯು ಜೀವ ತತ್ತರಿಸಿಹೋಯಿತು. ಎಷ್ಟೊಂದು ಪ್ರತಿಭೆಗೆ ಆಸರೆಯಾಗಿದ್ದ ಮೆದುಳು ಎಂತಹ ಸ್ಥಿತಿಗೆ ಬಂದುಹೋಗಿತ್ತು! ಮೇರಿ ಮುಂದೆ ಕತ್ತರಿಸಲಾರದೆ ಪಿಯುರಿಯ ಒಟ್ಟಿಗಳನ್ನು ತೆಗೆದು ಮುತ್ತಿಟ್ಟು ಬಿಕ್ಕಿ ಬಿಕ್ಕಿ ಅತ್ತಳು. ತಂಗಿಯ ದುಸ್ಸಹವಾದ ದುಃಖವನ್ನು ನೋಡಲಾರದೆ ಬ್ರೊನ್ಯ ಒಟ್ಟಿಗಳನ್ನೂ ಕತ್ತರಿಯನ್ನೂ ಅವಳ ಕೈಯಿಂದ ಕಿತ್ತುಕೊಂಡು ತಾನು ಆ ಕೆಲಸವನ್ನು ಮಾಡಿ ಮುಗಿಸಿದಳು ಎಲ್ಲ ಮುಗಿದ ಮೇಲೆ ಮೇರಿ ಬ್ರೊನ್ಯಳ ಸಮೀಪಕ್ಕೆ ಬಂದು, 'ಈಗ ಹೇಳು ಬ್ರೊನ್ಯ, ನಾನು ಹೇಗೆ ಜೀವಿಸಿರಲಿ? ಬದುಕಿರಲೇಬೇಕೆಂದು ನನಗೆ ಗೊತ್ತು. ಆದರೆ ಹೇಗೆ ಬದುಕಿರಲಿ ಹೇಳು?' ಎಂದು ಹೇಳಿ ಅಕ್ಕನ ಮೇಲೆ ಒರಗಿ ಹೃದಯ ಒಡೆದು ಹೋಗುವಂತೆ ಅತ್ತಳು. ತಾಯನ್ನು ಕಳೆದುಕೊಂಡಾಗಿನಿಂದ ತಂಗಿಯನ್ನು ಸಾಕಿ ಬೆಳೆಸಿದ್ದ ಅಕ್ಕ ಕಂಗೆಟ್ಟು ಹೋಗಿದ್ದ ಮೇರಿಯನ್ನು ತಬ್ಬಿಕೊಂಡು ಸಂತೈಸಿ ಹಾಸಿಗೆಯ ಮೇಲೆ ಮಲಗಿಸಿದಳು ಮಾರನೆಯ ದಿನದ ಹೊತ್ತಿಗಾಗಲೇ ಮೇರಿ ಹೃದಯವನ್ನು ಕಲ್ಲುಮಾಡಿಕೊಂಡು ಕಣ್ಣೀರಿನ ಸುಳಿವನ್ನು ತೋರಿಸದೆ ಓಡಾಡುತ್ತಿದ್ದಳು.

ಬೇಸಿಗೆಯಲ್ಲ ಮುಗಿಯುವ ಹೊತ್ತಿಗೆ ಮೆಡೇಮ್ ಕ್ಯೂರಿ ಇಷ್ಟು ದಿನ ಪಿಯುರಿಯೊಡನೆ ವಾಸಮಾಡುತ್ತಿದ್ದ ಮನೆ ಬಿಟ್ಟು ಬೇರೆ ಮನೆಗೆ ಹೋಗಬೇಕೆಂದು ನಿರ್ಧರಿಸಿದಳು. ಈ ಮನೆ ಪಿಯುರಿ ಇಲ್ಲವೆಂಬ ನೋವನ್ನು ನಿಮಿಷ ನಿಮಿಷಕ್ಕೂ ನೆನಪಿಗೆ ತರುತ್ತಿತ್ತು. ಮೇರಿಯೊಡನೆ ಹೊಸ ಪರಿಚಯವಾದಾಗ ಪಿಯುರಿ ಇರುತ್ತಿದ್ದ ಸ್ಥಳವನ್ನು ಮೇರಿ ಈಗ ಗೊತ್ತು ಮಾಡಿದಳು. ಜೊತೆಗೆ ಅದೇ ಸ್ಥಳದಲ್ಲಿ ಪಿಯುರಿ ಸತ್ತು ಮಲಗಿದ್ದ. ಈ ಏರ್ಪಾಡಾದ ಮೇಲೆ ಪಿಯುರಿಯ ತಂದೆ ಡಾಕ್ಟರ್ ಕ್ಯೂರಿ ತನ್ನ ವಿಷಯವಾಗಿ ಸೊಸೆಯೊಡನೆ ಮಾತಾಡಿದ.

'ಪಿಯುರಿ ಹೊರಟು ಹೋದ ಮೇಲೆ, ಮೇರಿ, ಈಗ ನೀನು ಮುದುಕನ ಜೊತೆಯಲ್ಲೇ ಇರಬೇಕಾದುದೇನೂ ಇಲ್ಲ. ನಾನು ಬೇಕಾದರೆ ಬೇರೆ

ಹೋಗುತ್ತೇನೆ. ಇಲ್ಲ, ನನ್ನ ದೊಡ್ಡಮಗನ ಬಳಿಗಾದರೂ ಹೋಗ ಬಹುದು. ಯೋಚಿಸಿ ಹೇಳು.'

'ಇಲ್ಲ, ಅದನ್ನು ನೀನೇ ಯೋಚಿಸಿ ಹೇಳಬೇಕು. ನೀನು ಹೊರಟು ಹೋದರೆ ನನಗೇನೋ ಹಿಂಸೆಯಾಗುತ್ತದೆ. ಆದರೆ ನಿನಗೆ ಯಾವುದು ಇಷ್ಟವೋ ಅದನ್ನು ನೀನೇ ಹೇಳಬೇಕು.'

ಮೇರಿಯ ಹೃದಯದಲ್ಲಿ ಹೊಸ ನೋವೊಂದು ಸುಳಿದು ಹೋಯಿತು. ಮಾವನೂ ಇನ್ನು ತೊರೆದು ಹೋಗುವನಲ್ಲವೆ ? ಆದರೂ ಮುದುಕ ತನ್ನ ಮಗ 'ಜಾಕ್ವೆಸ್‌' ಬಳಿ ಇರುವುದೇ ನನಗೆ ಇಷ್ಟ ಮೇರಿ,' ಎಂದು ನಿರ್ಧಾರ ವಾಗಿ ಉತ್ತರಕೊಟ್ಟ. ಅಡಗಿಸಲು ಪ್ರಯತ್ನಿಸುತ್ತಿದ್ದ ಹೃದಯದ ಉದ್ವೇಗ ಮಾತುಗಳಲ್ಲಿ ಸ್ಪಷ್ಟವಾಗಿ ಮೂಡಿತ್ತು. ಅಲ್ಲಿ ನಿಲ್ಲಲಾರದೆ ಡಾಕ್ಟರ್ ಕ್ಯೂರಿ ತೋಟದ ಕಡೆಗೆ ಹೊರಟುಹೋದ. ಆ ಕಡೆಯಿಂದ ತಾತ ನನ್ನು ಕರೆಯುತ್ತಿದ್ದ ಐರೀನ್‌ಳ ನಗುವಿನ ಕೂಗು ಕೇಳಿಬರುತ್ತಿತ್ತು.

ಇಲ್ಲಿಂದ ಮುಂದೆ ಮೆಡೇಮ್ ಕ್ಯೂರಿ, ಗಂಡ ತನಗೊಪ್ಪಿಸಿ ಹೋದ ಕೆಲಸವನ್ನು ವಿಶ್ವವಿದ್ಯಾಲಯದವರು ಔದಾರ್ಯದಿಂದ ವಹಿಸಿಕೊಟ್ಟ ಕೆಲಸ ವನ್ನು ಪಿಯರಿಯ ಯೋಗ್ಯತೆಗೆ ತಕ್ಕಂತೆ ಮಾಡಿ ಮುಗಿಸುವೆನೆಂದು ನಿರ್ಧರಿ ಸಿದಳು. ಸೋರ್ಬನ್ನಿನಲ್ಲಿ ಪಿಯರಿಯ ಉಪನ್ಯಾಸಗಳು ಮುಂದುವರಿಯ ಬೇಕಾಗಿತ್ತು. ೧೯೦೬ ನೇ ನವೆಂಬರ್ ೫ನೇ ದಿನ ಮಧ್ಯಾಹ್ನ ಮೇರಿ ಕ್ಯೂರಿ, ಸೋರ್ಬನ್ನಿನ ಅಧ್ಯಾಪಕಳಾಗಿ ತನ್ನ ಮೊದಲ ಉಪನ್ಯಾಸವನ್ನು ಕೊಡ ಬೇಕಾಗಿತ್ತು. ಪಿಯರಿ ಎಲ್ಲಿಗೆ ನಿಲ್ಲಿಸಿದ್ದಾನೆಂದು ತಿಳಿಯಲು ಮೇರಿ ಅವನು ಗುರುತು ಮಾಡಿಕೊಂಡಿದ್ದ ನೋಟ್ಸುಗಳನ್ನೆಲ್ಲ ತೆಗೆದು ನೋಡಿದಳು. ಮೆಡೇಮ್ ಕ್ಯೂರಿ ತನ್ನ ಮೊದಲ ಉಪನ್ಯಾಸದಲ್ಲಿ ರೇಡಿಯೋ ಚಟುವಟಿ ಕೆಯ ವಿಷಯವಾಗಿಯೂ ಹೇಳುವಳೆಂದು ಪತ್ರಿಕೆಗಳಲ್ಲಿ ಪ್ರಕಟವಾಯಿತು. ಉಪನ್ಯಾಸ ಮಾಡುವ ಹಜಾರದಲ್ಲಿ ಸುಮಾರು ೧೨೦ ಜನಕ್ಕೆ ಸ್ಥಳವಿದೆ. ಅದರಲ್ಲಿ ೨೦ ಮಾತ್ರ ವಿದ್ಯಾರ್ಥಿಗಳಲ್ಲದೆ ಇತರರಿಗೆ ಸಿಕ್ಕೀತು. ಈ ಸಲ ಮೆಡೇಮ್ ಕ್ಯೂರಿಗೆ ದೊಡ್ಡ ಹಜಾರದಲ್ಲಿ ಉಪನ್ಯಾಸ ಮಾಡಲು ಏಕೆ ಅವಕಾಶ ಕೊಡಕೂಡದು, ಎಂಬ ಕೋರಿಕೆಯೂ ಪ್ರಕಟವಾಯಿತು. ಜನ ೫ನೇ ತಾರೀಖು ಬಂದೀತೆ, ಎಂದು ಹಾತೊರೆಯುತ್ತ ಕಾಯುತ್ತಿದ್ದರು. ಪತ್ರಿಕೆ

ಗಳವರು, ಹೆಂಗುಸರು, ಇತರ ಎಲ್ಲ ಬಗೆಯ ಜನರೂ ವಿಶ್ವವಿದ್ಯಾಲಯದ ಅಧಿಕಾರಿಗಳನ್ನು ಆಹ್ವಾನಕ್ಕಾಗಿ ಮುತ್ತಿಗೆ ಹಾಕಿದರು. ಈ ಅಪೂರ್ವವಾದ ಉತ್ಸಾಹಕ್ಕೆ ನಿಜವಾದ ಕಾರಣ ಭೌತಶಾಸ್ತ್ರದ ಮೇಲಿನ ಅಭಿಮಾನಕ್ಕಿಂತ ಹೆಚ್ಚಾಗಿ ಮೇರಿಯನ್ನು ನೋಡುವ ಕುತೂಹಲ ಮಾತ್ರ ಆಗಿತ್ತು. ರೇಡಿಯೋ ಚಟುವಟಿಕೆಯ ವಿಷಯ ಅಲ್ಲ ಅನೇಕರಿಗೆ ಬೇಕೇ ಇರಲಿಲ್ಲ.

ಪಾಧ್ಯಾಪ್ಯ ಮೇರಿ, ಪಿಯರಿಯ ಸಮಾಧಿಯ ಮುಂದೆ ನಿಂತು ತನ್ನ ಪಿಯರಿಯೊಡನೆ ಮಾತಾಡುತ್ತಿದ್ದಾಗ ಇಲ್ಲಿ ಹಜಾರ ಕಿಕ್ಕಿರಿದು ತುಂಬಿ ಜನ ಅಂಗಳದಲ್ಲಿ, ಓಣಿಯಲ್ಲಿ ಸ್ಥಳಸಾಲದೆ ನಿಂತಿದ್ದರು. ಎಲ್ಲರ ದೃಷ್ಟಿ ಬಾಗಿಲ ಕಡೆಗೆ ನೆಟ್ಟಿತ್ತು. ಒಂದು ಗಂಟೆ ಇಪ್ಪತ್ತೈದು ನಿಮಿಷ ಆಗುವ ಹೊತ್ತಿಗೆ ಹಜಾರದಲ್ಲೆಲ್ಲ ಮಾತಿನ ಶಬ್ದ ತುಂಬಿಹೋಗಿತ್ತು. ಮೆಡೇಮ್ ಕ್ಯೂರಿ ಹೇಗೆ ಒಳಕ್ಕೆ ಬರುವಳು? ಮೊದಲು ಏನೆಂದು ಪ್ರಾರಂಭಿಸುವಳು? ಹೊಸ ಅಧ್ಯಾಪಕರು ಮೊದಲ ಉಪನ್ಯಾಸದಲ್ಲ ತಮ್ಮ ಹಿಂದಿನವರ ವಿಷಯ ಮೊದಲು ಹೇಳುವುದು ವಾಡಿಕೆಯಲ್ಲವೆ? ಮೇರಿ ಕ್ಯೂರಿ ತನ್ನ ಗಂಡನ ವಿಷಯ ಏನು ಹೇಳಬಹುದು? ಎಂತಹ ಅಪೂರ್ವವಾದ ಸನ್ನಿವೇಶ!

ಒಂದೂವರೆಯ ಹೊತ್ತಿಗೆ ಬಾಗಿಲು ತೆಗೆದು ಮೆಡೇಮ್ ಕ್ಯೂರಿ ಸಿಡಿಲಿನಂತಿರುವ ಚಪ್ಪಾಳೆಯ ಮಧ್ಯದಲ್ಲಿ ಒಳಗೆ ಬಂದಳು. ಜನಗಳ ಉತ್ಸಾಹವನ್ನು ಅಂಗೀಕರಿಸುವಂತೆ ಸ್ವಲ್ಪವೇ ತಲೆಬಗ್ಗಿಸಿ ಮೇರಿ ಪ್ರಯೋಗ ಸಾಧನಗಳಿಂದ ತುಂಬಿಹೋಗಿದ್ದ ಮೇಜನ್ನು ಭದ್ರವಾಗಿ ಹಿಡಿದು, ಮನಸ್ಸನ್ನು ಕಲ್ಲು ಮಾಡಿಕೊಂಡು ಶಬ್ದನಿಲ್ಲಲೆಂದು ಕಾದು ನಿಂತಳು. ಕುತೂಹಲ ಕೆರಳಿ, ನೋಟ ನೋಡಲು ಬಂದಿದ್ದ ಜನ ಆ ಗಂಭೀರವಾದ ಮುಖ ನೋಡಿ ಮುಗ್ಧರಾಗಿ ಮೂಕರಾಗಿ ಹೋದರು. ಚಪ್ಪಾಳೆಯ ಶಬ್ದ ಇದ್ದಕ್ಕಿದ್ದ ಹಾಗೆ ನಿಂತುಹೋಯಿತು. ಮೇರಿ ದೃಷ್ಟಿಯನ್ನು ತನ್ನ ಮುಂದೆ ನಿಲ್ಲಿಸಿ ತನ್ನ ಉಪನ್ಯಾಸ ಪ್ರಾರಂಭಿಸಿದಳು.

'ಹತ್ತು ವರ್ಷಗಳಿಂದೀಚೆಗೆ ಭೌತಶಾಸ್ತ್ರದಲ್ಲಿ ಎಷ್ಟೊಂದು ಅಭಿವೃದ್ಧಿಯಾಗಿದೆಯೆಂಬುದನ್ನು ಗಮನಿಸಿದರೆ, ವಿದ್ಯುತ್ತು ಮತ್ತು ವಸ್ತುವಿನ ವಿಷಯವಾಗಿ ನಮ್ಮ ತಿಳಿವು ಎಷ್ಟು ಮುಂದೆ ಹೋಗಿದೆಯೆಂದು ಆಶ್ಚರ್ಯ ಉಂಟಾಗುತ್ತದೆ....'

ಮೆಡೇಮ್ ಕ್ಯೂರಿ ತನ್ನ ಗಂಡ ಎಲ್ಲಿಗೆ ನಿಲ್ಲಿಸಿದ್ದನೋ ಅದರಿಂದ ಸರಿಯಾಗಿ ಮುಂದಿನ ವಾಕ್ಯ ಎತ್ತಿಕೊಂಡಿದ್ದಳು. ಕೇಳುತ್ತ ಕುಳಿತಿದ್ದವರ ಕಣ್ಣಲ್ಲಿ ನೀರೂರಿ ಕೆನ್ನೆಯ ಮೇಲುರುಳಿತು. ಮೇರಿ ಮಾತ್ರ ಉದ್ವೇಗವನ್ನೆಲ್ಲ ಬಿಗಿಹಿಡಿದು ಉಪನ್ಯಾಸ ಮುಂದುವರಿಸಿದಳು ವಿಷಯವನ್ನು ವಿಸ್ತಾರವಾಗಿ ವಿವರಿಸಿದಳು. ಭಾಷಣ ಮುಗಿದ ಮೇಲೆ, ಹಿಂದಿನ ಬಾಗಿಲಿಂದ ಬೇಗ ಬೇಗ ನಡೆದು ಹೊರಟುಹೋದಳು.

—

## ಅಧ್ಯಾಯ ಹದಿನೆಂಟು

### ಒಂಟಿಯಾಗಿ

ಗಂಡನನ್ನು ಕಳೆದುಕೊಂಡ ಒಂಟಿಯಾದ ಮೆಡೇಮ್ ಕ್ಯೂರಿ, ಎರಡು ಮಕ್ಕಳನ್ನೂ ಮುದುಕ ಮಾವನನ್ನೂ ಕಟ್ಟಿಕೊಂಡು ಸಂಸಾರ ಪ್ರಾರಂಭಿಸಿದಳು. ಪಿಯರಿ ಸತ್ತು ತನ್ನ ಕೆಲಸ ಕಾರ್ಯಗಳನ್ನೆಲ್ಲ ಮೇರಿಯ ತಲೆಯ ಮೇಲೆ ಹೊರಿಸಿಯೇ ಹೋಗಿದ್ದ. ಒಂದು ಕಡೆ ಮನೆಯ ಯೋಗಕ್ಷೇಮ, ಹಣ ಸಂಪಾದನೆ, ಇನ್ನೊಂದು ಕಡೆ ಪ್ರೊಫೆಸರ್ ಕೆಲಸ, ಕೊನೆಯದಾಗಿ ವಿಜ್ಞಾನದ ಸಂಶೋಧನೆಗಳು. ಪ್ರಯೋಗಶಾಲೆಯ ಕೆಲಸದಿಂದಂತೂ, ಮೇರಿಗಾಗಲಿ, ಪಿಯರಿಗಾಗಲಿ ಸಾಯುವ ತನಕ ಬಿಡುಗಡೆಯಿರಲಿಲ್ಲ. ಮೇರಿ ಮನೆಯಿಂದ ಪ್ರಯೋಗಶಾಲೆಗೆ ತಲುಪಬೇಕಾದರೆ ಅರ್ಧ ಗಂಟೆ ರೈಲು ಪ್ರಯಾಣ ಮಾಡಬೇಕು. ಬೆಳಗ್ಗೆ ಹೊರಟವಳು ಮನೆಗೆ ಹಿಂತಿರುಗುವುದು ಸಾಯಂಕಾಲಕ್ಕೆ. ಇದರ ಮಧ್ಯೆ ಊಟಕ್ಕೂ ವಿರಾಮವಿರುತ್ತಿರಲಿಲ್ಲ. ಮೇರಿ ಪ್ರಯೋಗಶಾಲೆಯಲ್ಲಿ ಒಂದು ಚೂರು ಬ್ರೆಡ್‌ನ್ನೋ, ಅಥವಾ ಹಣ್ಣನ್ನೋ ತಿಂದು ಊಟ ಮುಗಿಸುವಳು. ಹದಿನಾರು ವರುಷದ ಹಿಂದಿನ ವಿದ್ಯಾರ್ಥಿ ಜೀವನದ ಊಟದ ಕ್ರಮ ಪುನಃ ಪ್ರಾರಂಭವಾಯಿತು. ಒಂಟಿ

ಯಾಗಿದ್ದ ಮೇರಿ ಸ್ಕ್ಲೊಡೊವ್‌ಸ್ಕಿ ಆಗ ೨೪ ವರ್ಷ ಪ್ರಾಯದವಳು. ಬಾಳಿನಲ್ಲಿ ಹೊಸ ಹುರುಪು ಉಕ್ಕಿ ಉತ್ಸಾಹ ಮೊಳೆಯುತ್ತಿದ್ದ ಕಾಲ. ಗಂಡನನ್ನು ಕಳೆದುಕೊಂಡು ಒಂಟಿಯಾದ ಈಗಿನ ಮೆಡೇಮ್ ಕ್ಯೂರಿ ನಲವತ್ತು ವರುಷದವಳು. ಇದ್ದ ಉತ್ಸಾಹವನ್ನೆಲ್ಲ ಹಿಂಗಿಸಬಹುದಾದಷ್ಟು ದುಃಖ ಜೀವನದಲ್ಲಿ ಕಾಲಿಟ್ಟಿತ್ತು. ಬಾಯಿ ಹೇಳಿಕೊಳ್ಳಲಾರದ ಆ ಅಪಾರವಾದ ದುಃಖವನ್ನು ಮನಸ್ಸು ಬಚ್ಚಿಟ್ಟುಕೊಂಡಿತ್ತು. ಹೃದಯ ನೀರವವಾಗಿ ಅಳುತ್ತಿತ್ತು. ಜೀವ ಚೇತರಿಸಿಕೊಳ್ಳಲಾರದಷ್ಟು ಬೆಂಡಾಗಿ ಹೋಗಿತ್ತು. ಇಷ್ಟು ಚಿಂತೆ ಇದ್ದರೂ ಮೇರಿ ಒಬ್ಬರ ಎದುರಿಗೆ ಅಳುತ್ತಿರಲಿಲ್ಲ. ಮಕ್ಕಳ ಎದುರಿಗೂ ಪಿಯರಿಯ ವಿಷಯ ಅವಳು ಎತ್ತುತ್ತಿರಲಿಲ್ಲ. 'ಪಿಯರಿ ನಿಮ್ಮ ತಂದೆ' ಎಂದಷ್ಟು ಹೇಳಬೇಕಾದರೆ ಅವಳಿಗೆ ಸಾಕುಸಾಕಾಗಿ ಹೋಗುತ್ತಿತ್ತು.

ಇಂತಹ ದುಃಖ ಜೀವನವನ್ನು ನುಡುತ್ತಿದ್ದರೂ ಮೇರಿ ತಂದೆಯನ್ನು ಕಳೆದುಕೊಂಡಿದ್ದ ಮಕ್ಕಳ ಶಿಕ್ಷಣದ ಕಡೆಗೆ ಹೆಚ್ಚು ಗಮನಕೊಟ್ಟಳು. ತನ್ನ ಮಕ್ಕಳ ಮನಸ್ಸು ಒಲಿಯುವುದು ವಿಜ್ಞಾನವನ್ನೋ ಅಥವಾ ಇತರ ವಿಷಯಗಳನ್ನೋ ಎಂದು ಸೂಕ್ಷ್ಮವಾಗಿ ಪರಿಶೀಲಿಸಿದಳು. ಇಲ್ಲಿಂದ ೨೫ ವರುಷಗಳ ಮುಂದೆ ತಂದೆ ತಾಯಿಗಳಂತೆ ನೊಬೆಲ್ ಬಹುಮಾನ ಪಡೆಯುವವಳಾಗಿದ್ದ ಐರೀನ್ ಈಗಿನಿಂದಲೇ ಗಣಿತದಲ್ಲಿ ಪರಿಶ್ರಮ ತೋರಿಸುತ್ತಿದ್ದಳು.

೧೯೦೦ರಲ್ಲಿ ಮುದುಕ ಮಾವ ಡಾಕ್ಟರ್ ಕ್ಯೂರಿ ಸತ್ತುಹೋದ ಮೇಲೆ ಮೆಡೇಮ್ ಕ್ಯೂರಿಯ ಜೀವನದ ಅವಲಂಬನವಾಗಿ ಅವಳ ಮಕ್ಕಳು ಮತ್ತು ಪಿಯರಿ ವಹಿಸಿ ಹೋಗಿದ್ದ ಕೆಲಸ ಮಾತ್ರ ಉಳಿದುವು. ಪಿಯರಿ ಕ್ಯೂರಿಯ ಫಲಿಸದೆ ಹೋದ ಹಂಬಲವನ್ನು ಸ್ಮರಿಸಿಕೊಂಡು ಮೇರಿ ಒಂದು ಒಳ್ಳೆಯ ಪ್ರಯೋಗಶಾಲೆ ಕಟ್ಟಿಸಬೇಕೆಂದು ನಿರ್ಧರಿಸಿದ್ದಳು. ತನ್ನನ್ನು ನಂಬಿಕೊಂಡಿದ್ದ ಮಕ್ಕಳ ವಿಷಯದಲ್ಲಂತೂ ಮೇರಿಯ ಜೀವವೆಲ್ಲ ಪ್ರೀತಿಯಿಂದ ತುಂಬಿ ತುಳುಕುತ್ತಿತ್ತು. ಎಂತಹ ಕಷ್ಟಗಳನ್ನೂ ದುಃಖಗಳನ್ನೂ ಉಸಿರೆತ್ತದೆ ಅನುಭವಿಸಿ ಹೆಣಗಬಲ್ಲ ಈ ಪೌರುಷಶಾಲಿಯಾದ ಹೆಂಗುಸಿನ ಹೃದಯ ಮಾತ್ರ ಕರುಣೆಯಿಂದ ತುಂಬಿಕೊಂಡು ತಾಯ್ತನಕ್ಕೆ ಆಸರೆಯಾಗಿತ್ತು. ಮೇರಿ ತನ್ನ ಮಕ್ಕಳನ್ನು ಎಂದೂ ಶಿಕ್ಷಿಸುತ್ತಿರಲಿಲ್ಲ. ಅಳು, ಕೋಪ, ಆ ಮನೆಯಲ್ಲಿ

ಸುಳಿಯುತ್ತಿರಲಿಲ್ಲ. ಒಂದು ಸಲ ಐರೀನ್ ತಪ್ಪು ಮಾಡಿದಳೆಂದು ಮೇರಿ ಅವಳನ್ನು ಶಿಕ್ಷಿಸುವುದಕ್ಕಾಗಿ ಎರಡು ದಿನ ಐರೀನ್ ಒಡನೆ ಮಾತು ಬಿಟ್ಟು ಬಿಟ್ಟಳು. ಆದರೆ ಶಿಕ್ಷೆ ಅನುಭವಿಸಿದವಳು ಮಗಳಿಗಿಂತ ಹೆಚ್ಚಾಗಿ ತಾಯಿಯೇ. ಮೇರಿ ದಿನವೆಲ್ಲ ಏನು ಮಾಡಲೂ ತೋಚದೆ ಕಳವಳಪಡುತ್ತ ಐರೀನ್‌ಗಿಂತ ಹೆಚ್ಚಾಗಿ ತಲ್ಲಣಪಡುತ್ತಿದ್ದಳು.

—

ಅಧ್ಯಾಯ ಹತ್ತೊಂಬತ್ತು

## ಅಭೂತಪೂರ್ವವಾದ ಗೌರವ

ಮೇಧಾವಿಯಾದ ಗಂಡನನ್ನು ಕಳೆದುಕೊಂಡು ಒಂಟಿಯಾದ ಮೇರಿ ಕ್ಯೂರಿ ಕುಗ್ಗಿಹೋಗಿದ್ದುದೇನೋ ನಿಜ. ಆದರೂ ಆ ಅಪೂರ್ವವಾದ ಜೀವದ ಪ್ರತಿಭೆ ಇನ್ನೊಬ್ಬರ ಅವಲಂಬನದಲ್ಲಿ ಮಾತ್ರ ತೋರುವ ಪ್ರತಿಭೆಯಲ್ಲ. ಶಕ್ತಿ ಆ ಹೆಂಗುಸಿನ ಬಡವಾದ ಶರೀರವನ್ನು ಭೇದಿಸಿಕೊಂಡು ಹೊರಹೊಮ್ಮು ತ್ತಿತ್ತು. ಅದನ್ನು ತಡೆಗಟ್ಟುವ ಬಲ ಮೇರಿಗೂ ಇರಲಿಲ್ಲ. ಆದ್ದರಿಂದಲೇ ಸರ್ಕಾರದವರು ವೇತನ ಕೊಡುತ್ತೇವೆಂದಾಗ ಮೆಡೇಮ್ ಕ್ಯೂರಿ ಅದನ್ನು ಒಲ್ಲದೆ ಹೋಗಿ ಆಹಣವನ್ನು ಕೆಲಸಮಾಡಿ ಸಂಪಾದಿಸುತ್ತೇನೆಂದದ್ದು. ಕೆಲ ಸಕ್ಕೆ ಕೈ ಹಾಕಿದ್ದೇ ತಡ, ಅದು ಅದ್ಭುತವಾಗಿ ಬೆಳೆದು ಜರ್ಝರಿತವಾದ ಶರೀರ ವನ್ನು ನುಂಗಿಹಾಕುವಂತೆ ತೋರಿತು. ಮೇರಿಗೆ ಮಾತ್ರ ಶರೀರದ ಕಡೆ ಗಮನ ವಿರಲಿಲ್ಲ. ಮೇರಿಗೆ ಈಗ ವಯಸ್ಸು ನಲವತ್ತನ್ನು ದಾಟಿತ್ತು. ತಲೆ ಕೂದಲು ಇದ್ದಕ್ಕಿದ್ದಂತೆ ಒಟ್ಟಿಗೆ ಬೆಳ್ಳಗಾಗುತ್ತಿತ್ತು. ಸಣ್ಣಗಾಗಿ ರಕ್ತಹೀನವಾಗಿದ್ದ ಮುಖದಲ್ಲಿ ದುಃಖಬರೆದಿತ್ತು. ಇಷ್ಟಾದರೂ ಮೇರಿಯ ಸೌಂದರ್ಯ ಈಗ ಪಕ್ವ ವಾಗಿ ಪರಿಪೂರ್ಣವಾಗಿತ್ತೆಂದು ಹೇಳಬಹುದು. ಕವಿದು ಬರುತ್ತಿದ್ದ ಮುಪ್ಪು ಆ ಮುಖಕ್ಕೆ ಒಂದಪೂರ್ವವಾದ ತೇಜಸ್ಸನ್ನೂ ಪ್ರತಿಭೆಯನ್ನೂ ಕೊಟ್ಟಿತ್ತು.

ಹದಿನಾರು ವರ್ಷಗಳ ಹಿಂದೆ ಉತ್ಸಾಹದಿಂದ ಪ್ಯಾರಿಸ್‌ನಲ್ಲಿ ಕಾಲಿಟ್ಟಿದ್ದ ಇಪ್ಪತ್ತುನಾಲ್ಕು ವರ್ಷದ ಯುವತಿ ಮೇರಿ ಸ್ಕ್ಲೊಡೊವ್‌ಸ್ಕಿಗಿಂತ, ನಲವತ್ತು ವರ್ಷದ ಮೆಡೇಮ್ ಕ್ಯೂರಿ ಈಗ ಹೆಚ್ಚು ಸುಂದರವಾಗಿ, ತೇಜಸ್ವಿನಿಯಾಗಿ ಕಾಣುತ್ತಿದ್ದಳು.

ಮೇರಿಯ ಶರೀರ ಮೊದಲಿಗಿಂತ ಎಷ್ಟೋ ಬಡವಾಗಿತ್ತು. ಶರೀರಬಲ ಅದಕ್ಕೆ ತಕ್ಕಂತೆ ಕುಂದಿಯೇ ಇತ್ತು. ಆದರೂ ಮೆಡೇಮ್ ಕ್ಯೂರಿ ಕೆಲಸದಲ್ಲೇನೂ ಕಡಮೆ ಮಾಡಿರಲಿಲ್ಲ ಪ್ರೊಫೆಸರ್ ಆಗಿ, ಸಂಶೋಧಕಳಾಗಿ, ಪ್ರಯೋಗಶಾಲೆಯ ಅಧಿಕಾರಿಣಿಯಾಗಿ, ಮೇರಿ ನಾಲ್ಕಾರು ಕೆಲಸಗಳನ್ನು ಒಟ್ಟಿಗೆ ಪರಿಪೂರ್ಣವಾಗಿ ನಿರ್ವಹಿಸುವಳು. ಸೋರ್ಬನ್‌ನಲ್ಲಿ ರೇಡಿಯೋ ಚಟುವಟಿಕೆಯ ವಿಷಯವಾಗಿ ಉಪನ್ಯಾಸಗಳು ಆಗಲೇ ಮೊದಲಾಗಿದ್ದುವು. ಮೇರಿ ಆ ವಿಷಯವನ್ನು ಕಲಿಸಲು ಪ್ರಾರಂಭಿಸಿದ್ದುದು, ಪ್ರಪಂಚದಲ್ಲೆಲ್ಲ ಮೊದಲನೆಯವಳಾಗಿ. ಆ ಹಕ್ಕು ಮೇರಿಗಲ್ಲದೆ ಇತರರಿಗೆ ಹೇಗೆ ಸಿಕ್ಕೀತು? ಹದಿನಾರು ವರ್ಷದ ಹಿಂದೆ ಕಾಸಿಗೆ ಗತಿಯಿಲ್ಲದೆ, ಸೋರ್ಬನ್ನಿನಲ್ಲಿ ಕುಳಿತು, ಸಮ್ಮೋಹಿತಳಾಗಿ ಉಪನ್ಯಾಸಗಳನ್ನು ಕೇಳಿದ ಮೇರಿ ಸ್ಕ್ಲೊಡೊವ್‌ಸ್ಕಿ ಮಾಯವಾಗಿದ್ದಳು. ಈಗ ಮೆಡೇಮ್ ಕ್ಯೂರಿ ವೈಜ್ಞಾನಿಕರ ಗುಂಪಿನಲ್ಲಿ ಅಗ್ರಗಣ್ಯಳಾಗಿ, ಸೋರ್ಬನ್ನಿನಲ್ಲಿ ಪ್ರೊಫೆಸರ್ ಆಗಿ, ಪ್ರಪಂಚದಲ್ಲೆಲ್ಲ ಮೊದಲನೆಯವಳಾಗಿ ರೇಡಿಯೋ ಚಟುವಟಿಕೆಯ ವಿಷಯ ಉಪನ್ಯಾಸಗಳನ್ನು ಪ್ರಾರಂಭಿಸಿದ್ದಳು.

೧೯೧೦ರಲ್ಲಿ ಮೆಡೇಮ್ ಕ್ಯೂರಿ ತನ್ನ ಉಪನ್ಯಾಸಗಳನ್ನೆಲ್ಲ ಸೇರಿಸಿ, ರೇಡಿಯೋ ಚಟುವಟಿಕೆಯ ವಿಷಯವಾಗಿ, ೯೭೧ ಪುಟಗಳುಳ್ಳ ಅದ್ವಿತೀಯವಾದ ಪುಸ್ತಕವೊಂದನ್ನು ಬರೆದಳು. ಪುಸ್ತಕದ ಮುಖಪುಟದಲ್ಲಿ ಗ್ರಂಥಕರ್ತಳ ಭಾವಚಿತ್ರಕ್ಕೆ ಬದಲಾಗಿ ಪಿಯರಿ ಕ್ಯೂರಿಯ ಚಿತ್ರಕಾಣಿಸಿಕೊಂಡಿತ್ತು. ಪುಸ್ತಕದ ಮುನ್ನುಡಿಯಲ್ಲಿ ಮೇರಿ ತನ್ನ ಗಂಡನ ವೈಜ್ಞಾನಿಕ ಜೀವನದ ವಿಷಯವಾಗಿ ಬರೆದಿದ್ದಳು.

ಪ್ರಯೋಗಶಾಲೆಯಲ್ಲಿ ಸಂಶೋಧನೆಯ ಕೆಲಸ ಒಂದೇ ಸಮನಾಗಿ ನಡೆದಿತ್ತು. ಮೇರಿ ಕ್ಯೂರಿಯ ಬಳಿ ವಿದ್ಯಾರ್ಥಿಗಳು ತಂಡತಂಡವಾಗಿ ಬಂದು ಸೇರಿದರು. ಮೇರಿ ಕ್ಯೂರಿ ಪುನಃ ಕೆಲವು ಡೆಸ್ಸಿಗ್ರಾಮ್‌ಗಳಷ್ಟು ರೇಡಿಯಂ

ಕ್ಲೋರೈಡನ್ನು ತಯಾರು ಮಾಡಿದಳು. ಇದಾದ ಮೇಲೆ ಶುದ್ಧವಾದ ರೇಡಿಯಂ ಧಾತುವನ್ನೇ ಬೇರ್ಪಡಿಸಿದಳು. ಇಲ್ಲಿಯ ತನಕ ರೇಡಿಯಂ ಬೇರೆಯಾಗಿ ತೋರಿರಲಿಲ್ಲ. ಅದರ ಗುಣವನ್ನೇ ಹೊಂದಿದ್ದ ಆದರ ಲವಣಗಳು ಮಾತ್ರ ತಯಾರಾಗಿದ್ದುವು. ರೇಡಿಯಂ ಲೋಹವನ್ನೇ ಬೇರೆ ತೆಗೆದು ತೋರಿಸುವ ಈ ಅತಿ ಕಷ್ಟವಾದ ಸಾಹಸದ ಕೆಲಸವನ್ನು ಮೇರಿ ಮಾಡಿದ ಮೇಲೆ ಇನ್ನೊಂದು ಸಲ ಮಾಡಲು ಯಾರೊಬ್ಬರೂ ಕೈಹಾಕಲಿಲ್ಲ. ಇದಲ್ಲದೆ ಮೆಡೇಮ್ ಕ್ಯೂರಿ, ರೇಡಿಯಂ ತೂಕವನ್ನು ಅದು ಚೆಲ್ಲುವ ಕಿರಣಗಳನ್ನು ಅಳೆದು, ಕಂಡುಹಿಡಿಯುವ ಒಂದು ಸಾಧನವನ್ನೂ ರಚಿಸಿದಳು.

ಮೆಡೇಮ್ ಕ್ಯೂರಿಯ ಕೀರ್ತಿ, ಕ್ಯೂರಿ ದಂಪತಿಗಳ ಕೀರ್ತಿಗಿಂತ ಹೆಚ್ಚಾಗಿ ಬೆಳೆದು ಹರಡಿತು. ಪ್ರಶಸ್ತಿಗಳೂ, ಗೌರವಗಳೂ, ಹತ್ತಾರು, ನೂರಾರು ಬಂದು ತುಂಬಿದುವು. ೧೯೧೧ರಲ್ಲಿ ಸ್ವೀಡನ್ ದೇಶ ಮೆಡೇಮ್ ಕ್ಯೂರಿಯನ್ನು, ಅಭೂತಪೂರ್ವವಾಗಿ ಗೌರವಿಸಿತು. ೧೯೧೧ನೆಯ ವರ್ಷದ ರಸಾಯನಶಾಸ್ತ್ರದ ನೋಬೆಲ್ ಬಹುಮಾನ ಮೇರಿ ಕ್ಯೂರಿಗೆ ಲಭಿಸಿತು. ಹೆಂಗುಸಾಗಲಿ, ಗಂಡುಸಾಗಲಿ, ಹೀಗೆ ಎರಡನೆಯ ಸಲ ಈ ಬಹುಮಾನವನ್ನು ಪಡೆದುದು, ಇದೇ ಮೊದಲನೆಯ ಸಲ.

ಇಂತಹ ಅಪೂರ್ವವಾದ ಪ್ರತಿಭೆ, ಕೀರ್ತಿ, ಜನಗಳ ಮೆಚ್ಚಿಕೆಯನ್ನು ಪಡೆದದ್ದು ಮಾತ್ರವಲ್ಲ, ಅದರ ಜೊತೆಗೆ ಅನೇಕರಿಗೆ ಅಸೂಯೆ, ಹೊಟ್ಟೆ ಉರಿ ಹುಟ್ಟಿಕೊಂಡಿತು. ಕೆಟ್ಟ ಜನ ಅಸಹಾಯಳಾದ, ದುಃಖದಿಂದ ಕಂದಿ ಹೋಗಿದ್ದ ಹೆಂಗುಸೊಬ್ಬಳನ್ನು ಮುಳುಗಿಸುವ, ಕೊಲ್ಲುವ ಯೋಚನೆ ಮಾಡಿತು. ಈ ಪಿತೂರಿಯಲ್ಲಿ ಹತ್ತಾರು ಕೈಗಳು, ಇಲ್ಲದ ಶಕ್ತಿ ಪಡೆದು ಕೆಲಸ ಮಾಡಿದುವು. ಮೇರಿಯಂತಹ ಪವಿತ್ರಳಾದ ಹೆಂಗುಸು ಅಪವಾದಗಳ ಹೊರೆಯನ್ನು ಹೊರಬೇಕಾಯಿತು. ಮೆಡೇಮ್ ಕ್ಯೂರಿ ತನ್ನ ಧೀಶಕ್ತಿಗನುಸಾರವಾಗಿ ಗಂಡುಸರಲ್ಲಿಯೇ ಸ್ನೇಹ ಬೆಳೆಸಿದ್ದಳು. ಮೇರಿಗೆ ಸರಿಸಮಾನರಾದ ಹೆಂಗುಸರು ಯಾರಿದ್ದಾರು? ಆದರೆ ಈ ಭಾಗದಲ್ಲಿ ಅಸೂಯೆಯ ಜನಗಳಿಗೆ ಒಂದು ಅವಕಾಶ ಸಿಕ್ಕಿತು. ಕೆಟ್ಟ ಜನ ಕೆಟ್ಟ ಮಾತುಗಳನ್ನೇ ಆಡಿದರು. ಫ್ರಾನ್ಸಿನ ಅನೇಕ ಪತ್ರಿಕೆಗಳು ಮೇರಿಯನ್ನು ತುಳಿಯುವುದರಲ್ಲಿ ಉದಾರವಾಗಿ ಸಹಕರಿಸಿದುವು. ಮೆಡೇಮ್ ಕ್ಯೂರಿ ಪರದೇಶದವಳೆಂದೂ, ಫ್ರಾನ್ಸ್

ದೇಶದಲ್ಲಿ ದೊಡ್ಡ ಸ್ಥಾನವೊಂದನ್ನು ಅನ್ಯಾಯವಾಗಿ ಸಂಪಾದಿಸಿರುವಳೆಂದೂ, ಧಾರಾಳವಾಗಿ ಘೋಷಿಸಿದುವು. ಆದರೆ ಇಲ್ಲೂ ಆತ್ಮವಂಚನೆಗೆ, ಮೋಸಕ್ಕೆ ಕಡಮೆಯಿರಲಿಲ್ಲ. ಬೇರೆ ದೇಶದವರು ಮೇರಿಯನ್ನು ಗೌರವಿಸಿದ ಸಮಯ ಗಳಲ್ಲಿ ಅದೇ ಪತ್ರಿಕೆಗಳು, ಮೇರಿಯನ್ನು ದೇಶಕ್ಕೆ ಕೀರ್ತಿಪ್ರಾಯಳೆಂದೂ. ಅಲಂಕಾರಪ್ರಾಯಳೆಂದೂ ಹೊಗಳಿದುವು.

ಇಷ್ಟು ದ್ವೇಷದ ಮಧ್ಯೆ ಮೇರಿಗೆ ನಿಜವಾದ ಸ್ನೇಹಿತರು ಇರಲಿಲ್ಲ ವೆಂದಲ್ಲ. ಅವಳ ಸ್ನೇಹಿತರನೇಕರು, ಅವಳ ವಿದ್ಯಾರ್ಥಿಗಳು ಅವಳನ್ನು ಮನಮುಟ್ಟಿ ಪ್ರೀತಿಸುತ್ತಿದ್ದವರು ಈ ಕಠೋರವಾದ ವರ್ತನೆಯನ್ನೆದುರಿಸಲು ಸಿದ್ಧರಾದರು. ಅಕ್ಕಂದಿರಿಬ್ಬರೂ, ಬ್ರೊನ್ಯ, ಹೆಲಾ ಫ್ರಾನ್ಸಿಗೆ ಓಡಿ ಬಂದರು. ಜೋಸೆಫ್ ಮತ್ತು ಜಾಕ್ವೆಸ್ ಕ್ಯೂರಿ ಮೇರಿಯ ಬೆಂಗಾವಲಾಗಿ ನಿಂತರು.

ಈ ಪ್ರೀತಿಯ ಬೆಂಬಲದಿಂದ ಮೇರಿ ಚೇತರಿಸಿಕೊಂಡರೂ, ಅವಳ ಹೃದಯ ಇಷ್ಟೊಂದು ಕ್ರೂರವಾದ ಅನ್ಯಾಯವನ್ನು ತಡೆಯಲಾರದೆ ಹೋಯಿತು. ಅವಳ ಜೀವ ತತ್ತರಿಸಿಹೋಯಿತು; ಹುಚ್ಚಿಗೆ ತಿರುಗುವಷ್ಟು ರೋಸಿಹೋಯಿತು. ಆತ್ಮಹತ್ಯದ ಯೋಚನೆ ಅಂತರಂಗದಲ್ಲಿ ಸುಳಿದು ಹೋಯಿತು. ಮೇರಿ ಜೀವ ಬೆಂಡಾಗಿ ಕಾಯಿಲೆಬಿದ್ದಳು, ಸಾಯುವಂತೆ ಹಾಸಿಗೆ ಹಿಡಿದಳು. ಈ ಸಲ ಶರೀರ ಚೇತರಿಸಿಕೊಳ್ಳಬೇಕಾದರೆ ದೀರ್ಘ ಕಾಲವೇ ಹಿಡಿಯಿತು.

ಮನಸ್ಸು ಕುಸಿದುಹೋಗಿದ್ದ ಇಂತಹ ಸಮಯದಲ್ಲಿ, ಎಲ್ಲರೂ ಕೈ ಬಿಟ್ಟಾಗ ಆದರಿಸುವ ತಾಯಿಯಂತೆ, ಪೋಲೆಂಡ್, ಮೇರಿಯ ಪ್ರೀತಿಯ ತಾಯ್ನಾಡು, ಅವಳಿಗಾಗಿ ಹಂಬಲಿಸಿ ಕರೆಯುತ್ತಿತ್ತು. ಪೋಲೆಂಡಿನಲ್ಲಿ ರೇಡಿಯೋ ಚಟುವಟಿಕೆಯ ಸಂಶೋಧನೆಗೋಸ್ಕರ ಒಂದು ಪ್ರಯೋಗಶಾಲೆ ಯನ್ನು ಏರ್ಪಡಿಸಿ ಅದರ ಮುಖ್ಯಾಧಿಕಾರಿಣಿಯಾಗಿ ಮೇರಿ ಕ್ಯೂರಿಯನ್ನು ಕರೆಸಬೇಕೆಂದು ಒಂದು ಯೋಚನೆ, ಅಲ್ಲಿನ ವೈಜ್ಞಾನಿಕರಿಗೆ ಹೊಳೆದಿತ್ತು. ೧೯೧೨ರ ಮೇ ತಿಂಗಳಲ್ಲಿ ಪೋಲೆಂಡಿನ ಕೆಲವು ಪ್ರೊಫೆಸರುಗಳು ಪ್ರಾರ್ಥನಾ ಪತ್ರ ಹಿಡಿದು ಮೆಡೇಮ್ ಕ್ಯೂರಿಯ ಮನೆಗೆ ಬಂದರು. ಆ ಪತ್ರದಲ್ಲಿ ಪೋಲೆಂಡ್ ತನ್ನ ಮಗಳನ್ನು ಪಡೆಯಲು ಹಾತೊರೆಯುತ್ತಿತ್ತು.

'....ನಮ್ಮ ಜನ ನಿನ್ನನ್ನು ಮೆಚ್ಚಿ ಗೌರವಿಸುತ್ತಾರೆ. ನೀನು ನಿನ್ನ ಸ್ವಂತ ದೇಶದಲ್ಲಿದ್ದುಕೊಂಡು ಕೆಲಸ ಮಾಡಬೇಕೆಂಬುದೇ ಅವರೆಲ್ಲರ ಆಸೆ. ಅದೇ ಒಟ್ಟು ಜನತೆಯ ತೀವ್ರಾಭಿಲಾಷೆ. ವಾರ್ಸಾದಲ್ಲಿ ನಮ್ಮ ನಡುವೆ ನಿನ್ನನ್ನು ಪಡೆದರೆ, ನಾವು ಶಕ್ತಿಯುಕ್ತರಾಗುತ್ತೇವೆ. ಅನೇಕ ವಿಧವಾದ ದೌರ್ಭಾಗ್ಯದಿಂದ ಕುಸಿದುಹೋಗಿರುವ ನಮ್ಮ ಕಲೆ, ದೃಢವಾಗಿ ಎತ್ತಿ ನಿಲ್ಲುತ್ತದೆ. ನಮ್ಮ ಪ್ರಾರ್ಥನೆ ಸಫಲವಾಗಲಿ. ಬೇಡುತ್ತ ನೀಡಿರುವ ನಮ್ಮ ಕೈಗಳನ್ನು ಬರಿದಾಗಿ ಹಿಂದಿರುಗಿಸಬೇಡ.'

ಈ ಮಮತೆ, ವಿಶ್ವಾಸಗಳನ್ನು ಕಂಡು ಮೇರಿಯ ಮನಸ್ಸಿಗೆ ಎಷ್ಟು ಆಪ್ಯಾಯನವಾಯಿತೋ, ಅದನ್ನು ಅವಳೇ ಬಲ್ಲಳು. ಆದರೂ ಮೇರಿ, ಈ ಬೇಡಿಕೆಯನ್ನು ಒಲ್ಲದೆ ಹೋದಳು. ವಾರ್ಸಾಕ್ಕೆ ಹಾರಿಹೋಗುತ್ತಿದ್ದ ತನ್ನ ಮನಸ್ಸನ್ನು ಅದುಮಿ ಹಿಡಿದು, ತನ್ನ ಕರ್ತವ್ಯ ಎಲ್ಲಿದೆ ಎಂದು ಕಂಡುಕೊಂಡಳು. ಪಿಯುರಿ ಕ್ಯೂರಿ ಹಂಬಲಿಸಿ ಪಡೆಯದೆ ಹೋಗಿದ್ದ ಪ್ರಯೋಗಶಾಲೆಯನ್ನು ಈಚೆಗೆ ೧೯೦೯ರಲ್ಲಿ ಕಟ್ಟಬೇಕೆಂದು ನಿರ್ಧರವಾಗಿತ್ತು. ತನ್ನ ಗಂಡನ ಪ್ರೀತಿಯ ಸ್ಮರಣೆಯನ್ನು ಸದಾ ಮನಸ್ಸಿನಲ್ಲಿ ತಂದುಕೊಂಡು, ಮೇರಿ, ಈ ಪ್ರಯೋಗಶಾಲೆಯ ರಚನೆ ತನ್ನ ಬಾಳಿನ ಪವಿತ್ರವಾದ ಕರ್ತವ್ಯವೆಂದು ಭಾವಿಸಿಕೊಂಡಿದ್ದಳು. ಈಗ ಆ ಭಾವನೆ ಅಲ್ಲಾಡಲಿಲ್ಲ. ಯೋಚನೆ ಮಾಡಿಮಾಡಿ ಕೊನೆಗೆ ಮೇರಿ ತಾನು ಬರುವುದಕ್ಕಾಗುವುದಿಲ್ಲವೆಂದು ವಾರ್ಸಾಕ್ಕೆ ಕಾಗದ ಬರೆದು, ತನ್ನ ಸಹಾಯಕರಾಗಿ ಕೆಲಸ ಮಾಡುತ್ತಿದ್ದ ಇಬ್ಬರು ಪೋಲರನ್ನು ಪ್ರಯೋಗಶಾಲೆಯ ಮೇಲ್ವಿಚಾರಣೆಗೆ ಕಳುಹಿಸಿದಳು.

—

ಮೇರಿಗೆ ತನ್ನ ಸಂಶೋಧನೆಗಳ ವಿಷಯವನ್ನೆಲ್ಲ ವಿವರಿಸುತ್ತ ಹೋಗುವನು. ಒಂದೊಂದು ಸಲ ಜರ್ಮನ್‌ನಲ್ಲಿ, ಇನ್ನೊಂದು ಸಲ ಫ್ರೆಂಚ್‌ನಲ್ಲಿ ಈ ಇಬ್ಬರು ವಿಜ್ಞಾನಿಗಳೂ ವಿಜ್ಞಾನದಲ್ಲಿ ತಲ್ಲೀನರಾಗಿ ಚರ್ಚೆಮಾಡುವರು. ಕಡಿದಾದ ಬಂಡೆಗಳನ್ನು ಹತ್ತುತ್ತ, ಹಳ್ಳಗಳನ್ನು ದಾಟುತ್ತ ಐನ್‌ಸ್ಟೀನ್ ಒಂದೊಂದು ಸಲ ಇದ್ದಕ್ಕಿದ್ದಂತೆ ನಿಂತುಬಿಟ್ಟು, ಮೇರಿಯ ತೋಳನ್ನು ಹಿಡಿದು ಉದ್ವೇಗ ದಿಂದ ಹೇಳುವನು: 'ಗೊತ್ತಾಯಿತೆ? ಲಿಫ್ಟ್‌ನಲ್ಲಿ ಹೋಗುತ್ತಿರುವಾಗ ಇದ್ದಕ್ಕಿದ್ದಂತೆ ಅದು ಶೂನ್ಯಪ್ರದೇಶಕ್ಕೆ ಹೊರಟು ಹೋದರೆ, ಅದರಲ್ಲಿರುವ ಪ್ರಯಾಣಿಕನಿಗೆ ಏನಾಗುತ್ತದೆ ಎಂಬುದೇ ನನಗೆ ಬೇಕಾದುದು.' ಅದರ ವಿಜ್ಞಾನ ಭಾಗ ತಿಳಿಯದ, ಮಕ್ಕಳು, ಈವಾ ಐರೀನ್, ಇಷ್ಟೊಂದು ಗಾಢ ವಾದ ಚಿಂತೆ ಹತ್ತಿರುವುದನ್ನು ನೋಡಿ ಬಿದ್ದುಬಿದ್ದು ನಗುವರು.

ಮೇರಿ ಪುನಃ ತನ್ನ ಪ್ರಯೋಗಶಾಲೆಯ ವಿಷಯದ ಕಡೆ ಗಮನ ಕೊಟ್ಟಳು. ೧೯೦೬ರಷ್ಟು ಹಿಂದೆಯೇ, ಪಿಯರಿ ಕ್ಯೂರಿ ಸತ್ತ ಹೊಸದರಲ್ಲಿ, ಜನಗಳಿಂದ ಪ್ರಯೋಗಶಾಲೆಗೋಸ್ಕರ ಹಣ ಎತ್ತಬಹುದೆಂದು ಸೂಚನೆ ಬಂದಿತ್ತು. ತನ್ನ ಗಂಡ ಅಪಘಾತಕ್ಕೆ ಸಿಕ್ಕಿ ಸತ್ತುಹೋದನೆಂಬ ಕಾರಣದಿಂದ ದುಡ್ಡು ಮಾಡುವುದು ಬೇಡವೆಂದು ಮೇರಿ ದೃಢವಾಗಿ ಹೇಳಿದಳು. ಅದಾದ ನೇಲೆ ಮುಂದೆ ಪ್ರಯತ್ನವೇನೂ ನಡೆಯಲಿಲ್ಲ. ೧೯೦೯ರಲ್ಲಿ ಪಾಸ್ಚ್ಯೂರ್ ಸಂಸ್ಥೆಯ ಮುಖ್ಯಾಧಿಕಾರಿ, ತಾನು ಮೇರಿಗಾಗಿ ಪ್ರಯೋಗಶಾಲೆ ಕಟ್ಟಿ ಕೊಡುವುದಾಗಿ ಸೂಚಿಸಿದ. ಈಗ ವಿಶ್ವವಿದ್ಯಾಲಯದವರು ಎಚ್ಚೆತ್ತರು. ಮೆಡೇಮ್ ಕ್ಯೂರಿಯನ್ನು ಪ್ರೊಫೆಸರ್ ಪದವಿಯಿಂದ ಬಿಟ್ಟುಕೊಡುವಷ್ಟು ಔದಾರ್ಯವನ್ನು ತಾವು ಖಂಡಿತ ತೋರಿಸುವುದಿಲ್ಲ ಎಂದರು. ಆ ಮಾತನ್ನು ಉಳಿಸಿಕೊಳ್ಳುವುದಕ್ಕಾಗಿ ತಾವೇ ಪ್ರಯೋಗಶಾಲೆಯನ್ನು ಕಟ್ಟಲು ಪ್ರಾರಂಭ ಮಾಡಿದರು. ಅದರಲ್ಲಿ ಎರಡು ಭಾಗ ಮಾಡಿ, ಒಂದನ್ನು ರೇಡಿಯೋ ಚಟುವಟಿಕೆಯ ವಿಷಯಕ್ಕೂ, ಇನ್ನೊಂದನ್ನು ಕ್ಯಾನ್ಸರ್ ರೋಗ ಚಿಕಿತ್ಸೆಯ ವಿಷಯಕ್ಕೂ ಮೀಸಲಾಗಿಟ್ಟರು. ಮೊದಲ ಭಾಗದ ಮುಖ್ಯಾಧಿಕಾರಿಣಿ ಯಾಗಿ ಮೆಡೇಮ್ ಕ್ಯೂರಿ ನೇಮಕವಾದಳು.

ಪ್ರಯೋಗಶಾಲೆಯ ಕಟ್ಟಡ ಏಳುವುದಕ್ಕೆ ಪ್ರಾರಂಭವಾಯಿತು. ಮೆಡೇಮ್ ಕ್ಯೂರಿ ದಿನದಿನವೂ ಅಲ್ಲಿಗೆ ಒಂದು ಸಲ ಹೋಗಿ ಅದನ್ನು

ನೋಡಿ ಬರುವಳು. ಕಟ್ಟಡದ ವಿಷಯವಾಗಿ ಚರ್ಚಿಸುವಳು. ದೊಡ್ಡ ದೊಡ್ಡ ಕಿಟಕಿ ಬಾಗಿಲುಗಳಿರಬೇಕು, ಬೆಳಕು, ಗಾಳಿ ಒಳಗೆಲ್ಲ ಚೆಲ್ಲಾಡಬೇಕು, ಎಂದು ಹೇಳುವಳು. ಕಟ್ಟಡದ ತಳಪಾಯ ಹಾಕುವುದಕ್ಕೆ ಎಷ್ಟೋ ಮೊದಲೇ, ಮರಗಳ ಸಸಿಗಳನ್ನು ತರಿಸಿ, ಮೇರಿ ಕ್ಯೂರಿ ತನ್ನ ಕಣ್ಣೆದುರಿಗೇ ಅವುಗಳನ್ನು ನೆಡಿಸಿದಳು. ಮುಂದೆ ಎರಡು ವರ್ಷದ ಮೇಲೆ ಪ್ರಯೋಗಶಾಲೆ ತೆರೆಯುವ ಹೊತ್ತಿಗೆ ಗಿಡಗಳು ಬೆಳೆದು ಮರವಾಗಿ ಹೂ ಬಿಟ್ಟರೆ ಎಷ್ಟು ಚೆನ್ನ ಎನ್ನುವಳು. ಗೋಡೆಗಳು ಏಳುತ್ತಿರುವಾಗ ಮೇರಿ, ಅವುಗಳ ಪಕ್ಕದಲ್ಲಿ ಗುಲಾಬಿ ಗಿಡಗಳನ್ನು ತಾನೇ ಸ್ವಂತವಾಗಿ ನೆಟ್ಟಳು. ಹಳ್ಳ ತಾನೇ ತೋಡಿ, ಮಣ್ಣು ಹದಮಾಡಿ, ಪ್ರತಿದಿನ ನೀರೆರೆದಳು. ಈ ದಿನಗಳಲ್ಲಿ ಮೇರಿಯ ಮನಸ್ಸೆಲ್ಲ ಪ್ರಯೋಗಶಾಲೆಯಲ್ಲಿ ನೆಟ್ಟಿತ್ತು. ಪಿಯರಿ ಯಾವ ಭಾಗ್ಯಕ್ಕಾಗಿ ಹಂಬಲಿಸಿ ಪಡೆಯದೆ ಹೋಗಿದ್ದನೋ ಆ ಭಾಗ್ಯ ಮೇರಿಗೆ ಒದಗಿ ಬಂದದ್ದು ಅವಳ ಯೌವನವೆಲ್ಲ ಮುಗಿದು, ಬಾಳು ಮುಪ್ಪಿನ ಕಡೆಗೆ ಒಲಿಯುತ್ತಿದ್ದಾಗ, ಜೀವನದಲ್ಲಿ ಸಂತೋಷ ಕೈಬಿಟ್ಟು ಹೋದಮೇಲೆ. ಆದರೂ ಮೆಡೇಮ್ ಕ್ಯೂರಿಯಲ್ಲಿ ಎಂದೋ ಜಾರಿಹೋಗಿದ್ದ ಉತ್ಸಾಹ ಈಗ ಮೊಳೆಯುತ್ತಿತ್ತು. ಅವಳಿಗೆ ಜನ, ಮಾಡಿದ್ದ ಅಪಚಾರ ಈಗ ಎಲ್ಲರ ನೆನಪಿನಿಂದ ಅಳಿಸಿಹೋಗಿ ಅವಳ ಕೀರ್ತಿ ಎಲ್ಲೆಲ್ಲಿಯೂ ಹರಡಿತ್ತು.

ಬಿಸಿ ರಕ್ತದ ಎಳೆಯರು, ವಿಜ್ಞಾನಿಗಳು ಮೆಡೇಮ್ ಕ್ಯೂರಿಯ ಸಹವಾಸ ಸಿಕ್ಕಿದರೆ ಸಾಕೆಂದು ಅವಳ ಸುತ್ತಲೂ ಗುಂಪು ಕೂಡಿ ಉತ್ಸಾಹ ಉಕ್ಕಿಸುತ್ತಿದ್ದರು. ಅವಳಿಗೆ ಯಾವ ವಿಧವಾದ ಸಹಕಾರ ನೀಡುವುದಕ್ಕೂ ಅವರು ಸಿದ್ಧರಾಗಿದ್ದರು.

ಒಂದು ದಿನ ಪ್ರಯೋಗಶಾಲೆಯಲ್ಲಿ ಮೇರಿ ಪ್ರಯೋಗವೊಂದರಲ್ಲಿ ತಲ್ಲೀನಳಾಗಿದ್ದಾಗ ಅವಳ ಆಳು ಬಂದು ಹಳೆಯ ಷೆಡ್‌ನ್ನು ಒಡೆದುಹಾಕುವರೆಂದು ಉದ್ವೇಗದಿಂದ ಹೇಳಿದ. ಆ ಮನುಷ್ಯ ಹಿಂದೆ ಪಿಯರಿ ಕ್ಯೂರಿಯ ಕಾಲದಲ್ಲಿ ಪ್ರಯೋಗಶಾಲೆಯ ಆಳಿನ ಕೆಲಸ ಮಾಡುತ್ತಿದ್ದವನು. ಮೆಡೇಮ್ ಕ್ಯೂರಿ ಅವನನ್ನೂ ಕರೆದುಕೊಂಡು ಕೊನೆಯ ಸಲ ಆ ಸ್ಥಳವನ್ನು ನೋಡಲು ಹೊರಟಳು. ಆ ಜೀರ್ಣವಾದ ಪ್ರಯೋಗಶಾಲೆ, ಇಬ್ಬರು ವಿಜ್ಞಾನಿಗಳು ಹೋರಾಡಿ ಹಣಗಿ ಯಶಸ್ವಿಗಳಾದ ಸ್ಥಳ. ಮೇರಿ ಒಳಗೆ ಹೋಗಿ ನೋಡಿ

ದಳು. ಎಲ್ಲ ಮೊದಲಿದ್ದಂತೆಯೇ ಇತ್ತು. ಕರಿಯ ಹಲಗೆಯ ಮೇಲೆ ಪಿಯ ರಿಯ ಕೈಬರೆಹ ಅಳಿಸದೆ ಹಾಗೆಯೇ ಇತ್ತು. ಮೇರಿಯ ಮನಸ್ಸಿಗೆ ಬಾಳು ಹನ್ನೆರಡು ವರ್ಷ ಹಿಂದೆ ಸರಿದಂತಾಯಿತು. ಆ ಅತ್ಯಂತ ಪರಿಚಯದ ಸ್ಥಳ ದಲ್ಲಿ ನಿಂತಿದ್ದ ಹಾಗೆಯೇ, ತನ್ನ ಪಿಯರಿ, ಕಣ್ಣುಗಳಲ್ಲಿ ಶಾಂತಿ ಬೀರುತ್ತ ಬಾಗಿಲು ತೆರೆದು ಒಳಕ್ಕೆ ಬಂದಾನು ಎನ್ನಿಸಿತು.

ಮೇರಿ ಇಟ್ಟ ಪ್ರತಿಯೊಂದು ಹೆಜ್ಜೆಯಲ್ಲಿ, ಕೈಕೊಂಡ ಪ್ರತಿಯೊಂದು ಕಾರ್ಯದಲ್ಲಿ ಗೆಲವು ಅವಳಿಗಾಗಿ ಕಾದಿರುತ್ತಿತ್ತು. ೧೯೧೪ನೇ ಜುಲೈ ಹೊತ್ತಿಗೆ ಪಿಯರಿ ಕ್ಯೂರಿಯ ಹೆಸರಿನ ಪ್ರಯೋಗಶಾಲೆ ಕಟ್ಟಿ ಮುಗಿಯಿತು. ಸಾಧನಗಳನ್ನೆಲ್ಲ ಅಲ್ಲಿಗೆ ಸಾಗಿಸುವುದೊಂದು ಬಾಕಿ ಉಳಿಯಿತು.

—

## ಅಧ್ಯಾಯ ಇಪ್ಪತ್ತೊಂದು

### ಮಹಾಯುದ್ಧ

ಕ್ಯೂರಿ ಪ್ರಯೋಗಶಾಲೆ ಕಟ್ಟಿ ಸಿದ್ಧವಾಗುವ ಹೊತ್ತಿಗೆ ೧೯೧೪ರ ಮಹಾಯುದ್ಧ ಪ್ರಾರಂಭವಾಯಿತು. ಬೇಸಗೆಯ ರಜದ ದಿನಗಳಿಗೋಸ್ಕರ ಮೇರಿ ಬ್ರಿಟನಿಯಲ್ಲಿ ಒಂದು ಸಣ್ಣ ಮನೆಯನ್ನು ಬಾಡಿಗೆಗೆ ತೆಗೆದುಕೊಂಡಿ ದ್ದಳು. ಮಕ್ಕಳಿಬ್ಬರೂ ಆಗಲೇ ಅಲ್ಲಿಗೆ ಹೊರಟುಹೋಗಿದ್ದರು. ಮೇಡೇಮ್ ಕ್ಯೂರಿ ವಿಶ್ವವಿದ್ಯಾಲಯದ ಕೆಲಸ ಮುಗಿಸಿಕೊಂಡು ಆಗಸ್ಟನಲ್ಲಿ ಮಕ್ಕ ಳನ್ನು ಸೇರುವುದರಲ್ಲಿದ್ದಳು. ಆದರೆ ಆಷ್ಟರಲ್ಲಿ ಜರ್ಮನರು ಫ್ರಾನ್ಸ್‌ದೇಶ ವನ್ನು ಪ್ರವೇಶಿಸಿದ್ದರು. ಯುದ್ಧ ಮೊದಲಾಯಿತು. ಶತ್ರುಗಳು ಪ್ಯಾರಿಸ್ ಕಡೆಗೆ ಒತ್ತಿಕೊಂಡು ಬರುತ್ತಿದ್ದರು. ಪ್ಯಾರಿಸ್ ಪತನವಾಗಿ ಜರ್ಮನರು ಅದನ್ನು ಆಕ್ರಮಿಸಿಕೊಳ್ಳುವ ಸಮಯ ಒದಗಬಹುದಾದ ಆ ಸಂದರ್ಭದಲ್ಲಿ ತಾನು ಏನು ಮಾಡಬೇಕೆಂದು ಮೇರಿ ಯೋಚಿಸಿದಳು. ಕ್ಷಣಮಾತ್ರದಲ್ಲಿ ಮನಸ್ಸಿನಲ್ಲ ನಿರ್ಧರಿಸಿಕೊಂಡಳು: ಎಂತಹ ಸಂದರ್ಭ ಬಂದರೂ ಪ್ಯಾರಿಸ್

ಬಿಟ್ಟುಹೋಗಕೂಡದು, ಕ್ಯೂರಿ ಪ್ರಯೋಗಶಾಲೆ ಬರಿದಾಗಕೂಡದು. ಪ್ರಯೋಗಶಾಲೆಯಲ್ಲಿ ಕೆಲಸ ಮಾಡುತ್ತಿದ್ದ ತನ್ನ ಜೊತೆಯವರೆಲ್ಲ ಸೈನ್ಯಕ್ಕೆ ಸೇರಿರುವಾಗ ತಾನೊಬ್ಬಳಾದರೂ ಇದ್ದು ತನ್ನ ಪ್ರೀತಿಯ ಪ್ರಯೋಗಶಾಲೆಯನ್ನು ಉಳಿಸಿಕೊಳ್ಳಬೇಕು. ಶತ್ರುಗಳು ತನ್ನನ್ನು ನೋಡಿಯಾವರೂ ಅದನ್ನು ಹಾಳುಮಾಡದೆ ಬಿಟ್ಟುಕೊಟ್ಟಾರೇನೋ ಎಂದು ಮೇರಿ ಕ್ಯೂರಿ ಭಾವಿಸಿಕೊಂಡಳು.

ಇಷ್ಟೆಲ್ಲ ಯೋಚಿಸಿ, ಮೇರಿ, ಮಕ್ಕಳೊಡನೆ ಸುರಕ್ಷಿತವಾಗಿರಬಹುದಾದ ಸಂದರ್ಭವನ್ನು ಬಿಟ್ಟುಕೊಟ್ಟು ಗಂಡುಸಿನಂತೆ ಅಪಾಯಕ್ಕೆ ಎದೆಕೊಟ್ಟು ಪ್ಯಾರಿಸ್‌ನಲ್ಲಿ ಉಳಿದಳು. ಮಕ್ಕಳ ಬಳಿ ಇರಬೇಕೆಂದು ಹಾತೊರೆಯುತ್ತಿದ್ದ ತಾಯಿ ಹೃದಯವನ್ನು ಬಲವಂತದಿಂದ ಮರೆಯಲು ಪ್ರಯತ್ನಪಟ್ಟಳು. ಮಕ್ಕಳ ಬಳಿಗೆ ದಿನದಿನವೂ ಹೋಗುತ್ತಿದ್ದ ತಾಯಿ ಕಾಗದಗಳಲ್ಲಿ ಈ ನೋವು ಎದ್ದು ಕಾಣುತ್ತದೆ. ಒಂದು ಕಾಗದದಲ್ಲಿ ಮೇರಿ ಹೀಗೆ ಬರೆದಿದ್ದಾಳೆ:

'....ಶನಿವಾರ, ನೀನು ಬರೆದ ಮಧುರವಾದ ಕಾಗದ ಈಗ ತಾನೇ ತಲುಪಿತು. ನಿನ್ನನ್ನು ಮುದ್ದಿಸಬೇಕೆಂದು ಹೃದಯ ಹಾತೊರೆದು ತಡೆಯಲಾರದೆ ಅತ್ತುಬಿಟ್ಟೆ.

'ಈಗಿನ ಸ್ಥಿತಿ ಪೂರ್ತಿ ಸರಿಯಾಗಿಲ್ಲ. ನನ್ನ ಹೃದಯವೆಲ್ಲ ಭಾರವಾಗಿದೆ. ಅಂತರಂಗ ಕಲಕಿಹೋಗಿದೆ. ಅಸಾಮಾನ್ಯ ಧೈರ್ಯ ನಮಗೆ ಬೇಕು. ಆ ಧೈರ್ಯಕ್ಕೆ ಸ್ವಲ್ಪವೂ ಲೋಪ ಬರದಿರಲಿ. ಈ ಕೆಟ್ಟ ದಿನಗಳು ಕಳೆದು ಹೋದ ಮೇಲೆ ಒಳ್ಳೆಯ ಕಾಲ ಬರುವುದೆಂದು ಮನಸ್ಸಿಗೆ ಖಚಿತಮಾಡಿಕೊಳ್ಳೋಣ. ನನ್ನ ಪ್ರೀತಿಯ ಮಕ್ಕಳೆ, ಈ ನಂಬಿಕೆಯನ್ನು ಮನಸ್ಸಿನಲ್ಲಿಟ್ಟುಕೊಂಡು ನಿಮ್ಮನ್ನು ಆಲಂಗಿಸಿಕೊಳ್ಳುತ್ತೇನೆ.'

ತನ್ನ ಇಬ್ಬರು ಹೆಣ್ಣುಮಕ್ಕಳನ್ನು ಜಾಕ್ವೆಸ್ ಕ್ಯೂರಿಗೆ ಒಪ್ಪಿಸಿಬಿಟ್ಟು ಮೇರಿ ಪ್ಯಾರಿಸ್‌ನಲ್ಲಿ ನಿಂತಳು. ಸುಮಾರು ಹತ್ತು ಲಕ್ಷ ಫ್ರಾಂಕುಗಳಷ್ಟು ಬೆಲೆ ಬಾಳುವ ಒಂದು ಗ್ರಾಮ್ ರೇಡಿಯಂ ಮೇರಿಯ ಬಳಿ ಇತ್ತು. ಪ್ರಯೋಗಶಾಲೆಗೆ ಸೇರಿದ ಈ ಅಮೂಲ್ಯವಾದ ವಸ್ತುವನ್ನು ಹೇಗಾದರೂ

ಜೋಪಾನ ಮಾಡಬೇಕೆಂದು ಮೇರಿ ಅದನ್ನೂ ತೆಗೆದುಕೊಂಡು ಬೋರ್ಡೋ ಕಡೆಗೆ ಹೊರಟಳು. ಅದನ್ನು ಇತರರ ಕೈಗೆ ಕೊಡುವ ಧೈರ್ಯವಿಲ್ಲದೆ ತಾನೇ ಹೊರಟಳು. ಸರ್ಕಾರಿ ಅಧಿಕಾರಿಗಳು ಮತ್ತು ಪಟ್ಟಣದ ಅನೇಕ ಮುಖ್ಯಸ್ಥರು ಹೊರಟಿದ್ದ ರೈಲಿನಲ್ಲಿ ತಾನೂ ತನ್ನ ಹೊರೆಯೊಡನೆ ಹತ್ತಿಕೊಂಡಳು. ಪ್ಯಾರಿಸ್ ಬರಿದಾಗಿ ಹೋಗುತ್ತಿತ್ತು. ಬೋರ್ಡೋದಲ್ಲಿ ಜನಸಂದಣಿ ವಿಪರೀತವಾಗಿತ್ತು. ಒಂದು ಹೋಟಲಾಗಲಿ ಮನೆಯಾಗಲಿ ಸಿಕ್ಕುತ್ತಿರಲಿಲ್ಲ. ಸ್ಟೇಷನ್‌ನಲ್ಲಿ ಇಳಿದ ಮೇರಿ ತನ್ನ ರೇಡಿಯಂನ್ನು ಅಡಗಿಸಿಟ್ಟುಕೊಂಡಿದ್ದ ಸೀಸದ ಪೆಟ್ಟಿಗೆಯನ್ನು ಇನ್ನೂ ಮುಂದಿಟ್ಟುಕೊಂಡು ರಾತ್ರಿಯಾದರೂ ನಿಂತೇ ಇದ್ದಳು. ಜನದ ಗುಂಪು ಅವಳನ್ನು ತಳ್ಳುತ್ತ ದಬ್ಬುತ್ತ ನುಗ್ಗುತ್ತಲೇ ಇತ್ತು. ಸೀಸದ ಪೆಟ್ಟಿಗೆಯನ್ನು ಹೊರುವ ತ್ರಾಣವಿಲ್ಲದೆ ಬೆಳಗೂ ಹಾಗೆಯೇ ನಿಂತಿರಬೇಕಾಗಿದ್ದ ಆ ಸಂದರ್ಭದಲ್ಲಿ ಮೇರಿಯ ಜೊತೆಯ ಪ್ರಯಾಣಿಕನೊಬ್ಬ ಅವಳ ಸಹಾಯಕ್ಕೆ ಬಂದ. ಅವಳಿಗೆ ಒಂದು ಕೋಣೆಯನ್ನು ಗೊತ್ತುಮಾಡಿಕೊಟ್ಟ.

ಮಾರನೆಯ ದಿನ ಮೇರಿ ರೇಡಿಯಂನ್ನು ಬ್ಯಾಂಕಿನ ಸುರಕ್ಷಿತವಾದ ನೆಲಮಾಳಿಗೆಯಲ್ಲಿಡಿಸಿ ಹಗುರವಾದ ಹೃದಯದೊಡನೆ ಯುದ್ಧ ಹತ್ತಿರ ಹತ್ತಿರಕ್ಕೆ ಬರುತ್ತಿದ್ದ ಪ್ಯಾರಿಸ್ ಕಡೆಗೆ ಹೊರಟಳು. ಬೋರ್ಡೋ ಕಡೆಗೆ ಬರುತ್ತಿದ್ದಾಗ ಮೇರಿಯನ್ನು ಅಷ್ಟಾಗಿ ಯಾರೂ ಗಮನಿಸಿರಲಿಲ್ಲ. ಆ ಸಮಯದಲ್ಲಿ ಎಲ್ಲರೂ ಪ್ಯಾರಿಸ್‌ನಿಂದ ದಿಕ್ಕೆಟ್ಟು ಓಡುವವರೇ! ಆದರೆ ಈಗ ಪುನಃ ಪ್ಯಾರಿಸ್ ಕಡೆಗೆ ಹೊರಟು ನಿಂತಿರುವ ಈ ವ್ಯಕ್ತಿವಿಶೇಷವನ್ನು ನೋಡಿ ಜನ ಬೆರಗಾಗಿ ಅವಳ ಸುತ್ತ ಗುಂಪು ಸೇರಿದರು. ಮೇರಿ ತಾನು ಯಾರೆಂದು ಪತ್ತೆ ಕೊಡದೆ ಪ್ಯಾರಿಸ್‌ನಲ್ಲಿ ಅಷ್ಟೇನೂ ಭಯವಿಲ್ಲವೆಂದು ಮಾತ್ರ ಅವರಿಗೆ ತಿಳಿಸಿದಳು. ಪ್ಯಾರಿಸ್ ಕಡೆಗೆ ಹೋಗುತ್ತಿದ್ದವರೆಲ್ಲ ಬರೀ ಸೈನಿಕರು. ಮೇರಿ ಅವರ ಗಾಡಿಯಲ್ಲಿ ಹತ್ತಿದಳು. ಹಿಂದಿನ ದಿನದಿಂದ ಅವಳಿಗೆ ಊಟವಿರಲಿಲ್ಲ. ಗಾಡಿಯಲ್ಲಿ ಸೈನಿಕನೊಬ್ಬ ಕೊಟ್ಟ ಬ್ರೆಡ್ಡನ್ನು ಮೇರಿ ಕೃತಜ್ಞತೆಯಿಂದ ತೆಗೆದುಕೊಂಡಳು. ಪ್ಯಾರಿಸ್‌ನಲ್ಲಿ ಸುದ್ದಿ ಗೊತ್ತಾಯಿತು. ಮುಂದುವರಿದು ಬರುತ್ತಿದ್ದ ಶತ್ರುಗಳನ್ನು ತಡೆದು ನಿಲ್ಲಿಸಿ ಫ್ರೆಂಚರು ಮಾರ್ನ್ ಬಳಿ ಯುದ್ಧ ಪ್ರಾರಂಭ ಮಾಡಿದ್ದರು. ಇನ್ನು ಕೆಲವು ದಿನಗಳೊಳಗಾಗಿ, ರಣ

ಕ್ಷೇತ್ರ ಒದಲಾಗಿ, ಪ್ಯಾರಿಸ್‌ಗೆ ಭಯ ತಪ್ಪಿ, ಮೇರಿಗೆ ಪ್ರಯೋಗಶಾಲೆ ಉಳಿಯುವುದೆಂಬ ಸಂತೋಷ ಹೃದಯದಲ್ಲಿ ಉಕ್ಕಿತು.

ಯುದ್ಧ ಪ್ರಾರಂಭವಾದ ಕೂಡಲೆ ಮೇರಿ, ಪಿಯರಿ ಕ್ಯೂರಿಯ ತಾಯ್ನಾಡಾದ ಫ್ರಾನ್ಸ್ ತನ್ನದೂ ಹೌದೆಂದು ನಂಬಿ, ಯಾವ ರೀತಿಯಲ್ಲಾದರೂ ದೇಶಸೇವೆ ಮಾಡಬೇಕೆಂದು ನಿರ್ಧರಿಸಿ, ವೈದ್ಯಕೀಯ ಸಂಸ್ಥೆಗೆ ತನ್ನ ಹೆಸರು ಕೊಟ್ಟಳು. ವಿಜ್ಞಾನಿ ಇಲ್ಲೊಂದು ಹೊಸ ಸೇವಾಕ್ಷೇತ್ರವನ್ನು ಕಂಡುಕೊಂಡಳು. ಈ ಅಭೂತಪೂರ್ವವಾದ ಸೇವೆಯನ್ನು ಮೇರಿಯಲ್ಲದೆ ಇತರರು ಮಾಡಲು ಸಾಧ್ಯವಿರುತ್ತಿರಲಿಲ್ಲ.

೧೮೯೫ರಲ್ಲಿ ರಾಂಜನ್ ಎಕ್ಸ್‌ರೇಯನ್ನು ಕಂಡುಹಿಡಿದಮೇಲೆ, ಅದಕ್ಕೆ ವೈದ್ಯಕೀಯ ಚಿಕಿತ್ಸೆಗಳಲ್ಲಿ ಅತಿ ಪ್ರಾಮುಖ್ಯವಾದ ಸ್ಥಾನ ಸಿಕ್ಕಿತು. ಆದರೂ ೧೯೧೪ರಲ್ಲಿ ಕೂಡ ಎಕ್ಸ್‌ರೇಯನ್ನು ಉತ್ಪತ್ತಿಮಾಡುವ ಸಾಧನ ಫ್ರಾನ್ಸ್ ದೇಶದಲ್ಲಿ ಇದ್ದದ್ದು ಕೇವಲ ಕೆಲವೇ ಆಸ್ಪತ್ರೆಗಳಲ್ಲಿ. ಯುದ್ಧ ಮೊದಲಾದ ಮೇಲಂತೂ ಗಾಯಗೊಂಡ ಸೈನಿಕರಿಗೆ ಚಿಕಿತ್ಸೆ ಮಾಡಲು ಈ ಸಾಧನ ಎಲ್ಲ ಆಸ್ಪತ್ರೆಗಳಲ್ಲೂ ಬೇಕಾಗಿತ್ತು. ಆದರೆ ಎಕ್ಸ್‌ರೇ ಪ್ರಚಾರ ಕಡಮೆಯಾಗಿ ಇದ್ದುದರಿಂದ ಅನೇಕ ಡಾಕ್ಟರುಗಳಿಗೂ ಕೂಡ ಈ ಸಾಧನದ ಆವಶ್ಯಕತೆ ಪೂರ್ತಿಯಾಗಿ ಅರ್ಥವಾಗುತ್ತಿರಲಿಲ್ಲ ಬಂದೂಕದ ಗುಂಡಾಗಲಿ, ಷೆಲ್ ಚೂರಾಗಲಿ ಸೈನಿಕನ ಶರೀರದಲ್ಲಿ ಉಳಿದುಹೋಗಿದೆಯೆಂದು ತಿಳಿದು ಬಂದಾಗ ಅವುಗಳನ್ನು ತೆಗೆಯುವುದಕ್ಕಾಗಿ ಶರೀರದ ಆ ಭಾಗಗಳನ್ನು, ಮಾಂಸಖಂಡಗಳನ್ನು ಬಗೆದು, ಕೆದಕಿ ಹುಡುಕುವುದು ಈ ಡಾಕ್ಟರುಗಳಿಗೆ ಚೆನ್ನಾಗಿ ಅಭ್ಯಾಸವಾಗಿಹೋಗಿತ್ತು. ಎಕ್ಸರೇ, ಆ ಸಮಯದಲ್ಲಿ ಎಂತಹ ಅದ್ಭುತವಾದ ಕೆಲಸ ಮಾಡಬಲ್ಲದೆಂಬುದು ಅವರಲ್ಲಿ ಅನೇಕರಿಗೆ ತಿಳಿದಿರಲಿಲ್ಲ.

ಡಾಕ್ಟರುಗಳು ಅನೇಕರಿಗೆ ಹೊಳೆಯದೆಹೋದ ಈ ಕೊರತೆ, ಮೆಡೇಮ್ ಕ್ಯೂರಿಗೆ ನಿಮಿಷಮಾತ್ರದಲ್ಲಿ ಅರಿವಾಯಿತು. ಈ ಕೊರತೆಯನ್ನು ನಿವಾರಿಸುವೆನೆಂದು ಮೇರಿ ನಿರ್ಧರಿಸಿ, ವಿಶ್ವವಿದ್ಯಾಲಯದ ಪ್ರಯೋಗ ಶಾಲೆಗಳಿಗೆ ಸೇರಿದ್ದ ಮತ್ತು ತನ್ನ ಸ್ವಂತ ಪ್ರಯೋಗಶಾಲೆಯಲ್ಲಿನ ಎಕ್ಸರೇ ಸಲಕರಣೆಗಳನ್ನೆಲ್ಲ ಸಂಗ್ರಹಿಸಿ, ಅವನ್ನು ಪ್ಯಾರಿಸ್ ಬಳಿ ಇದ್ದ ಅನೇಕ ಆಸ್ಪತ್ರೆಗಳಿಗೆ ಹಂಚಿಹಾಕಿದಳು. ಅನೇಕ ಪ್ರೊಫೆಸರ್‌ಗಳು, ವಿಜ್ಞಾನಿಗಳು ಎಕ್ಸರೇ ಕೆಲಸ

ನೋಡಿಕೊಳ್ಳಲು ಆಸ್ಪತ್ರೆಗಳಿಗೆ ಸ್ವಯಂಸೇವಕರಾಗಿ ಹೊರಟರು. ಇಷ್ಟಾದರೂ ಲಕ್ಷಲಕ್ಷಗಟ್ಟಲೆಯಾಗಿ ಚಿಕಿತ್ಸೆಗೆ ಬರುತ್ತಿದ್ದ ಸೈನಿಕರನ್ನೆಲ್ಲ ಉಳಿಸಿಕೊಳ್ಳಲು ಈ ಆಸ್ಪತ್ರೆಗಳಲ್ಲಿ ಸ್ಥಳವಿರಲಿಲ್ಲ. ಇವರಿಗೋಸ್ಕರ ಅಲ್ಲಲ್ಲಿ ಏರ್ಪಾಡು ಮಾಡುತ್ತಿದ್ದ ಆಸ್ಪತ್ರೆಗಳಲ್ಲಿ ವಿದ್ಯುಚ್ಛಕ್ತಿಯ ಅನುಕೂಲ ಕೂಡ ಇರುತ್ತಿರಲಿಲ್ಲ. ಮೇರಿ ಇದನ್ನೆಲ್ಲ ನೋಡಿ ಎಲ್ಲರಿಗೂ ಎಕ್ಸರೇ ಒದಗುವಂತೆ ಒಂದು ಹೊಸ ಏರ್ಪಾಡು ಮಾಡಿದಳು. ಫ್ರಾನ್ಸಿನ ಹೆಂಗಸರ ಸಂಸ್ಥೆಯಿಂದ ಹಣ ಎತ್ತಿ 'ರೇಡಿಯೋಲಾಜಿಕಲ್ ಕಾರ್' ಒಂದನ್ನು ಸೃಷ್ಟಿಸಿದಳು. ಸಾಧಾರಣವಾದ ಮೋಟಾರ್ ಕಾರ್ ಒಂದರಲ್ಲಿ ಎಕ್ಸರೇ ಸಾಧನವನ್ನೂ, ಡೈನಮೋವನ್ನೂ ಇಟ್ಟಳು. ಡೈನಮೋ ಕಾರಿನ ಯಂತ್ರದಿಂದಲೇ ಕೆಲಸಮಾಡುತ್ತ ವಿದ್ಯುಚ್ಛಕ್ತಿಯನ್ನೊದಗಿಸುತ್ತಿತ್ತು. ಈ ಯಂತ್ರಸಾಧನ ೧೯೧೪ರ ಆಗಸ್ಟ್‌ದಿಂದ ಮುಂದೆ ಆಸ್ಪತ್ರೆಯಿಂದ ಆಸ್ಪತ್ರೆಗೆ ತಿರುಗುತ್ತಲೇ ಇತ್ತು.

ಯುದ್ಧ ಪ್ಯಾರಿಸ್ ಬಿಟ್ಟು ಬೇರೆ ಕಡೆಗೆ ತಿರುಗಿದ ಮೇಲೆಯೂ ಗಾಯಗೊಂಡ ಸೈನಿಕರ ಸಂಖ್ಯೆಯೇನೂ ಕಡಮೆಯಾಗುತ್ತಿರಲಿಲ್ಲ. ಅದರಲ್ಲಿ ಮುಕ್ಕಾಲು ಜನಕ್ಕೆಲ್ಲ ಆಪರೇಷನ್ ಆಗಲೇಬೇಕಾಗುತ್ತಿತ್ತು. ಎಕ್ಸರೇ ಸಾಧನದ ಆವಶ್ಯಕತೆ ದಿನದಿನಕ್ಕೆ ಹೆಚ್ಚುವುದೆಂದು ಮೆಡೇಮ್ ಕ್ಯೂರಿಗೆ ಮೊದಲೇ ಗೊತ್ತಿತ್ತು. ಅದರಂತೆ ಮೇರಿ ಸುಮಾರು ಇಪ್ಪತ್ತು ಮೋಟಾರು ಕಾರುಗಳನ್ನು 'ರೇಡಿಯೋಲಾಜಿಕಲ್ ಕಾರ್'ಗಳಾಗಿ ಮಾರ್ಪಡಿಸಿದಳು.

ಮೇರಿಯ ಪ್ರಾರ್ಥನೆಗೆ ಉತ್ತರವಾಗಿ ಅನೇಕ ಉದಾರಿಗಳಾದ ಹೆಂಗುಸರು ಮುಂದೆ ಬಂದು ತಮ್ಮ ಕಾರುಗಳನ್ನು ಮೇರಿಯ ಉಪಯೋಗಕ್ಕೆ ಕೊಟ್ಟರು. 'ಯುದ್ಧ ಮುಗಿಯುವ ಹೊತ್ತಿಗೆ ನಿಮ್ಮ ಕಾರುಗಳು ಹಾಳಾಗದೆ ಸರಿಯಾಗಿದ್ದರೆ ಖಂಡಿತವಾಗಿಯೂ ಅವನ್ನು ನಿಮಗೆ ಹಿಂದಕ್ಕೆ ಕೊಡುತ್ತೇನೆ' ಎಂದು ಮೇರಿ ಅವರಿಗೆಲ್ಲ ಹಾಸ್ಯವಾಗಿ ಹೇಳುವಳು. ಎಕ್ಸರೇ ಸಲಕರಣೆಯಿಂದ ಕೂಡಿದ್ದ ಈ ಇಪ್ಪತ್ತು ಕಾರುಗಳಲ್ಲಿ ಲಾರಿಯ ಹಾಗಿದ್ದ ಒಂದನ್ನು ಮೇರಿ ತನ್ನ ಸ್ವಂತಕ್ಕೆ ಇಟ್ಟುಕೊಂಡಳು. ಇತ್ತ ಎಕ್ಸರೇ ಸಾಧನದ ವಿಷಯವನ್ನೆಲ್ಲ ಓದಿ ಮುಂದಟ್ಟುಮಾಡಿಕೊಳ್ಳುತ್ತ, ಅತ್ತ ಮೋಟಾರು ನಡೆಸುವದನ್ನು ಕಲಿತು ಅದರ ಯಂತ್ರದ ವಿಷಯಗಳನ್ನೆಲ್ಲ ಕಂಡುಕೊಂಡಳು. ಕೆಟ್ಟ ರಸ್ತೆಗಳಲ್ಲೆಲ್ಲ ತಾನೇ ಅದನ್ನು ಹೇಗೋ

ನಡೆಸುವಳು. ಯಂತ್ರ ಕೆಟ್ಟುಹೋದರೆ ಸರಿ ಮಾಡುವಳು. ರೈಲಿನಲ್ಲಿ ಎಕ್ಸರೇ ಸಾಧನವನ್ನು ತೆಗೆದುಕೊಂಡು ಹೋಗಬೇಕಾದರೆ ತಾನೇ ಅದನ್ನೆಲ್ಲ ಕಟ್ಟಿ ಜೋಪಾನ ಮಾಡುವಳು. ಕೊಂಚವೂ ಕೆಡದಂತೆ ತನ್ನ ಕೈಯಿಂದಲೇ ಬಿಚ್ಚುವಳು. ಯುದ್ಧ ಮುಗಿಯುವ ತನಕ ಮೇರಿ ತನ್ನ ಸ್ವಂತದ ವಿಷಯವನ್ನೆಲ್ಲ ಬಿಟ್ಟುಕೊಟ್ಟು ಹೀಗೆ ಆಸ್ಪತ್ರೆಯಿಂದ ಆಸ್ಪತ್ರೆಗೆ ತಿರುಗಿದಳು, ವಿಶ್ರಾಂತಿಯಿಲ್ಲದೆ ದುಡಿದಳು. ಇಷ್ಟೊಂದು ಸೇವೆ ಮಾಡಿದರೂ ಮೇರಿ ಯಾರಿಂದಲೂ ಏನೊಂದೂ ಕೃತಜ್ಞತೆಯನ್ನೂ ಅಪೇಕ್ಷಿಸಲಿಲ್ಲ. ನರ್ಸುಗಳ ರೂಮಿನಲ್ಲೋ, ಇಲ್ಲವೆ, ಹೊರಗೆ ಹೊಡೆದಿರುತ್ತಿದ್ದ ಡೇರೆಯಲ್ಲೋ, ಎಲ್ಲಿ ಸ್ಥಳ ಸಿಕ್ಕಿದರೆ ಅಲ್ಲಿ ಮಲಗುವಳು. ಏನು ಆಹಾರ ಸಿಕ್ಕಿದರೆ ಅದನ್ನೇ ತಿನ್ನುವಳು.

ಟೆಲಿಫೋನ್ ಅಥವಾ ಟೆಲಿಗ್ರಾಮಿನಿಂದ ಒಂದು ಕಡೆಗೆ ಎಕ್ಸರೇ ಸಾಧನ ಬೇಕಾಗಿದೆಯೆಂದು ತಿಳಿದ ಕೂಡಲೆ ಮೇರಿ ಆ ಸಾಧನ ಸರಿಯಾಗಿ ಇದೆಯೋ, ಇಲ್ಲವೋ ಎಂದು ಪರೀಕ್ಷಿಸುವಳು. ಮನೆಗೆ ಅವಸರ ಅವಸರವಾಗಿ ಓಡಿಹೋಗಿ ಹೊರಡುವುದಕ್ಕೆ ಸಿದ್ಧಳಾಗುವಳು. ತನ್ನ ಕಪ್ಪು ನಿಲುವಂಗಿ, ಬಣ್ಣವನ್ನೂ ಆಕಾರವನ್ನೂ ಕಳೆದುಕೊಂಡಿದ್ದ ಟೋಪಿ, ಸೀಳುಬಿಟ್ಟು ಮೇಲಿನ ಪದರವೆಲ್ಲ ಸುಲಿಯುತ್ತ ಬಂದಿದ್ದ ಹಳೆಯ ಚರ್ಮದ ಚೀಲ ಇವುಗಳನ್ನು ಸಂಗ್ರಹಿಸಿಕೊಂಡು ಕಾರಿನಲ್ಲಿ ಡ್ರೈವರ್ ಪಕ್ಕದಲ್ಲಿ ಗಾಳಿಗೆ ಮೈಯ್ಯೊಡ್ಡಿ ಕುಳಿತುಕೊಳ್ಳುವಳು. ಡ್ರೈವರ್ ಇಲ್ಲದಿದ್ದರೆ ತಾನೇ ಕಾರನ್ನು ನಡೆಸುವಳು.

ಆಸ್ಪತ್ರೆ ಸಿಕ್ಕುತ್ತಲೂ ಮೇರಿ ಅಲ್ಲಿ ಅನುಕೂಲವಾದ ಕೋಣೆಯೊಂದನ್ನು ಆರಿಸಿಕೊಂಡು ಕಿಟಕಿಗಳಿಗೆಲ್ಲ ಕರಿಯ ಪರದೆಯನ್ನು ಕಟ್ಟಿ ತನ್ನ ಸಾಧನವನ್ನು ಬಿಚ್ಚುವಳು. ಡೈನಮೋ ಕೆಲಸ ಮಾಡಲು ತೊಡಗುವುದು. ಅರ್ಧ ಗಂಟೆ ಕಳೆಯುವ ಹೊತ್ತಿಗೆ, ಡಾಕ್ಟರು ರೋಗಿಗಳನ್ನು ಪರೀಕ್ಷಿಸಲು ಪ್ರಾರಂಭಿಸಿರುವನು. ಮೇರಿ ಅವನ ಜೊತೆಜೊತೆಗೂ, ಕೆಲವು ಗಂಟೆಗಳ ಕಾಲ, ಒಂದೊಂದು ಸಲ ರೋಗಿಗಳು ಹೆಚ್ಚಾಗಿದ್ದರೆ ಕೆಲವು ದಿನಗಳ ಕಾಲ ಬಿಡುವಿಲ್ಲದೆ ಕೆಲಸ ಮಾಡುವಳು. ಆ ಸ್ಥಳದಲ್ಲಿ ಎಕ್ಸರೇ ಸಾಧನಗಳನ್ನಿಡುವುದಕ್ಕಿರುವ ಅನುಕೂಲಗಳನ್ನೆಲ್ಲ ಪರಿಶೀಲಿಸಿ ಮೇರಿ ಪ್ಯಾರಿಸ್‌ಗೆ ಹಿಂದಿರು

ಗುವಳು. ಕೆಲವೇ ದಿನಗಳಲ್ಲಿ ಮೇರಿ ಅಲ್ಲಿಡುವುದಕ್ಕೊಂದು ಸಾಧನವನ್ನು ತೆಗೆದುಕೊಂಡು ಆ ಸ್ಥಳಕ್ಕೆ ಹೋಗಿಯೇ ಹೋಗುವಳು. ಸಾಧನವಲ್ಲದೆ, ಅದನ್ನು ಪಯೋಗಿಸಿ ಕೆಲಸ ಮಾಡುವ ಒಬ್ಬ ಮನುಷ್ಯನೂ ಮೇರಿಯ ಜೊತೆಯಲ್ಲಿರುವನು. ಆ ಸಾಧನವನ್ನು ಮೇರಿ ಎಲ್ಲಿ ಜೊತೆ ಮಾಡಿದಳೋ, ಆ ಮನುಷ್ಯನನ್ನು ಎಲ್ಲಿ ಹಿಡಿದು, ಅವನಿಗೆ ಎಕ್ಸರೇ ಉಪಯೋಗವನ್ನು ಹೇಗೆ ಕಲಿಸಿಕೊಟ್ಟಳೋ ಅದು ಮಾತ್ರ ಯಾರಿಗೂ ತಿಳಿದಿರುತ್ತಿರಲಿಲ್ಲ. ಹೀಗೆ ಇಪ್ಪತ್ತು ಕಾರುಗಳಲ್ಲದೆ ಮೇರಿ ಸ್ವಂತವಾಗಿ ಇನ್ನೂರು ಸ್ಥಳಗಳಲ್ಲಿ ಎಕ್ಸ್‌ರೇ ಸಲಕರಣೆಗಳನ್ನು ಸ್ಥಾಪಿಸಿದಳು. ಈ ಇನ್ನೂರ ಇಪ್ಪತ್ತು ಸಾಧನಗಳಿಂದ ಪರೀಕ್ಷೆ ಮಾಡಲ್ಪಟ್ಟವರ ಸಂಖ್ಯೆ ಹತ್ತು ಲಕ್ಷಕ್ಕಿಂತ ಹೆಚ್ಚಾಗಿತ್ತು.

ಒಂದು ದಿನ ೧೯೧೫ ರ ಏಪ್ರಿಲ್‌ನಲ್ಲಿ ಮೇರಿ ತನ್ನ ಕಾರಿನಲ್ಲಿ ಕುಳಿತು ಹೋಗುತ್ತಿರುವಾಗ, ಡ್ರೈವರನ ಅಜಾಗರೂಕತೆಯಿಂದ ಕಾರು ಪಕ್ಕದ ಹಳ್ಳಕ್ಕೆ ಮಗುಚಿಕೊಂಡಿತು. ಹಿಂದುಗಡೆ ಕುಳಿತಿದ್ದ ಮೇರಿ ಎಕ್ಸರೇ ಸಾಧನಗಳನ್ನೆಲ್ಲ ಮೈಮೇಲೆ ಕೆಡವಿಕೊಂಡು ಕೆಳಗೆ ಬಿದ್ದಳು. ಪ್ರಾಣಕ್ಕೆ ಅಪಾಯವಿಲ್ಲದಿದ್ದರೂ ಗಾಯವೇನೋ ಆಗಿತ್ತು. ಮೇರಿಗೆ ತನ್ನ ಶರೀರಕ್ಕಾದ ಅಪಾಯ ಅಷ್ಟೇನೂ ತೋರಲಿಲ್ಲ. ಎಕ್ಸರೇ ಸಾಧನವೆಲ್ಲಿ ಕೆಟ್ಟು ಹೋಯಿತೋ ಎಂದು ಅವಳು ಕೆಳಗೆ ಬಿದ್ದುಕೊಂಡೇ ತಹತಹಪಡುತ್ತಿದ್ದಳು. ಇದಕ್ಕೆಲ್ಲ ಕಾರಣನಾಗಿದ್ದ ಡ್ರೈವರನಿಗೆ ಮೇರಿ ಎಲ್ಲಿ ಸತ್ತು ಹೋದಳೋ ಎಂಬ ಭಯ ಎಲ್ಲದಕ್ಕಿಂತ ಹೆಚ್ಚಾಗಿ, ಅವನು ಕಂಗೆಟ್ಟು ಹೋಗಿದ್ದ. ಆ ಗಾಬರಿಯಲ್ಲಿ ಏನೂ ತೋಚದೆ ಆ ಮನುಷ್ಯ ಮೇರಿಯ ಬಳಿಗೆ ಹೋಗಿ ಬಗ್ಗಿ ಅವಳ ಕಿವಿಯಲ್ಲಿ ' ಮೆಡೇಮ್ ! ಮೆಡೇಮ್ ! ಸತ್ತು ಹೋದೆಯಾ ? ' ಎಂದು ಪಿಸುಗುಟ್ಟಿದ. ಸಾಮಾನನ್ನೆಲ್ಲ ಮೈಮೇಲೆ ಹೇರಿಕೊಂಡು ಮಲಗಿದ್ದರೂ ಮೇರಿಗೆ ನಗು ತಡೆಯಲಾಗಲಿಲ್ಲ. ಮೇರಿ ಮೆಲ್ಲಗೆ ಎದ್ದು ಮನೆಗೆ ಬಂದು ಯಾರಿಗೂ ತಿಳಿಯದಂತೆ ತನ್ನ ಕೋಣೆಯಲ್ಲಿ ಗಾಯಗಳಿಗೆಲ್ಲ ಬಟ್ಟೆಕಟ್ಟಿಕೊಂಡಳು. ಆದರೆ ಈ ಆಕಸ್ಮಿಕದ ವಿಷಯ ಪತ್ರಿಕೆಗಳಲ್ಲಿ ಪ್ರಕಟವಾಯಿತು ರಕ್ತವಾಗಿದ್ದ ಬಟ್ಟೆಯ ತುಂಡುಗಳನ್ನು ನೋಡಿ ಮನೆಯವರಿಗೆಲ್ಲ ಗಾಬರಿಯಾಯಿತು. ಆದರೆ ಮೇರಿಯನ್ನು ತಡೆಯಬಲ್ಲವರಾರು? ಮೇರಿ ಎಂದಿನಂತೆ ಕೆಲಸಕ್ಕೆ ಹೊರಟು ನಿಂತಿದ್ದಳು.

ದೇಶದ ಸೇವೆಗೆ ಹೊರಟ ಮೆಡೇಮ್ ಕ್ಯೂರಿ ಎಷ್ಟೋ ವಿಧವಾದ ಅನಾನುಕೂಲಗಳನ್ನು ಉಸಿರೆತ್ತದೆ ಸಹಿಸಬೇಕಾಗುತ್ತಿತ್ತು. ಎಕ್ಸರೇ ವಿಷಯ ತಿಳಿದಿದ್ದ ಕೆಲವು ಡಾಕ್ಟರುಗಳು ಮೇರಿಯನ್ನು ತಮ್ಮ ಸಹೋದ್ಯೋಗಿಯಂತೆ ಗೌರವಿಸುತ್ತಿದ್ದರು. ಅದು ತಿಳಿಯದಿದ್ದ ಅನೇಕರಿಗೆ ಎಕ್ಸ್‌ರೇಯಲ್ಲಿ ನಂಬಿಕೆಯೇ ಇರಲಿಲ್ಲ. ಕೊನೆಗೆ ಮೇರಿ ಎಕ್ಸ್‌ರೇ ಭಾವಚಿತ್ರಗಳನ್ನು ತೆಗೆದು, ಗುಂಡು ಎಲ್ಲಿದೆ ಎಂಬುದನ್ನು ನಿರ್ದಿಷ್ಟವಾಗಿ ಗುರುತು ಮಾಡಿ ತೋರಿಸಿ, ಅವರ ಶಸ್ತ್ರಗಳು ನೇರವಾಗಿ ಸುಲಭವಾಗಿ ಗುಂಡನ್ನು ನೋಕಿದಾಗ ಆ ಡಾಕ್ಟರುಗಳು ಅದ್ಭುತವಾದ ಆಶ್ಚರ್ಯವನ್ನು ಕಂಡವರಂತೆ ಬೆರಗಾಗಿಹೋಗುತ್ತಿದ್ದರು.

ಸುಮಾರು ಮುನ್ನೂರು ನಾನೂರು ಆಸ್ಪತ್ರೆಗಳಲ್ಲಿ ತಿರುಗುತ್ತಿದ್ದ ಮೇರಿಗೆ ಈ ವಿಧವಾದ ಅನೇಕ ವಿನೋದಗಳು ಅನುಭವಕ್ಕೆ ಬಂದುವು. ಆಸ್ಪತ್ರೆಗೆ ಹಣ ಸಹಾಯ ಮಾಡುತ್ತಿದ್ದ ಅನೇಕ ನಾಗರಿಕ ಐಶ್ವರ್ಯವಂತ ಹೆಂಗುಸರು ಮೇರಿಯನ್ನು ಎಷ್ಟೋ ಸಲ ನೋಡುತ್ತಿದ್ದರು. ಜೀರ್ಣಶೀರ್ಣವಾದ ಬಟ್ಟೆ ಉಟ್ಟು, ತಲೆನರೆತು, ತನ್ನ ಪರಿಚಯವನ್ನು ಹೇಳಿಕೊಳ್ಳುವುದನ್ನೂ ಸುಲಭವಾಗಿ ಮರೆತು ಚಟುವಟಿಕೆಯಿಂದ ಕೆಲಸ ಮಾಡುವ ಈ ಬಡಪಾಯಿಯನ್ನು, ಮೇರಿಯ ಯೋಗ್ಯತೆಯಲ್ಲಿ ಸಾವಿರದಲ್ಲಿ ಒಂದು ಪಾಲು ಪಡೆಯಲು ಶಕ್ತಿಯಿಲ್ಲದ ಆ ಶ್ರೀಮಂತ ಹೆಂಗುಸರು, ಕೈಕೆಳಗಿನವಳಂತೆ ಕೀಳಾಗಿ ಕಂಡದ್ದುಂಟು. ಮೇರಿ ಈ ಒಣ ಶ್ರೀಮಂತಿಕೆಯನ್ನು ಕಂಡಾಗಲೆಲ್ಲ ಮನಸ್ಸಿನಲ್ಲಿಯೇ ನಕ್ಕು ಸುಮ್ಮನಾಗುವಳು. ತಾನು ಇರುವುದು ನೊಂದವರ ಸೇವೆಗೆ ಎಂಬುದನ್ನು ಸದಾಕಾಲದಲ್ಲಿಯೂ ನೆನಪಿನಲ್ಲಿಡುವಳು. ಹೆಚ್ಚು ಮಾತಿಲ್ಲದೆ ಯಾವಾಗಲೂ ಹಿಂದೆ ಹಿಂದೆ ಸರಿದು ಮೌನವಾಗಿರುವ ಸ್ವಭಾವದ ಮೇರಿ ಎಕ್ಸರೇಯನ್ನು ಕಂಡು ಹೆದರುವ ರೈತರ ಜನಗಳಿಗೆ, ಅವಿದ್ಯಾವಂತರಿಗೆ, ಆದರದಿಂದ, ವಿಶ್ವಾಸದಿಂದ ಬಾಯಿತುಂಬ ಮಾತಾಡಿ ಸಮಾಧಾನ ಹೇಳುವಳು. ಇದೂ ಭಾವಚಿತ್ರ ತೆಗೆಯುವಷ್ಟೇ ಸುಲಭ, ಸ್ವಲ್ಪವೂ ಹಿಂಸೆ ಕೊಡುವುದಿಲ್ಲ ಎಂದು ಹೇಳಿ, ಅವರ ಗಾಬರಿಯನ್ನು ದೂರ ಮಾಡುವಳು. ಈ ಗಾಯಗೊಂಡ ಸೈನಿಕರು ಅವಳಿಗೆ

ಕೃತಜ್ಞರಾಗುತ್ತಿದ್ದರು 'ರೇಡಿಯೋಲಾಜಿಕಲ್ ಕಾರ್' ಗಳಿಗೆ ಸೈನಿಕರು 'ಪುಟ್ಟ ಕ್ಯೂರಿಗಳು' ಎಂದು ಹೆಸರಿಟ್ಟಿದ್ದರು.

ಪ್ಯಾರಿಸ್‌ಗೆ ಭಯ ತಪ್ಪಿದ ಕೂಡಲೆ ಮೆಡೇಮ್ ಕ್ಯೂರಿಯು ಇಬ್ಬರು ಮಕ್ಕಳೂ ಐರೀನ್ ಮತ್ತು ಈವ್ ಪ್ಯಾರಿಸ್‌ನಲ್ಲಿಯೇ ಇರತೊಡಗಿದರು. ಅವರ ವಿದ್ಯಾಭ್ಯಾಸ ಅಲ್ಲಿಯೇ ಮುಂದುವರಿಯಿತು. ಗಂಡನನ್ನು ಕಳೆದು ಕೊಂಡಾಗಿನಿಂದ ಇಷ್ಟು ದಿನ ಇದ್ದಂತೆ ಮೇರಿ ಈಗ ಒಂಟಿಯಾಗಲಿಲ್ಲ. ಹದಿನೇಳು ವರ್ಷದ ಅವಳ ಹಿರಿಯ ಮಗಳು ಐರೀನ್ ತಾಯಿಗೆ ಜೊತೆಗಾತಿ ಯಾಗಿ ಸ್ನೇಹಿತೆಯಂತಿದ್ದಳು. ಮೇರಿ ತಾನು ಮಾಡುವ ಅನೇಕ ಕೆಲಸ ಗಳಲ್ಲಿ ಮಗಳ ಸಲಹೆ ಕೇಳುವಳು. ಅದರಂತೆ ಈಗಲೂ ಕೇಳಿದಳು. ತಮ್ಮಲ್ಲಿದ್ದ ಚಿನ್ನವನ್ನೂ ಹಣವನ್ನೂ ದೇಶಕ್ಕೋಸ್ಕರ ಸಾಲವಾಗಿ ಕೊಡಬೇಕೆಂದು ಸರ್ಕಾರದವರು ಪ್ರಜೆಗಳಲ್ಲಿ ಪ್ರಾರ್ಥನೆ ಮಾಡಿದ್ದರು. ಮೇರಿ ಎರಡನೆಯ ನೋಬೆಲ್ ಬಹುಮಾನದ ಹಣವನ್ನು ಇನ್ನೂ ಸ್ವೀಡನ್‌ನಿಂದ ತರಿಸಿಕೊಂಡಿರ ಲಿಲ್ಲ. ಮೇರಿಗೆ ತನ್ನದಾಗಿ ಉಳಿದಿದ್ದ ಹಣವೆಲ್ಲ ಅದಷ್ಟೇ. ಆ ಹಣವನ್ನು ಈಗ ಸರ್ಕಾರಕ್ಕೆ ಕೊಟ್ಟುಬಿಡಬೇಕೆಂದು ಮನಸ್ಸುಮಾಡಿದ್ದಳು. ಇದನ್ನೆಲ್ಲ ಐರೀನ್‌ಗೆ ವಿವರಿಸಿ, ಆ ಹಣ ಹಿಂದಿರುಗಿ ಬರದೆ ಹೋದರೂ ಹೋಗಬಹುದು ಎಂದು ಹೇಳಿ, ನಿನ್ನ ಒಪ್ಪಿಗೆಯಿಲ್ಲದೆ ನಾನು ಯಾವ ಕೆಲಸವನ್ನೂ ದುಡುಕಿ ಮಾಡುವುದಿಲ್ಲ ಎಂದಳು.

ಮೆಡೇಮ್ ಕ್ಯೂರಿ ಸ್ವೀಡನ್‌ನಿಂದ ಹಣ ತರಿಸಿಕೊಂಡು ಅದನ್ನೆಲ್ಲ ಸರ್ಕಾರಕ್ಕೆ ಕೊಟ್ಟು ಸಾಲಪತ್ರ ತೆಗೆದುಕೊಂಡಳು. ಆ ಹಣದ ಜೊತೆಯಲ್ಲಿ ತನ್ನಲ್ಲಿದ್ದ ಅಲ್ಪಸ್ವಲ್ಪ ಚಿನ್ನವನ್ನೂ ತನಗೆ ಬಹುಮಾನವಾಗಿ ಬಂದಿದ್ದ ಅನೇಕ ಚಿನ್ನದ ಪದಕಗಳನ್ನೂ ಫ್ರಾನ್ಸಿನ ಬ್ಯಾಂಕಿಗೆ ತೆಗೆದುಕೊಂಡು ಹೋದಳು. ಬ್ಯಾಂಕಿನ ಅಧಿಕಾರಿ ಹಣವನ್ನೇನೋ ಸ್ವೀಕರಿಸಿದ. ಆದರೆ ಪದಕಗಳನ್ನು ಮಾತ್ರ ಕರಗಿಸಿ ಹಾಳುಮಾಡುವ ತಂಟೆಗೆ ತಾನು ಹೋಗುವುದಿಲ್ಲವೆಂದು ಕಡಾಖಂಡಿತವಾಗಿ ಉತ್ತರಕೊಟ್ಟ. ಇನ್ನು ವಾದಿಸಿ ಪ್ರಯೋಜನವಿಲ್ಲ ವೆಂದು ಮೇರಿ ಅವುಗಳನ್ನು ಹಿಂದಕ್ಕೆ ತೆಗೆದುಕೊಂಡು ಬಂದಳು. ಮೇರಿ ಮೊದಲೇ ನೆನಸಿದ್ದಂತೆ, ಯುದ್ಧ ಮುಗಿದ ಮೇಲೆ, ಅವಳ ಹಣ ಒಂದು ಕಾಸೂ ಹಿಂದಿರುಗಿ ಬರಲಿಲ್ಲ. ಶಾಂತಿಸ್ಥಾಪನೆಯಾಗುವ ಹೊತ್ತಿಗೆ, ಐವತ್ತರ

ವಯಸ್ಸಿನ ತ್ರಾಣ ಇಂಗಿಹೋಗಿದ್ದ ಈ ಹೆಂಗುಸು ಒಂದಿಸಂತೆ ಬಡವೆಯಾಗಿ ಹೋದಳು. ತಾನು ಸದ್ಯಕ್ಕೆ ದುಡಿದು ಸಂಪಾದಿಸುತ್ತಿದ್ದ ಹಣ ಹೊರತು ಆವಳ ಬಳಿ ಇನ್ನೇನೂ ಉಳಿದಿರಲಿಲ್ಲ.

ಅವಿಶ್ರಾಂತವಾದ ಕೆಲಸದ ಮಧ್ಯದಲ್ಲಿ ಯಾವಾಗಲಾದರೂ ಒಂದೆರಡು ಗಂಟೆ ವಿರಾಮ ಸಿಕ್ಕಿದಾಗ ಮೇರಿ, ತನಗೆ ಅತ್ಯಂತ ಪ್ರಿಯವಾದ ಪ್ರಯೋಗ ಶಾಲೆಯ ಮುಂದುಗಡೆ, ತಾನು ಪ್ರೀತಿಯಿಂದ ನೆಟ್ಟು ಬೆಳಸಿದ್ದ ಗಿಡಗಳ ಮಧ್ಯೆ ಕುಳಿತು, ಹೊಚ್ಚ ಹೊಸದಾಗಿ, ಸುಂದರವಾಗಿ, ನಿರ್ಜನವಾಗಿದ್ದ ತನ್ನ ಪ್ರಯೋಗಶಾಲೆಯ ಕಡೆಗೆ ನೋಡುವಳು. ಅಲ್ಲಿ ಕೆಲಸಮಾಡಬೇಕಾಗಿದ್ದು ಈಗ ಯುದ್ಧದಲ್ಲಿ ಹೋರಾಡುತ್ತಿರುವ, ತನ್ನ ನಚ್ಚಿನ ಪರಿವಾರದವರನ್ನೆಲ್ಲ ಜ್ಞಾಪಿಸಿಕೊಳ್ಳುವಳು. ತನ್ನ ಅಚ್ಚುಮೆಚ್ಚಿನ ಸಹಾಯಕನಾಗಿದ್ದು ಈಗ ಯುದ್ಧದಲ್ಲಿ ಮಡಿದು ಹೋಗಿದ್ದ ಸ್ವದೇಶೀಯನೊಬ್ಬನನ್ನು ನೆನೆದು ನಿಟ್ಟುಸಿರು ಬಿಡುವಳು. ತನಗೆ ವಿರಾಮ ಸಿಕ್ಕಿದಾಗಲೆಲ್ಲ. ಮೇರಿ, ಹಳೆಯ ಕಾರನ್ನು ಉಪಯೋಗಿಸಿಕೊಂಡು ಸಾಮಾನುಗಳನ್ನೆಲ್ಲ ಕ್ಯೂರಿ ಪ್ರಯೋಗ ಶಾಲೆಗೆ ಸಾಗಿಸಿ ಸಜ್ಜುಗೊಳಿಸಿದಳು. ಬೋರ್ಡೋದಿಂದ ೧೯೧೫ ರ ಹೊತ್ತಿಗಾಗಲೆ, ತನ್ನ ರೇಡಿಯಂನ್ನು ತಂದು ಪ್ರಯೋಗಶಾಲೆಯಲ್ಲಿಟ್ಟಿದ್ದಳು. ಈಗ, ರೇಡಿಯಂ ಅನಿಲಗಳು ಮಾಯದ ಗಾಯಗಳನ್ನು, ಹುಣ್ಣನ್ನು ಸುಲಭವಾಗಿ ವಾಸಿಮಾಡುತ್ತದೆಂದು ತಿಳಿದಮೇಲೆ, ರೇಡಿಯಂದಿಂದ ಹೊರಡುವ ಅನಿಲಗಳನ್ನು ನಳಿಗೆಗಳಲ್ಲಿ ತುಂಬಿ, ಅನೇಕ ಆಸ್ಪತ್ರೆಗಳಿಗೆ ಹಂಚಿದಳು. ಎಕ್ಸ್‌ರೇ ಸಾಧನದ ಬಳಿ ಕೆಲಸ ಮಾಡಬಲ್ಲ ಶಾಸ್ತ್ರಪ್ರವೀಣರ ಕೊರತೆ ಬಹಳವಾಗಿದೆಯೆಂದು ಕಂಡುಕೊಂಡು, ಸುಮಾರು ನೂರಐವತ್ತು ಜನರನ್ನು ಆ ಕೆಲಸಕ್ಕೆ ತಯಾರು ಮಾಡಿದಳು. ಸುಮಾರು ಇಪ್ಪತ್ತು ಜನ ಅಮೆರಿಕಾದ ಸೈನಿಕರನ್ನು, ಅವರ ಇಷ್ಟದಂತೆ, ಮೇರಿ ತನ್ನ ಪ್ರಯೋಗ ಶಾಲೆಗೆ ಬರಮಾಡಿಕೊಂಡು, ರೇಡಿಯೋ ಚಟುವಟಿಕೆಯ ವಿಷಯವನ್ನು ಅವರಿಗೆ ಬೋಧಿಸಿದಳು. ಇಟಲಿ ಮತ್ತು ಬೆಲ್ಜಿಯಂ, ಮೇರಿಯನ್ನು ತಮ್ಮಲ್ಲಿಗೆ ಕರೆಸಿಕೊಂಡು ಅವಳಿಂದ ಸಹಾಯ ಪಡೆದುವು.

ಇಂತಹ ಈ ಅಭೂತಪೂರ್ವವಾದ ಸೇವೆಯನ್ನು ಸಾಂಗವಾಗಿ ಮಾಡಿ ಮುಗಿಸಿದ ಈ ಒಂಟಿ ಹೆಂಗುಸು, ಆ ದೀರ್ಘಕಾಲದಲ್ಲಿ, ತಾನು

ಎದುರಿಸಬೇಕಾಗಿದ್ದ ಆದಾಯಗಳನ್ನಾಗಲಿ, ತನಗಾದ ಆಯಾಸವನ್ನಾಗಲಿ, ಒಬ್ಬರೊಡನೆಯೂ ವರ್ಣಿಸಿ ಹೇಳಲಿಲ್ಲ. ವಿಜ್ಞಾನಕ್ಕಾಗಿ ಸಕಲವನ್ನೂ ತೆತ್ತು, ಹೆಣಗಿ ಅಭ್ಯಾಸವಾಗಿದ್ದ, ಅಪೂರ್ವವಾದ ಆ ಚೇತನದಲ್ಲಿ, ತಾನು, ತನ್ನದು ಎಂಬುದಕ್ಕೆ ಸ್ವಲ್ಪವೂ ಎಡೆಯಿರಲಿಲ್ಲ. ಕೃತಜ್ಞತೆ, ಅಭಿನಂದನೆಗಳನ್ನು ಮೇರಿ ಯಾರಿಂದಲೂ ಅಪೇಕ್ಷಿಸಲಿಲ್ಲ. ಅನೇಕ ಹೆಂಗುಸರು ಯುದ್ಧ ಮುಗಿದ ಮೇಲೆ, ಸೇವೆಮಾಡಿದವರಿಗೆ ಕೊಡುವ ಪ್ರಶಸ್ತಿಗಳನ್ನು ಪಡೆದರು. ಆಯಾಸವೆನ್ನದೆ, ಆಲಸ್ಯವೆನ್ನದೆ ಜೀವವನ್ನು ತೃಣವಾಗಿಸಿ ಯೋಧಳಂತೆ ದುಡಿದ ಮೇರಿ ಅದೊಂದನ್ನೂ ಬೇಡ ಎಂದಳು. ಇಷ್ಟರಲ್ಲಿ ಮೇರಿಗೆ 'ಯುದ್ಧದಲ್ಲಿ ರೇಡಿಯಾಲಜಿ' ಎಂಬ ಪುಸ್ತಕವನ್ನು ಬರೆಯಬೇಕೆಂದು ಒಪ್ಪಿಸಿದ್ದರು. ಎಂದಿನಿಂದ ತಾನು ಪ್ರೀತಿಸಿದ್ದ ವಿಜ್ಞಾನ. ಇಲ್ಲಿ ಜೀವಿಗಳ ಸೇವೆಮಾಡಿ, ಮೇರಿಗೆ ಹೆಚ್ಚು ಪ್ರಿಯವಾಗಿತ್ತು. ಮೆಡೇಮ್ ಕ್ಯೂರಿ, ತಾನೊಬ್ಬಳು ಮಾಡಿದ್ದ ಕೆಲಸವನ್ನೆಲ್ಲ, ಈ ಪುಸ್ತಕದಲ್ಲಿ ಸುಲಭವಾಗಿ ಇತರರ ಹೆಸರಿಗೆ ಗಂಟುಹಾಕಿ ತಾನು ಹಿಂದೆ ಸರಿದಳು. ಯುದ್ಧ ಕಾಲದಲ್ಲಿ ಎಕ್ಸ್‌ರೇಯನ್ನು ಪ್ರಚಾರಮಾಡಿ ಉಪಯೋಗಿಸಿದವರು, ಆ ಪುಸ್ತಕ ತಿಳಿಸುವಂತೆ ಮೆಡೇಮ್ ಕ್ಯೂರಿಯಲ್ಲ, ವೈದ್ಯ ಸಂಸ್ಥೆಯವರು. ಒಬ್ಬ ಹೆಂಗುಸು ನಾಲ್ಕು ವರ್ಷ ಕಾಲ ಹೆಣಗಿ ಕಂಡುಹಿಡಿದ ರೇಡಿಯಂ ಅಲ್ಲ '೧೯ನೇ ಶತಮಾನದ ಕೊನೆಯಲ್ಲಿ ವಿಜ್ಞಾನ ನಮಗೆ ತೋರಿಸಿ ಕೊಟ್ಟ ವಸ್ತು' ಮಾತ್ರ ಆಯಿತು.

ಯುದ್ಧ ನಿಂತು, ಶಾಂತಿಯ ಸೂಚನೆಯಾಗಿ ಹಾರಿದ ಗುಂಡು, ಪ್ರಯೋಗಶಾಲೆಯಲ್ಲಿದ್ದ ಮೇರಿಯನ್ನು ಬೆರಗುಗೊಳಿಸಿತು. ಮೇರಿ ತನ್ನ ಜೊತೆಯವಳನ್ನೂ ಕರೆದುಕೊಂಡು ಹತ್ತಿರದ ಅಂಗಡಿಗಳನ್ನೆಲ್ಲ ಫ್ರೆಂಚ್ ಬಾವುಟಗಳಿಗೋಸ್ಕರ ಹುಡುಕಿದಳು. ಕೊನೆಗೆ ಆ ಬಾವುಟಗಳು ಸಿಕ್ಕದೆ ಮೂರು ಬಣ್ಣದ ಬಟ್ಟೆಯ ತುಂಡುಗಳನ್ನು ಕೊಂಡು ತಂದಳು. ಮೇರಿಯ ಕೆಲಸದ ಹೆಂಗುಸು ಅವುಗಳನ್ನೆಲ್ಲ ಅವಸರ ಅವಸರವಾಗಿ ಹೊಲಿದು ಕಿಟಕಿಗಳಲ್ಲಿ ಹಾರಿಸಿದಳು. ಮೇರಿಗುಂಟಾಗಿದ್ದ ಎಣೆಯಿಲ್ಲದ ಸಂತೋಷ ಅವಳನ್ನು ಸುಮ್ಮನಿರಗೊಡಿಸಲಿಲ್ಲ. ಮೇರಿಯೂ ಅವಳ ಸ್ನೇಹಿತೆಯೊಬ್ಬಳೂ ಜೀರ್ಣವಾಗಿ ಹೋಗಿದ್ದ ಆ ಹಳೆಯ ರೇಡಿಯೋಲಾಜಿಕಲ್ ಕಾರ್‌ನಲ್ಲಿ ಕುಳಿತು ಜನ

ಕಿಕ್ಕಿರಿದು ತುಂಬಿದ್ದ ಬೀದಿಗಳಲ್ಲಿ ಹಿಂದಕ್ಕೂ ಮುಂದಕ್ಕೂ ಓಡಾಡಿದರು. ಒಂದು ಕಡೆ ಜನರ ಗುಂಪೊಂದು ಕಾರನ್ನು ನಿಲ್ಲಿಸಿ ಅದರ ಛಾವಣಿಯ ಮೇಲಕ್ಕೆ ತಾವೂ ಹತ್ತಿಕೊಂಡರು. ಉಳಿದ ಹೊತ್ತು ಆ ಕಾರು ಸುಮಾರು ಹನ್ನೆರಡು ಜನರನ್ನು ಮೇಲ್ಭಾಗದಲ್ಲಿ ಹೊತ್ತುಕೊಂಡೇ ತಿರುಗಾಡುತ್ತಿತ್ತು.

—

## ಅಧ್ಯಾಯ ಇಪ್ಪತ್ತೆರಡು

# ಅಮೆರಿಕಾದಲ್ಲಿ



ಯುದ್ಧ ಮುಗಿದು ಶಾಂತಿ ಸ್ಥಾಪನೆಯಾದ ಮೇಲೆ ಮೆಡೇಮ್ ಕ್ಯೂರಿಗೆ ಉಸಿರಾಡುವಷ್ಟು ವಿರಾಮ ಸಿಕ್ಕಿತು. ಅವಳ ದೃಷ್ಟಿ ಪ್ರಯೋಗ ಶಾಲೆಯ ಕಡೆಗೆ ತಿರುಗಿತು. ಅಲ್ಲಿ, ಮೇರಿ ಮತ್ತು ಅವಳ ಜೊತೆಗಾರರು ಹೊಸ ಹೊಸ ಸಂಶೋಧನೆಗಳಲ್ಲಿ ತೊಡಗಿದರು. ಮೇರಿಗೆ ಯುದ್ಧದ ಆತಂಕ, ಬಿಡುವಿಲ್ಲದ ಕೆಲಸಗಳು ತಪ್ಪಿ, ಅವಳ ಜೀವದಲ್ಲಿ ಜೀವವಾಗಿದ್ದ ಹೆಣ್ಣು ಮಕ್ಕಳ ಕಡೆಗೆ ಗಮನ ಸೆಳೆಯಿತು. ಅವಳ ಒಡೆದುಹೋಗಿದ್ದ ಸಂಸಾರದಲ್ಲಿ ಆ ಮಕ್ಕಳು ತಾಯಿಯ ಬಾಳ ಬೆಳಕಾಗಿ ಉಳಿದಿದ್ದರು. ತನ್ನ ಮಕ್ಕಳಿಗೆ ಬರೆದ ಒಂದು ಕಾಗದದಲ್ಲಿ ಮೇರಿ ಅದನ್ನು ವರ್ಣಿಸಿದ್ದಾಳೆ.

‘. . . . ಈಗ ಪ್ರಾರಂಭವಾಗುವ, ಮುಂದಿನ ವರ್ಷದ ವಿಷಯವಾಗಿ, ಆ ವರ್ಷದ ಕೆಲಸದ ವಿಷಯವಾಗಿ, ನಾನು ಅನೇಕ ಸಲ ಯೋಚಿಸುತ್ತೇನೆ. ನಿಮ್ಮಿಬ್ಬರ ವಿಷಯವಾಗಿಯೂ, ನೀವು ನನ್ನಲ್ಲಿ ಉಂಟುಮಾಡುವ, ಸಂತೋಷ, ಸುಖ, ಚಿಂತೆಗಳ ವಿಷಯವಾಗಿಯೂ ಯೋಚಿಸುತ್ತೇನೆ. ನನ್ನ ಭಾಗಕ್ಕೆ ನೀವಿಬ್ಬರೂ ನಿಜವಾಗಿ ಒಂದು ನಿಧಿಯಂತೆ ಇದ್ದೀರಿ. ನಿಮ್ಮೊಡನೆ ಇನ್ನೂ ಕೆಲವು ಸುಖಕರವಾದ ವರ್ಷಗಳನ್ನು ಕಳೆಯುವ ಆಸೆ ನನಗಿದೆ.’

ಮೇರಿಯ ಇಬ್ಬರು ಮಕ್ಕಳಲ್ಲಿ ಹಿರಿಯವಳು ಐರೀನ್. ತಾಯಿಯಂತೆ

ವಿಜ್ಞಾನವನ್ನೇ ತನ್ನ ಜೀವನದ ಗುರಿಯಾಗಿಟ್ಟುಕೊಂಡಿದ್ದಳು. ಭೌತಶಾಸ್ತ್ರವನ್ನು ಅಭ್ಯಾಸ ಮಾಡಬೇಕು, ರೇಡಿಯಂ ವಿಷಯವಾಗಿ ಸಂಶೋಧನೆ ಮಾಡಬೇಕು, ಎಂದು ಅವಳು ಸ್ಥಿರಪಡಿಸಿಕೊಂಡಿದ್ದಳು. ಈ ಭಾಗದಲ್ಲಿ ವಿಜ್ಞಾನಿಯಾದ ತಾಯಿಗೆ ಪೂರ್ತಿಯಾದ ತೃಪ್ತಿಯಿತ್ತು. ಕಿರಿಯ ಮಗಳು ಈವ್ ಮಾತ್ರ ವಿಜ್ಞಾನಕ್ಕೆ ಮನಸ್ಸುಕೊಟ್ಟಿರಲಿಲ್ಲ. ಸಂಗೀತ ಸಾಹಿತ್ಯಗಳ ಕಡೆಗೆ ಹರಿಯುತ್ತಿದ್ದ ಚಿಕ್ಕ ಮಗಳ ಮನಸ್ಸನ್ನು ಅರಿತ ಮೇಲೆ ಮೇರಿ ವಿಜ್ಞಾನವನ್ನೇ ಓದಬೇಕೆಂದು ಅವಳನ್ನು ಬಲವಂತ ಮಾಡಲಿಲ್ಲ. ಜೀವನದಲ್ಲಿ ಹೀಗೆ ಸಂಪೂರ್ಣವಾಗಿ ಬೇರೆ ಬೇರೆ ಮಾರ್ಗ ಹಿಡಿದಿದ್ದ ತನ್ನ ಇಬ್ಬರು ಮಕ್ಕಳ ಬಾಳಿನಲ್ಲಿಯೂ ಮೇರಿ ಒಂದೇ ವಿಧವಾದ ನಿಶ್ಚಲ ಪ್ರೇಮವನ್ನು ಬೆರಸಿದಳು. ತಾಯಿಯ ಪ್ರೀತಿ ಮಕ್ಕಳ ಹೃದಯದಲ್ಲಿ ಸದಾ ಬೆಳಕನ್ನು ತುಂಬಿರುತ್ತಿತ್ತು.

ಯುದ್ಧ ಮುಗಿಯುವ ಹೊತ್ತಿಗೆ ಮೆಡೇಮ್ ಕ್ಯೂರಿಯ ಕೀರ್ತಿ, ಪೂರ್ವಾರ್ಧ ಪಶ್ಚಿಮಾರ್ಧ ಗೋಳಗಳಲ್ಲೆಲ್ಲ ಹರಡಿತ್ತು. ನ್ಯೂಯಾರ್ಕ್ ಪಟ್ಟಣದಲ್ಲಿ ಪತ್ರಿಕೆಯೊಂದರ ಸಂಪಾದಕಿಯಾಗಿದ್ದ ಮಿಸೆಸ್ ಮೆಲೊನಿ ಎಂಬಾಕೆ ಮೇರಿಯನ್ನು ನೋಡುವುದಕ್ಕೆ ಅವಕಾಶ ಕೊಡಬೇಕೆಂದು ಅನೇಕ ಸಲ ಬರೆದುಕೊಂಡಿದ್ದಳು ಮೆಡೇಮ್ ಕ್ಯೂರಿಯಲ್ಲಿ ಸ್ತ್ರೀತ್ವ ಮುಗಿಲು ಮುಟ್ಟಿದೆಯೆಂದು ಅವಳು ಭಾವಿಸಿದ್ದಳು. ಮೇರಿ, ಈ ಪ್ರಾರ್ಥನೆಗಳಿಗೆ ಅನೇಕ ಸಲ ಉತ್ತರ ಕೊಡದೆಹೋಗಿ ಕೊನೆಗೆ ಮಿಸೆಸ್ ಮೆಲೊನಿಯನ್ನು ನೋಡಲು ಒಪ್ಪಿದಳು. ಈ ಭೇಟಿ ನಡೆದದ್ದು ಮೇರಿಯ ಪ್ರಯೋಗಶಾಲೆಯಲ್ಲಿ. ಆಗ ತಾನು ಕಂಡ ಮೇರಿಯನ್ನು ಮಿಸೆಸ್ ಮೆಲೊನಿ ಹೀಗೆ ವರ್ಣಿಸಿದ್ದಾಳೆ.

'ಬಾಗಿಲು ತೆಗೆದಾಗ, ಕಪ್ಪು ನೂಲಿನ ಉಡುಪನ್ನು ಉಟ್ಟಿದ್ದ ಪೇಲವವಾದ, ಹಿಂಜರಿಯುವ ಸ್ವಭಾವದ, ಸಣ್ಣ ಆಕೃತಿಯ ಹೆಂಗುಸನ್ನು ನೋಡಿದೆ. ಅಷ್ಟು ದುಃಖ ಬರೆದಿದ್ದ ಮುಖವನ್ನು ನಾನು ಹಿಂದೆಂದೂ ನೋಡಿರಲಿಲ್ಲ. ತಾಳ್ಮೆ, ಕರುಣೆಗಳು ಉಕ್ಕುತ್ತಿದ್ದ ಆ ಸುಂದರವಾದ ಮುಖದಲ್ಲಿ, ಎಲ್ಲ ಸಂಬಂಧವನ್ನೂ ಬಿಟ್ಟುಕೊಟ್ಟಿರುವ ವಿದ್ವಾಂಸನ ಭಾವ ಹೊಳೆಯುತ್ತಿತ್ತು...'

ಈ ಇಬ್ಬರು ಹೆಂಗುಸರಲ್ಲಿ, ಅಮೆರಿಕಾ, ಮತ್ತು ಇತರ ವಿಷಯವಾಗಿ

ಮಾತುಕತೆಯಾದ ಮೇಲೆ, ಮಿಸೆಸ್ ಮೆಲೊನಿ ಇದ್ದಕ್ಕಿದ್ದಂತೆ ಮೇರಿಯನ್ನು ಕುರಿತು, ' ಪ್ರಪಂಚವನ್ನೆಲ್ಲ ನಿನಗೆ ಬಿಟ್ಟು, ಏನನ್ನಾದರೂ ಆರಿಸಿಕೊ, ಎಂದರೆ ಏನನ್ನು ತೆಗೆದುಕೊಳ್ಳುತ್ತೀಯೆ ? ' ಎಂದು ಕೇಳಿದಳು. ಮೇರಿಯ ಪ್ರಯೋಗಶಾಲೆಯಲ್ಲಿದ್ದ ರೇಡಿಯಂ, ಕ್ಯಾನ್ಸರ್ ರೋಗ ಚಿಕಿತ್ಸೆಗೆ ಮಾತ್ರ ಉಪಯೋಗಿಸಲ್ಪಡುತ್ತಿತ್ತು. ಆದ್ದರಿಂದ ಮೇರಿ ಆ ಪ್ರಶ್ನೆಗೆ ಸುಲಭವಾಗಿ ಉತ್ತರಕೊಟ್ಟಳು. ರೇಡಿಯಂನ್ನು ಪ್ರಪಂಚಕ್ಕೆ ತೋರಿಸಿಕೊಟ್ಟ ಹೆಂಗುಸು 'ನನ್ನ ಸಂಶೋಧನೆಗಳನ್ನು ಮುಂದುವರಿಸಲು ನನಗೆ ಒಂದು ಗ್ರಾಮ್‌ನಷ್ಟು ರೇಡಿಯಂ ಬೇಕು. ಆದರೆ ಅದನ್ನು ಕೊಳ್ಳುವುದು ಸಾಧ್ಯವಿಲ್ಲ. ಅದನ್ನು ಕೊಳ್ಳುವಷ್ಟು ಹಣ ನನ್ನಲ್ಲಿಲ್ಲ ' ಎಂದಳು. ಪ್ರಶ್ನೆ ಹಾಕಿದವರಿಗೂ, ಉತ್ತರ ಕೊಟ್ಟವರಿಗೂ, ಈ ಮಾತು ಎಷ್ಟು ದೂರ ಹೋದೀತು ಎಂಬ ಅರಿವು ಆ ಕ್ಷಣದಲ್ಲಿರಲಿಲ್ಲ.

ಆದರೆ ಮುಂದೆ, ಮಿಸೆಸ್ ಮೆಲೊನಿ, ತನ್ನ ದೇಶ, ಮೆಡೇಮ್ ಕ್ಯೂರಿಗೆ ಒಂದು ಲಕ್ಷ ಡಾಲರ್‌ಗಳನ್ನು ಕೂಡಿಸಿ, ಒಂದು ಗ್ರಾಮ್ ರೇಡಿಯಂನ್ನು ಕೊಂಡುಕೊಡಬೇಕೆಂದು ನಿರ್ಧರಿಸಿದಳು. ಈ ಆಲೋಚನೆಯನ್ನು ಕಾರ್ಯ ರೂಪಕ್ಕೆ ತರಲು, ತಾನು ನ್ಯೂಯಾರ್ಕಿಗೆ ಹಿಂದಿರುಗಿದ ಕೂಡಲೆ, ಹತ್ತು ಜನ ಶ್ರೀಮಂತ ಹೆಂಗುಸರಿಂದ ಹತ್ತುಹತ್ತು ಸಾವಿರ ಡಾಲರ್‌ಗಳನ್ನು ಹೊರಡಿಸುತ್ತೇನೆಂದುಕೊಂಡಳು. ಆದರೆ ಅಷ್ಟು ಹಣ ಕೊಡಲು ಮುಂದೆ ಒಂದವರು ಮೂವರು ಮಾತ್ರ. ಮಿಸೆಸ್ ಮೆಲೊನಿ ಅಲ್ಲಿಗೆ ಈ ಪ್ರಯತ್ನ ವನ್ನು ಬಿಟ್ಟುಕೊಟ್ಟು ಒಟ್ಟು ಅಮೆರಿಕಾದ ಸ್ತ್ರೀಯರಲ್ಲಿ, ಬಡವರೆನ್ನದೆ, ಶ್ರೀಮಂತರೆನ್ನದೆ ಪ್ರಾರ್ಥನೆ ಮಾಡಿಕೊಂಡಳು. ಅಮೆರಿಕಾ ಮನಸ್ಸು ಮಾಡಿದರೆ ಯಾವುದು ತಾನೇ ಸಾಧ್ಯವಿಲ್ಲ ? ಒಂದು ವರ್ಷ ಕಳೆಯುವುದಕ್ಕೆ ಮುಂಚೆಯೇ ಅಷ್ಟು ಹಣವೂ ಕೂಡಿ ಮೆಡೇಮ್ ಕ್ಯೂರಿಗೆ ಅದನ್ನು ತಿಳಿಸ ಲಾಯಿತು. ಅಮೆರಿಕಾದ ಸ್ತ್ರೀತ್ವ, ಪ್ರಪಂಚದಲ್ಲಿ ಅಗ್ರಗಣ್ಯಳಾದ ಸ್ತ್ರೀಯನ್ನು ಅಭೂತಪೂರ್ವವಾಗಿ ಗೌರವಿಸಿತು. ಅಲ್ಲಿಯ ಹೆಂಗುಸರು ಮೇರಿಯನ್ನು ಅಮೆರಿಕಾಕ್ಕೆ ಬರಬೇಕೆಂದೂ, ಅವಳನ್ನು ನೋಡಿ ಅವಳ ಪರಿಚಯವನ್ನು ತಾವು ಪಡೆಯಬೇಕೆಂದೂ ಕೇಳಿಕೊಂಡರು. ಯಾವಾಗಲೂ ಜನರ ದೃಷ್ಟಿ ಯಿಂದ ಹಿಂದೆ ಸರಿಯುವ ಮೇರಿ ಈಗಲೂ ಈ ಪ್ರಾರ್ಥನೆಗೆ ಹೆದರಿದಳು.

ತಾಸು ಬರಲಾಗುವುದಿಲ್ಲವೆಂದು ಏನೇನೋ ನೆಪ ಹೇಳಿದಳು. ಆದರೆ ಅಮೆರಿಕಾ ಆ ಕುಂಟು ನೆಪಗಳನ್ನೆಲ್ಲ ಒತ್ತರಿಸಿತು. ನೀನು ಮಕ್ಕಳನ್ನು ಬಿಟ್ಟು ಬರಲಾಗದಿದ್ದರೆ, ನಿನ್ನ ಮಕ್ಕಳಿಗೂ ಇಲ್ಲಿಂದ ಆಹ್ವಾನ ಉಂಟು। ನಿನಗೆ ಸ್ವಲ್ಪವೂ ಆಯಾಸ ಕೊಡುವುದಿಲ್ಲ, ಅಮೆರಿಕಾದ ಅಧ್ಯಕ್ಷ ನಿನ್ನ ರೇಡಿಯಂನ್ನು ನಿನಗೆ ಒಪ್ಪಿಸಿಕೊಡುತ್ತಾನೆ, ಎಂದಿತು. ಈ ವಿಶ್ವಾಸದ ಬಲವಂತಕ್ಕೆ ಮೇರಿ ಒಪ್ಪಲೇಬೇಕಾಯಿತು.

ಅಮೆರಿಕಾಕ್ಕೆ ಹೊರಡುವುದು ಗೊತ್ತಾಗಿ ಪ್ರಯಾಣಕ್ಕೆ ಎಲ್ಲ ಸಿದ್ಧ ವಾಯಿತು. ಈವ್-ಕ್ಯೂರಿ, ಮೇರಿಯನ್ನು ಹೊಸ ಒಟ್ಟೆ ಕೊಳ್ಳಬೇಕೆಂದು ಬಲವಂತಪಡಿಸಿದಳು. ಮೇರಿಯ ಜೀರ್ಣ-ಶೀರ್ಣವಾದ ಹಳೆಯ ಉಡುಪು ಸದ್ಯಕ್ಕೆ ಪ್ಯಾರಿಸ್‌ನಲ್ಲಿಯೇ ಉಳಿಯಬೇಕಾಯಿತು ತನಗೆ ಸೇರಿದ ಈ ಹೆಂಗು ಸಿಗೆ ಒದಗುವ ಗೌರವವನ್ನು ಕಂಡು ಫ್ರಾನ್ಸ್ ಇದ್ದಕ್ಕಿದ್ದಂತೆ ಎಚ್ಚತ್ತಿತು. ದೇಶದ ಭಾಗ್ಯವಾಗಿ ಒದಗಿಬಂದಿದ್ದ ಈ ಅದ್ವಿತೀಯಳಾದ ವಿಜ್ಞಾನಿಯನ್ನು, ಹೊರದೇಶವೊಂದರ ಮುಂದೆ ನಿಲ್ಲಿಸುವಾಗ ಏನೇನು ಪ್ರಶಸ್ತಿಗಳನ್ನು ಕೊಟ್ಟರೆ ಚೆನ್ನ, ಎಂದು ಯೋಚಿಸಿತು. ೧೯೨೧ನೆಯ ಎಪ್ರಿಲ್ ಇಪ್ಪತ್ತೇಳ ನೆಯ ದಿನ ಮೆಡೇಮ್ ಕ್ಯೂರಿಯನ್ನು ಬೀಳ್ಕೊಳ್ಳುವುದಕ್ಕಾಗಿ ಒಂದು ಉತ್ಸವ ಏರ್ಪಟ್ಟಿತು. ಕೆಲವು ದಿನಗಳಾದ ಮೇಲೆ, ಮೇರಿ, ಮಕ್ಕಳಿಂದೊಡ ಗೂಡಿ, 'ಒಲಿಂಪಿಕ್' ಎಂಬ ಹಡಗು ಹತ್ತಿ ಅಮೆರಿಕಾಭಿಮುಖವಾಗಿ ಹೊರ ಟಳು. ಈ ಮೂವರ ಒಟ್ಟೆಗಳೆಲ್ಲ ಒಂದೇ ಒಂದು ಪೆಟ್ಟಿಗೆಯಲ್ಲಿ ಅಡಕವಾಗಿತ್ತು. ಅವರು ಪ್ರಯಾಣ ಮಾಡಿದ ಹಡಗಿನಲ್ಲಿ ಅವರಿಗೆ ಸೇರಿದ ಭಾಗ ಎಲ್ಲ ಅನುಕೂಲ ಸಾಧನಗಳಿಂದ ಸಜ್ಜಿತವಾಗಿತ್ತು. ಮೇರಿ ಅದನ್ನೆಲ್ಲ ನೋಡಿ ಸಂತೋಷಪಟ್ಟಳು. ಆದರೆ ಐವತ್ನಾಲ್ಕು ವರ್ಷಗಳ ದೀರ್ಘ ಕಾಲ, ಒಡತನವನ್ನು ಪ್ರೀತಿಸಿ ಕಾಲ ಕಳೆದಿದ್ದ ಮೇರಿಯ ಸರಳ ಹೃದಯದಲ್ಲಿ ಆ ಸಂತೋಷಕ್ಕಿಂತ ಹೆಚ್ಚಾಗಿ, ಬೆರಗು ಆಶ್ಚರ್ಯಗಳು ಮನೆಮಾಡಿದ್ದುವು.

ಕೊನೆಗೆ 'ಒಲಿಂಪಿಕ್', ಜನ ಕಿಕ್ಕಿರಿದು ತುಂಬಿದ್ದ ನ್ಯೂಯಾರ್ಕ್ ದಡವನ್ನು ಮುಟ್ಟಿತು. ಪತ್ರಿಕಾಕರ್ತರು, ಭಾವಚಿತ್ರಕಾರರು, ಸಿನೆಮಾ ತೆಗೆದುಕೊಳ್ಳುವವರು ಐದು ಗಂಟೆಗಳಿಗಿಂತ ಮುಂಚಿನಿಂದ ಅಲ್ಲಿ ಬಾದು ಕಾದಿದರು. ಶಾಲೆಯ ಹುಡುಗಿಯರ ಸೈನ್ಯ ಒಂದು ಕಡೆ, ಪೋಲಿಸ್

ಸಂಸ್ಥೆಯ ಪ್ರತಿನಿಧಿಗಳು ಮುನ್ನೂರು ಹೆಂಗುಸರು ಇನ್ನೊಂದು ಕಡೆ, ಉಳಿದ ಜನರು ನೂರಾರು, ಸಾವಿರಾರು, ನ್ಯೂಯಾರ್ಕ್ ಬರಿದಾಗಿ ಇಲ್ಲಿ ನೆರೆದಿದ್ದಂತೆ ತೋರುತ್ತಿತ್ತು. ಎಲ್ಲರ ಮುಖದಲ್ಲಿ, ಆತುರ, ಕುತೂಹಲ, ಒರೆದಿತ್ತು. ಸಾವಿರಾರು ತಲೆಗಳ ಮೇಲುಭಾಗದಲ್ಲಿ ಹಾರಾಡುತ್ತಿದ್ದ ಬಣ್ಣ ಬಣ್ಣದ ಬಾವುಟಗಳು, ಅಮೆರಿಕಾ, ಪೋಲೆಂಡ್ ಮತ್ತು ಫ್ರಾನ್ಸಿನ ಧ್ವಜ ಗಳು ನಿಚ್ಚಳವಾಗಿ ಹೊಳೆಯುತ್ತಿದ್ದುವು. 'ಒಲಿಂಪಿಕ್'ನ ಡೆಕ್ಕಿನ ಮೇಲು ಗಡೆ ಒಂದು ದೊಡ್ಡ ಕುರ್ಚಿಯಲ್ಲಿ, ಅಮೆರಿಕಾದ ಪತ್ರಿಕೆಗಳು 'ಜನತೆಯ ಉದ್ಧಾರಕರ್ತಳೆ'ಂದು ವರ್ಣಿಸಿದ ಮೆಡೇಮ್ ಕ್ಯೂರಿ ಕುಳಿತಿದ್ದಳು. ಮುಖ ಕಂಡೊಡನೆ ಭಾವಚಿತ್ರಕಾರರ ದೊಡ್ಡ ಕೂಗೆದ್ದಿತು. ಕ್ಯಾಮರಾಗಳು, ಸಿನೆಮಾ ಯಂತ್ರಗಳು, ಅವಳನ್ನು ಹೆದರಿಸುತ್ತ ಆವರಿಸಿ ನಿಂತುವು 'ಈ ಕಡೆ ನೋಡು, ಮೆಡೇಮ್ ಕ್ಯೂರಿ! ತಲೆಯನ್ನು ಬಲಕ್ಕೆ ತಿರುಗಿಸು! ತಲೆ ಎತ್ತು! ಈ ಕಡೆ ನೋಡು! ಈ ಕಡೆ! ಈ ಕಡೆ' ಎಂಬ ಕೂಗು ಎಲ್ಲ ಶಬ್ದಗಳನ್ನೂ ಭೇದಿಸಿಕೊಂಡು ಮೇಲೆದ್ದಿತು.

ಜನರ ದೃಷ್ಟಿಯೆಲ್ಲ ಡೆಕ್ಕಿನ ಮೇಲೆ ಕುಳಿತಿದ್ದ ಅಪೂರ್ವವಾದ ವ್ಯಕ್ತಿ ಯಲ್ಲಿ ನೆಲಸಿತ್ತು, ಎತ್ತಿದ ಕತ್ತುಗಳು, ಕುತೂಹಲ ತುಂಬಿದ ಕಣ್ಣುಗಳು, ಅಂಜಿಕೆಯಿಂದ ಹಿಂಜರಿಯುತ್ತಿದ್ದ ಹೆಂಗುಸೊಬ್ಬಳ ಕಡೆಗೆ ತಿರುಗಿದ್ದುವು. ಯೋಗಿಯಂತೆ, ತಪಸ್ವಿಯಂತೆ, ವಿಜ್ಞಾನಕ್ಕಾಗಿ ಜೀವ ತೇದು ವ್ಯೈಸನೆಸಿ, ಸರಳತೆಯ ಮೂರ್ತಿಯಂತೆ ಕುಳಿತಿದ್ದ ಮೆಡೇಮ್ ಕ್ಯೂರಿಯನ್ನು ನೋಡಿ ದೊಡನೆಯೇ ಸಾವಿರಾರು ಹೃದಯಗಳಲ್ಲಿ ಮೊದಲೇ ನೆಲಸಿದ್ದ ಗೌರವದ ಜೊತೆಗೆ, ಆದರ ಪ್ರೀತಿಗಳು ಉಕ್ಕಿದುವು. ತನ್ನ ಭಾಗಕ್ಕೆ ಇತರ ತಾಯಿ ಯರಂತೆಯೇ ಪ್ರೀತಿಯ ನಿಧಿಯಾಗಿದ್ದ ಮೇರಿ ಕ್ಯೂರಿ, ಪ್ರಪಂಚದ ಕೋಟ್ಯಾನುಕೋಟಿ ಜನರ ಗೌರವ ವಿಶ್ವಾಸಗಳಿಗೆ ಹೇಗೆ ಪಾತ್ರಳಾಗಿದ್ದ ಳೆಂಬುದನ್ನು, ಈವ್ ಮತ್ತು ಐರೀನ್ ಆ ಕ್ಷಣದಲ್ಲಿ ತಿಳಿದರು.

ಕ್ಯಾನ್ಸರ್ ರೋಗ ಪೀಡಿತನಾಗಿದ್ದು, ರೇಡಿಯಂದಿಂದ ಗುಣ ಹೊಂದಿದ್ದ, ಹೂ ಬೆಳೆಯುವವನೊಬ್ಬ, ಮೇರಿ, ಅಮೆರಿಕಾಕ್ಕೆ ಬರುತ್ತಾ ಳೆಂದು ಮೊದಲೇ ತಿಳಿದಿದ್ದು, ಸುಮಾರು ಎರಡು ತಿಂಗಳಿಂದ ಕಷ್ಟಪಟ್ಟು ಸೊಗಸಾದ ಗುಲಾಬಿ ಹೂಗಳನ್ನು ಬೆಳೆದಿದ್ದ. ಆ ಹೂಗಳೆಲ್ಲ ಈಗ ಮಿಸೆಸ್

ಮೆಲೊನಿ ಇದ್ದ ಮನೆಯಲ್ಲಿ ತುಂಬಿಹೋಗಿತ್ತು. ಹೀಗೆ ಮೆಡೇಮ್ ಕ್ಯೂರಿಗೋಸ್ಕರ ಕಾದಿದ್ದವರು ಒಬ್ಬರಲ್ಲ, ಅಮೆರಿಕಾಕ್ಕೆ ಅಮೆರಿಕಾವೆ, ಹೆಂಗಸರೆನ್ನದೆ, ಗಂಡಸರೆನ್ನದೆ ಅವಳನ್ನು ನಿರೀಕ್ಷಿಸುತ್ತಿತ್ತು. ಈಗ ಮೇರಿ ಯನ್ನು ಪ್ರತ್ಯಕ್ಷವಾಗಿ ನೋಡಿದ ಮೇಲೆ, ಎಲ್ಲರ ಹೃದಯ ಅವಳಲ್ಲಿ ಸೆರೆ ಯಾಗಿತ್ತು. ಅಮೆರಿಕಾದ ಪ್ರತಿಯೊಂದು ಪಟ್ಟಣ, ವಿಶ್ವವಿದ್ಯಾಲಯ, ಕಾಲೇಜು ಈ ವಿಜ್ಞಾನಿಯನ್ನು ಆಹ್ವಾನಿಸಿತ್ತು. ಪದಕಗಳು, ಪ್ರಶಸ್ತಿಗಳು ಡಾಕ್ಟರೇಟುಗಳು, ಹತ್ತಾರು ನೂರಾರು, ಕಾದಿದ್ದುವು. ಅದ್ಭುತವಾದ ಅಮೆರಿಕಾ ಜನಾಂಗ ಮೇರಿಯನ್ನು ಅದ್ಭುತವಾಗಿಯೇ ಸ್ವಾಗತಿಸಲು ಸಿದ್ಧವಾಗಿತ್ತು.

ಈ ಉತ್ಸವಗಳಿಗೆಲ್ಲ ಹೋಗುವಾಗ ಧರಿಸಲು, ವಿಶ್ವವಿದ್ಯಾಲಯದ ಗೌನ್ ಮತ್ತು ಟೋಪಿ ಮೇರಿಗೆ ಬೇಕೇ ಆಗಿದ್ದುವು. ಮಿಸೆಸ್ ಮೆಲೊನಿ ಮೊದಲೇ ಎಚ್ಚರ ವಹಿಸಿ, ಅವೆರಡನ್ನೂ ಮೇರಿ ತಂದಿರುವಳೇ ಇಲ್ಲವೇ ಎಂದು ಪ್ರಶ್ನೆ ಮಾಡಿದಳು. ಮೆಡೇಮ್ ಕ್ಯೂರಿಯಿಂದ ನಿರೀಕ್ಷಿಸಬಹುದಾದ ಉತ್ತರವೇ ಇಲ್ಲಿಯೂ ಸಿಕ್ಕಿತು. ಮೇರಿ ಅವುಗಳನ್ನು ತಂದಿರಲಿಲ್ಲ. ತರದೇ ಇರುವುದಕ್ಕೆ ಬಲವಾದ ಕಾರಣವೂ ಇತ್ತು. ವಿಶ್ವವಿದ್ಯಾಲಯದ ಪ್ರೊಫೆ ಸರುಗಳು, ಗೌನ್ ಒಂದನ್ನು ಹೊಂದಿರಬೇಕೆಂಬ ಪದ್ಧತಿ ಸೋರ್ಬೊನ್ನಿನಲ್ಲಿ ಇದ್ದರೂ, ಮೆಡೇಮ್ ಕ್ಯೂರಿ, ಅದನ್ನು ಹೊಲಿಸಿಟ್ಟುಕೊಳ್ಳುವ ಯೋಚನೆಯು ತನಕ ಎಂದೂ ಬುದ್ಧಿ ಓಡಿಸಿರಲಿಲ್ಲ. ಈಗ ಅವಸರವಸರವಾಗಿ ಗೌನ್ ಒಂದು ತಯಾರಾಗುವ ಏರ್ಪಾಡಾಯಿತು. ಕರಿಯ ರೇಷ್ಮೆಯ ಆ ನಿಲು ವಂಗಿ ಸರಿಯಾಗಿದೆಯೋ ಎಂದು ನೋಡಲು ಮೇರಿಗೆ ಅದನ್ನು ತೋರಿಸಿ ದಾಗ, ಮೇರಿ ಎಂದೂ ಇಲ್ಲದಷ್ಟು ಮುಜಗರಪಟ್ಟುಕೊಂಡಳು. ಈ ಅಂಗಿ ತುಂಬ ಭಾರ, ಸೆಕೆಯಾಗುತ್ತದೆ, ರೇಷ್ಮೆಯ ಬಟ್ಟೆ ನನಗೆ ಸರಿಹೋಗುವು ದಿಲ್ಲ, ಎಂದಳು.

ಮೇರಿ, ಮೊದಲು ಕೆಲವು ದಿನ, ಹೆಂಗಸರ ಕಾಲೇಜುಗಳಿಗೆಲ್ಲ ದರ್ಶನ ಕೊಟ್ಟು ಬಂದಳು. ಒಂದು ಕಾಲೇಜಿನಲ್ಲಿ, ಮೇರಿಯ ಕಾರು ದೂರದಲ್ಲಿ ಕಾಣುತ್ತಿದ್ದ ಹಾಗೆಯೇ ಸಾವಿರಾರು ಹುಡುಗಿಯರು, ಅವಳನ್ನು ಸ್ವಾಗತಿ ಸಲು ಓಡೋಡಿ ಬಂದರು. ಇನ್ನೊಂದು ಕಡೆ ಸಾವಿರಾರು ಕೈಗಳಲ್ಲಿ ಹೂ

ಗಳೂ, ಧ್ವಜಗಳೂ ಒಲೆದಾಡಿದುವು. ಬೇರೊಂದು ಕಡೆ, ಹುಡುಗಿಯರು ಸಾಲುಗಟ್ಟಿ ನಿಂತು ಉತ್ಸಾಹದಿಂದ ಹಾಡುತ್ತ ಮೇರಿಯನ್ನು ಸ್ವಾಗತಿಸಿದರು. ಇದೆಲ್ಲ ಮುಗಿದ ಮೇಲೆ, ಈ ಎಲ್ಲ ಕಾಲೇಜಿನ ಪ್ರತಿನಿಧಿಗಳು ವಿಶ್ವವಿದ್ಯಾಲಯದ ಸ್ತ್ರೀ ಸಂಸ್ಥೆಯ ಆಶ್ರಯದಲ್ಲಿ ಸೇರಿ ಮೇರಿಯನ್ನು ಸತ್ಕರಿಸಿದರು. ಪ್ರತಿಯೊಬ್ಬರೂ ಅವಳ ಮುಂದೆ ಬಾಗಿ ನಮಸ್ಕಾರ ಮಾಡಿ ಹೂಗಳನ್ನು ಸಮರ್ಪಿಸಿದರು. ಮೆಡೇಮ್ ಕ್ಯೂರಿಗೋಸ್ಕರ ಪ್ರಶಸ್ತಿಗಳು, ಬಹುಮಾನಗಳು, ಪದಕಗಳು ಬಂದು ರಾಶಿಯಾದುವು.

ಈ ಸತ್ಕಾರಕೂಟಗಳೆಲ್ಲ ಮುಗಿಯುವ ಹೊತ್ತಿಗೆ ಮೇರಿಯ ತ್ರಾಣವೆಲ್ಲ ಉಡುಗಿಹೋಗಿತ್ತು. ದೇಹಶಕ್ತಿಯನ್ನು ಎಂದೋ ಕಳೆದುಕೊಂಡಿದ್ದ ಐವತ್ನಾಲ್ಕು ವರ್ಷದ ಈ ಹೆಂಗುಸು ಇಷ್ಟೊಂದು ಗದ್ದಲದ ಆದರವನ್ನು ತಡೆಯಲಾರದೆ ಹೋದಳು. . ಮುಂದಿನ ಎರಡು ದಿನ ಅಮೆರಿಕಾದ ವಿಜ್ಞಾನ ಸಂಸ್ಥೆಗಳ ಪ್ರತಿನಿಧಿಗಳಾಗಿ ಬಂದು ಸೇರಿದ್ದ ಐನೂರಎಪ್ಪತ್ತಮೂರು ಜನ ಮೇರಿಯನ್ನು ಸ್ವಾಗತಿಸಿದರು. ಆ ರಭಸವಾದ ಕೂಗಾಟದಲ್ಲಿ ಮೇರಿ ತತ್ತರಿಸಿಹೋದಳು. ಅಷ್ಟು ಜನರ ದೃಷ್ಟಿ ತನ್ನ ಕಡೆಗಿರುವುದನ್ನು ನೋಡಿ ಹೆದರಿದಳು. ಜನರು ಮೇರಿಯನ್ನು ನೋಡುವುದಕ್ಕೋಸ್ಕರ ಒಬ್ಬರನ್ನೊಬ್ಬರು ನೂಕಾಡಿದರು. ಈ ಗುಂಪಿನ ಗಲಾಟೆಯಲ್ಲಿ ಮೇರಿ ಎಲ್ಲಿ ಸಿಕ್ಕು ಪುಡಿಪುಡಿಯಾಗುವಳೋ ಎಂದು ತೋರುತ್ತಿತ್ತು. ಜನರಲ್ಲೊಬ್ಬ ತನ್ನ ಅತ್ಯಂತ ಉತ್ಸಾಹವನ್ನು ಪೂರ್ತಿಯಾಗಿ ಪ್ರಕಟಮಾಡಿ ಮೇರಿಯ ಕೈ ಮುರಿದುಹೋಗುವಂತೆ ಹಸ್ತಲಾಘವ ಕೊಟ್ಟನು. ಇಲ್ಲಿಂದ ಮುಂದೆ ಮೇರಿ ಕೈಗೂ ತೋಳಿಗೂ ಬಟ್ಟೆ ಕಟ್ಟಿಕೊಂಡೇ ಓಡಾಡಬೇಕಾಯಿತು.

ಕೊನೆಗೆ ಮೇ ೨೦ನೇ ದಿನ ಒದಗಿ ಬಂತು. ಅದು, ಮೇರಿ, ಅಮೆರಿಕಾದ ಅಧ್ಯಕ್ಷನ ಹಸ್ತದಿಂದ ರೇಡಿಯಂನ್ನು ಸ್ವೀಕರಿಸಬೇಕಾದ ದಿನ. ನಾಲ್ಕುಗಂಟೆಯ ಹೊತ್ತಿಗೆ ವೈಟ್ ಹಾಲಿನಲ್ಲಿ, ದೊಡ್ಡ ದೊಡ್ಡ ಅಧಿಕಾರಿಗಳು, ವಿಶ್ವವಿದ್ಯಾಲಯದ ಪ್ರತಿನಿಧಿಗಳು ಕಿಕ್ಕಿರಿದು ತುಂಬಿದ್ದರು. ಬಾಗಿಲು ತೆಗೆದು, ಮೇರಿ ಕ್ಯೂರಿ, ಅಧ್ಯಕ್ಷ ಹಾರ್ಡಿಂಗ್‌ನ ತೋಳ ಆಸರೆಯಲ್ಲಿ ಸಭಾಭವನವನ್ನು ಪ್ರವೇಶಿಸಿದಳು. ಮಿಸೆಸ್ ಮೆಲೊನಿ, ಐರೀನಾ ಮತ್ತು ಈವ್ ಅವಳನ್ನು ಹಿಂಬಾಲಿಸಿದರು. ಉಪನ್ಯಾಸಗಳೆಲ್ಲ ಮುಗಿದ

ಮೇಲೆ ಹಾರ್ಡಿಂಗ್ ಕೊನೆಯಲ್ಲಿ ಭಾಷಣ ಮಾಡಿ ಮೇಡೇಮ್ ಕ್ಯೂರಿಯನ್ನು ಕೊಂಡಾಡಿದನು. ರೇಡಿಯಂನ್ನು ದಾನ ಕೊಡಲು ಮಾಡಿದ್ದ ಪತ್ರವನ್ನು ಅವಳಿಗೆ ಒಪ್ಪಿಸಿ, ರೇಡಿಯಂ ಪೆಟ್ಟಿಗೆಯ ಚಿನ್ನದ ಬೀಗದ ಕೈಯನ್ನು ಪೋಣಿಸಿದ್ದ ರೆಷ್ಮೆಯ ನೂಲನ್ನು ಅವಳ ಕೊರಳಿಗೆ ಹಾಕಿದನು. ಮೇರಿ ವಂದನೆಯನ್ನು ಹೇಳಿ, ಸಣ್ಣ ಭಾಷಣ ಮಾಡಿದ ಮೇಲೆ, ಸಭೆ ಮುಗಿದು, ಅಲ್ಲಿ ನೆರೆದಿದ್ದ ಆಹ್ವಾನಿತರ ಪರಿಚಯ ಮೊದಲಾಯಿತು. ಮೇಡೇಮ್ ಕ್ಯೂರಿ ಒಂದು ಕುರ್ಚಿಯಲ್ಲಿ ಕುಳಿತು, ಒಬ್ಬೊಬ್ಬರಾಗಿ ಮುಂದೆ ಬರುತ್ತಿದ್ದ ಜನರ ಕಡೆಗೆ ನೋಡಿ ಸ್ನೇಹದಿಂದ ನಗುತ್ತಿದ್ದಳು. ಅವಳ ಮಕ್ಕಳು ಅವಳ ಪರವಾಗಿ ನಿಂತು, ಮಿಸೆಸ್ ಹಾರ್ಡಿಂಗ್ ಒಬ್ಬೊಬ್ಬರನ್ನಾಗಿ ಪರಿಚಯ ಮಾಡಿಕೊಟ್ಟಂತೆಲ್ಲ, ಅವರ ಕೈ ಕುಲುಕಿ ಕುಶಲ ಪ್ರಶ್ನೆ ಮಾಡುತ್ತಿದ್ದರು. ಮೇಡೇಮ್ ಕ್ಯೂರಿಯನ್ನು, ಅಧ್ಯಕ್ಷ ಹಾರ್ಡಿಂಗ್ ಹೊರಗೆ ಕರೆತರುವ ಹೊತ್ತಿಗೆ ಭಾವಚಿತ್ರಕಾರರ ದೊಡ್ಡ ತಂಡವೊಂದು ಅಲ್ಲಿ ಆಗಲೇ ಕಾದಿತ್ತು.

ಆ ರಾತ್ರಿಯೇ, ಎಲ್ಲರನ್ನೂ ಬೆರಗುಗೊಳಿಸುವ ಸಂಗತಿಯೊಂದು ನಡೆಯಿತು. ಮೇಡೇಮ್ ಕ್ಯೂರಿ, ಉತ್ಸವಸಮಾರಂಭದಲ್ಲಿಯೇ, ರೇಡಿಯಂನ್ನು ಅವಳಿಗೆ ಒಪ್ಪಿಸುವ ಸಲುವಾಗಿ ಮಾಡಿದ್ದ ಪತ್ರವನ್ನು ಕುತೂಹಲದಿಂದ ಓದಿದ್ದಳು. ಈಗ ಆ ಪತ್ರವನ್ನು ಸ್ವಲ್ಪ ಮಾರ್ಪಡಿಸಬೇಕೆಂದು ಮಿಸೆಸ್ ಮೆಲೊನಿಯಲ್ಲಿ ಕೋರಿದಳು. ಆ ರೇಡಿಯಂನ್ನು ತಾನು ಬದುಕಿರುವ ತನಕ ತಾನೇ ಉಪಯೋಗಿಸಿದರೂ, ಆ ಪತ್ರ ತನ್ನ ಹೆಸರಿನಲ್ಲಿರಕೂಡದೆಂದೂ, ಆ ರೇಡಿಯಂ ಪ್ರಯೋಗಶಾಲೆಗೆ ಶಾಶ್ವತವಾಗಿ ಉಳಿಯಬೇಕೆಂದೂ, ತನ್ನ ಹೆಸರಿನಲ್ಲಿದ್ದರೆ, ತಾನು ಹೋದಮೇಲೆ, ಅದು ತನ್ನ ಮಕ್ಕಳ ಪಾಲಿಗೆ ಬರುವುದೆಂದೂ ಹೇಳಿದಳು. ಆಶ್ಚರ್ಯಗೊಂಡ ಮಿಸೆಸ್ ಮೆಲೊನಿ, ಆಗಲಿ, ಮುಂದಿನ ವಾರ ಅದನ್ನು ಮಾಡೋಣ, ಎಂದಳು. ಮುಂದಿನ ವಾರ ಅಲ್ಲ, ನಾಳೆಯಲ್ಲ, ಈಗಲೇ ಅದು ಆಗಬೇಕು. ತಾನು ಕೆಲವೇ ಗಂಟೆಗಳಲ್ಲ ಸತ್ತರೂ ಸಾಯಬಹುದು, ತಡಮಾಡಿದರೆ ಏನು ಪ್ರಯೋಜನ ಎಂದು ಮೇರಿ ಹಟ ಮಾಡಿದಳು. ಕೊನೆಗೆ ಆ ಅಪರಾತ್ರಿಯಲ್ಲಿ ವಕೀಲನೊಬ್ಬ ಒಂದು ಪತ್ರವನ್ನು ಮೇರಿ ಹೇಳುವಂತೆ ಸರಿಮಾಡಬೇಕಾಯಿತು.

ಮುಂದೆ ಮೆಡೇಮ್ ಕ್ಯೂರಿ, ಫಿಲಡೆಲ್ಫಿಯಾಕ್ಕೂ, ರೇಡಿಯಂ ಉತ್ಪತ್ತಿ ಮಾಡುವ ಸ್ಥಳವಾದ ಪಿಟ್ಸ್‌ಬರ್ಗ್‌ಗೂ ಹೋಗಿ ಬಂದಳು. ಹೋದ ಕಡೆ ಯಲ್ಲೆಲ್ಲ, ವಿಶ್ವವಿದ್ಯಾಲಯಗಳಿಂದ ಗೌರವಪ್ರಶಸ್ತಿಗಳೂ, ಡಾಕ್ಟರೇಟು ಗಳೂ ಸುರಿಮಳೆಯಾಗುತ್ತಿದ್ದುವು. ಇಲ್ಲಿಯ ತನಕ ಮೇರಿ, ಉತ್ಸವಗಳಲ್ಲಿ ಭಾಗಿಯಾಗುವುದಕ್ಕೆ ಹೇಗೋ ತ್ರಾಣ ಕೂಡಿಸಿಕೊಂಡು ಒಂದಿದ್ದಳು. ಇನ್ನು ಮುಂದೆ ಅದು ಸಾಗಲಿಲ್ಲ ಮೇರಿಗೆ ಪ್ರಯಾಣ ಮಾಡುವುದು ಸಾಧ್ಯ ವಿಲ್ಲದಷ್ಟು ನಿಶ್ಶಕ್ತಿಯಾಗಿದೆ ಎಂದು ಜನಕ್ಕೆ ತಿಳಿದ ಕೂಡಲೆ, ಅಮೆರಿಕಾದ ಪತ್ರಿಕೆಗಳು ದೊಡ್ಡ ದೊಡ್ಡ ಅಕ್ಷರಗಳಲ್ಲಿ 'ಮಿತಿಮೀರಿದ ಆದರಾತಿಥ್ಯ' ಎಂದು ಪ್ರಕಟಿಸಿದುವು. ಇನ್ನೊಂದು ಪತ್ರಿಕೆ, 'ಇದರಲ್ಲಿ ಅರ್ಧ ಕೆಲಸ ತೆಗೆದುಕೊಂಡಿದ್ದರೆ, ಮೇಡೇಮ್ ಕ್ಯೂರಿಗೆ, ಯಾವುದಾದರೂ ಸರ್ಕಸ್ ಯಜಮಾನ, ನಾವು ಕೊಟ್ಟುದಕ್ಕಿಂತ ಹೆಚ್ಚು ಹಣ ಕೊಡುತ್ತಿದ್ದ' ಎಂದು ಘೋಷಿಸಿತು.

ಮುಂದಿನ ಪ್ರಯಾಣವನ್ನೆಲ್ಲ ಮೇಡೇಮ್ ಕ್ಯೂರಿಯ ಶಕ್ತಿಗನುಸಾರ ವಾಗಿ ಕಡಮೆ ಮಾಡಲಾಯಿತು. ಪಶ್ಚಿಮ ಭಾಗದ ಪಟ್ಟಣಗಳಿಗೆ ಹೋಗು ವುದೇ ಬೇಡವೆಂದು ಗೊತ್ತಾಯಿತು. ಪ್ಲಾಟ್‌ಫಾರಂ ಮೇಲೆ ಕಾದಿರುವ ಜನಸಂದಣಿಯಿಂದ ತಪ್ಪಿಸಲು, ಮೇರಿಯನ್ನು ಅವಳ ಜೊತೆಯವರು ಹಿಂದಿನ ದಾರಿಯಿಂದ ಹೊರಡಿಸಿಕೊಂಡು ಹೋಗಲು ಪ್ರಾರಂಭಿಸಿದರು. ಇನ್ನೊಂದು ಸಲ, ಮೇರಿ, ಒಫೆಲೊಡಲ್ಲಿ ಇಳಿಯುತ್ತಾಳೆಂದು ತಿಳಿದಾಗ, ಅಲ್ಲಿಯ ಸ್ಟೇಷನ್ ನಲ್ಲಿ ಜನ ಕಿಕ್ಕಿರಿದು ತುಂಬಿದ್ದರು. ಮೇರಿ ಜನಕ್ಕೆ ಹೆದರಿ ಹಿಂದಿನ ಸ್ಟೇಷನ್ ನಲ್ಲಿಯೇ ಇಳಿದು ಬಿಟ್ಟಿದ್ದಳು. ಸುದ್ದಿ ಹೇಗೆ ಮುಟ್ಟಿತೋ ಏನೋ, ಮೋಟಾರ್ ಕಾರುಗಳು ಹಿಂದಿನ ಸ್ಟೇಷನ್ನಿಗೆ ಓಡಿ, ತಪ್ಪಿಸಿಕೊಂಡು ಹೋಗುತ್ತಿದ್ದ ಮೇರಿಯನ್ನು ಅಲ್ಲಿಯೇ ಹಿಡಿದುವು.

ಮೆಡೇಮ್ ಕ್ಯೂರಿಗೆ ತಾವು ಮಾಡಬೇಕೆಂದಿದ್ದ, ಆದರಸತ್ಕಾರಗಳನ್ನು ಅವಳಿಗೆ ಹೇಗಾದರೂ ಮುಟ್ಟಿಸಲು, ಅಮೆರಿಕಾದ ಜನ ಇನ್ನೊಂದು ಸಾಯ ಮಾಡಿದರು. ಮೆಡೇಮ್ ಕ್ಯೂರಿಯ ಮಕ್ಕಳು ಐರೀನ್ ಮತ್ತು ಈವ್ ಕ್ಯೂರಿಯನ್ನು ಮೇರಿಯ ಸ್ಥಾನದಲ್ಲಿ ನಿಲ್ಲಿಸಿ, ಅವರಿಗೇ ಎಲ್ಲವನ್ನೂ ಒಪ್ಪಿಸಿ ದರು. ಐರೀನ್, ವಿಶ್ವವಿದ್ಯಾಲಯದ ಗೌನ್ ಧರಿಸಿ, ಮೇರಿಯಾಗಿ ನಿಂತು,

ಗೌರವ ಪ್ರಶಸ್ತಿಗಳನ್ನೆಲ್ಲ ಸ್ವೀಕರಿಸಿದಳು. ಹದಿನಾರು ವರ್ಷದ ಈವ್ ಕ್ಯೂರಿ ಗಂಭೀರವಾದ ಭಾಷಣಗಳನ್ನು ಆಲಿಸಿ ವಂದನೆಗಳನ್ನರ್ಪಿಸಬೇಕಾಯಿತು.

ಮೇ ೨೫ನೆಯ ದಿನ ಮೆಡೇಮ್ ಕ್ಯೂರಿ, ನ್ಯೂಯಾರ್ಕ್‌ನಲ್ಲಿ ಕೊಲಂಬಿಯಾ ವಿಶ್ವವಿದ್ಯಾಲಯದ ಡಾಕ್ಟರೇಟನ್ನು ಪಡೆದಳು. ಚಿಕಾಗೊ ಪಟ್ಟಣಕ್ಕೆ ಹೋದಾಗ, ಅಲ್ಲಿಯ ವಿಶ್ವವಿದ್ಯಾಲಯದ ಗೌರವ ಸದಸ್ಯೆಯಾಗಿ ಅನೇಕ ಡಿಗ್ರಿಗಳನ್ನು ಪಡೆದಳು ಚಿಕಾಗೊದಲ್ಲಿದ್ದ ಪೋಲಿಷ್ ಜನಗಳೆಲ್ಲ ಸೇರಿ, ಮೇರಿಯನ್ನು ಸ್ವಾಗತಿಸಿ ಸತ್ಕರಿಸಿದರು. ತಮ್ಮ ದೇಶವನ್ನು ತೊರೆದು ಇಲ್ಲಿ ಬಂದು ಸೇರಿದ್ದ ಈ ಜನರ ಭಾಗಕ್ಕೆ ಮೇರಿ, ಪ್ರತಿಭಾಯುತಳಾದ ವಿಜ್ಞಾನಿ ಮಾತ್ರವಲ್ಲ. ತಮ್ಮ ಪ್ರೀತಿಯ ತಾಯ್ನಾಡಿನ ಆದರ್ಶ ಪುತ್ರಿಯಾಗಿದ್ದಳು. ಪೋಲೆಂಡಿನ ಗೌರವವನ್ನು ಈ ದೂರ ದೇಶದಲ್ಲಿ ಹರಡಲು ಬಂದಿದ್ದ ಮೆಡೇಮ್ ಕ್ಯೂರಿಯನ್ನು ನೋಡಿ ಸಂತೋಷ ಹಿಡಿಸಲಾರದೆ, ಅಲ್ಲಿ ನೆರೆದಿದ್ದ ಹೆಂಗುಸರು, ಗಂಡುಸರು ಕಣ್ಣೀರು ಸುರಿಸುತ್ತ ಮೇರಿಯ ಕೈಯನ್ನು ಮುದ್ದಿಟ್ಟರು.

ಮೆಡೇಮ್ ಕ್ಯೂರಿ, ಸ್ವಲ್ಪ ವಿಶ್ರಾಂತಿ ಪಡೆದು, ಪುನಃ ಎಳೆಂಟು ವಿಶ್ವವಿದ್ಯಾಲಯಗಳನ್ನು ನೋಡಿಕೊಂಡು ಜೂನ್ ೨೮ನೆಯ ದಿನ ಫ್ರಾನ್ಸ್‌ಗೆ ಹಿಂದಿರುಗಲು 'ಒಲಿಂಪಿಕ್' ಹತ್ತಿದಳು. ಅವಳಿದ್ದ ಕ್ಯಾಬಿನ್‌ನಲ್ಲಿ ಹೂಗಳು ರಾಶಿರಾಶಿಯಾಗಿ ತುಂಬಿಹೋಗಿದ್ದುವು.

---

ಅಧ್ಯಾಯ ಇಪ್ಪತ್ತಮೂರು

## ಫ್ರಾನ್ಸ್ ಮತ್ತು ಪೋಲೆಂಡ್

ಅಮೆರಿಕಾ. ಮೇರಿಯ ಮನಸ್ಸಿನ ಮೇಲೆ ಅಪೂರ್ವವಾದ ಪರಿಣಾಮವನ್ನುಂಟು ಮಾಡಿತು. ಅಲ್ಲಿಯ ಅಪಾರವಾದ ಐಶ್ವರ್ಯ, ಸ್ತ್ರೀಯರ ಮುಂದಾಳುತನ, ವಿದ್ಯಾಭ್ಯಾಸದಲ್ಲಿನ ಶಿಸ್ತು, ಆ ಸುಸಜ್ಜಿತವಾದ ಅರಮನೆಯಂತಿದ್ದ ಪ್ರಯೋಗಶಾಲೆಗಳು, ಅಲ್ಲಿಯ ಆಸ್ಪತ್ರೆಗಳು, ಮೇರಿಯನ್ನು ಬೆರಗುಗೊಳಿಸಿದುವು. ಅಲ್ಲಿನ ಅನೇಕ ಆಸ್ಪತ್ರೆಗಳಲ್ಲಿ ಕ್ಯಾನ್ಸರ್ ಚಿಕಿತ್ಸೆ-

ಗೋಸ್ಕರ ರೇಡಿಯಂ ಧಾರಾಳವಾಗಿ ಉಪಯೋಗವಾಗುತ್ತಿತ್ತು. ರೇಡಿಯಂ ಚಿಕಿತ್ಸೆಗೋಸ್ಕರ ಮೀಸಲಾಗಿದ್ದ ಒಂದು ಆಸ್ಪತ್ರೆಯೂ ಇಲ್ಲದ ಫ್ರಾನ್ಸಿನ ಕರುಣಾಜನಕ ಸ್ಥಿತಿ ಮೇರಿಯ ಮನಸ್ಸಿನಲ್ಲಿ ಸುಳಿದುಹೋಯಿತು. ಅಮೆರಿಕಾದಿಂದ ಮೇರಿಯ ಮನಸ್ಸಿನ ಮೇಲುಂಟಾದ ಪ್ರಭಾವ ಇಷ್ಟೇ ಅಲ್ಲ. ಫ್ರಾನ್ಸಿನಲ್ಲಿ ಅವಳ ಸ್ಥಾನ ಎಲ್ಲಿರಬೇಕೆಂಬುದನ್ನು ಅದು ತೋರಿಸಿ ಕೊಟ್ಟಿತು. ಮೇರಿ, ಸ್ವಾಭಾವಿಕವಾದ ತನ್ನ ಹಿಂಜರಿಯುವ ಮನಸ್ಸನ್ನು, ಅಂಜಿಕೆಯ ಹೃದಯವನ್ನು, ಈಗ ಇತರರಿಂದ ಬಚ್ಚಿಟ್ಟುಕೊಳ್ಳಬೇಕಾಯಿತು. ಮೆಡೇಮ್ ಕ್ಯೂರಿಯಂತಹ ಅದ್ವಿತೀಯಳಾದ ಹೆಂಗುಸು, ಸಾರ್ವಜನಿಕ ಜೀವನದಿಂದ ಹಿಂದೆ ಸರಿಯುವ ಅವಕಾಶ ಇನ್ನು ಮುಗಿದುಹೋಯಿತು. ವಿಜ್ಞಾನಸಂಸ್ಥೆಗಳು, ಕೂಟಗಳು ಮೇರಿಯನ್ನುಳಿದು ನಡೆಯುತ್ತಿರಲಿಲ್ಲ. ವರ್ಷಗಳು ಉರುಳುತ್ತ ಹೋದಂತೆ, ಮೆಡೇಮ್ ಕ್ಯೂರಿ ಮುಪ್ಪಿನ ಕಡೆಗೆ ಹೆಚ್ಚು ಹೆಚ್ಚು ಸರಿದಂತೆ, ಅವಳ ಜನ ಅವಳನ್ನು ಪ್ರೀತಿಸತೊಡಗಿದರು. ಫ್ರಾನ್ಸಿನಿಂದಾಚೆ ಇತರ ದೇಶದ ಜನ, ಮೇರಿಯನ್ನು ಎಣೆಯಿಲ್ಲದಂತೆ ಗೌರವಿಸಿದರು. ಮೇರಿ, ದೇಶದಿಂದ ದೇಶಕ್ಕೆ ಪ್ರಯಾಣ ಮಾಡಿದಳು. ವಿಜ್ಞಾನದ ಸಭೆಗಳಲ್ಲಿ, ಚರ್ಚೆಗಳಲ್ಲಿ, ಭಾಷಣಗಳಲ್ಲಿ ಭಾಗ ವಹಿಸಿದಳು. ಹಾಲೆಂಡ್, ಇಂಗ್ಲೆಂಡ್, ಸ್ಪೇನ್, ಇಟಲಿ, ಒಂದೊಂದಾಗಿ ಅನೇಕ ದೇಶಗಳು, ಮೇರಿಯನ್ನು ತಮ್ಮಲ್ಲಿಗೆ ಅನೇಕ ಸಲ ಬರಮಾಡಿಕೊಂಡುವು. ಮೆಡೇಮ್ ಕ್ಯೂರಿಯ ಉಜ್ವಲವಾದ ಕೀರ್ತಿ ದೇಶ ವಿದೇಶಗಳಲ್ಲಿ ಹರಡಿತು. ದೂರ ದೇಶವಾದ ಚೀನಾದ ಕನ್‌ಫ್ಯೂಷಸ್ ದೇವಸ್ಥಾನದಲ್ಲಿ, ಜನತೆಯ ಉದ್ಧಾರಕರ್ತರೆನಿಸಿದ, ಬುದ್ಧ ನ್ಯೂಟನ್ ಮುಂತಾದವರ ಜೊತೆಯಲ್ಲಿ, ಮೇರಿಯ ಭಾವಚಿತ್ರ ಕಂಗೊಳಿಸಿತು. ಅನೇಕ ಪ್ರಯೋಗಶಾಲೆಗಳು, ವಿಶ್ವ-ವಿದ್ಯಾಲಯಗಳು, ಮೇರಿಯ ಸಲಹೆ ಕೇಳಿ ಅದರಂತೆ ನಡೆದುವು.

ಮೆಡೇಮ್ ಕ್ಯೂರಿ ಅಮೇರಿಕಾದಿಂದ ಹಿಂದಿರುಗಿದ ಮೇಲೆ, ಫ್ರಾನ್ಸಿನ ವಿಜ್ಞಾನಪ್ರಪಂಚ, ಮೇರಿ ತಮ್ಮೊಡನಿಲ್ಲದಿದ್ದರೆ, ತಮಗೆ ಅದು ಅಗೌರವವೆಂದು ತಿಳಿಯಿತು. ಅಲ್ಲಿಯ ಸೈನ್ಸ್ ಅಕ್ಯಾಡೆಮಿಯವರು ಮೇರಿಯನ್ನೂ ತಮ್ಮಲ್ಲಿ ಒಬ್ಬ ಸದಸ್ಯೆಯನ್ನಾಗಿ ಸೇರಿಸಿಕೊಳ್ಳಲು ನಿರ್ಧರಿಸಿದರು. ಇಪ್ಪತ್ತು ವರ್ಷಗಳ ಕೆಳಗೆ ಇದೇ ಸೈನ್ಸ್ ಅಕ್ಯಾಡೆಮಿ ಉಮೇದುವಾರರಾಗಿ ನಿಂತಿದ್ದ

ಇಬ್ಬರಲ್ಲಿ ಪಿಯುರಿಯನ್ನು ಬಿಟ್ಟು ಇನ್ನೊಬ್ಬರನ್ನು ಆರಿಸಿಕೊಂಡಿತ್ತು. ಪಿಯರಿ ಕ್ಯೂರಿ ಸತ್ತುಹೋದ ಮೇಲೆ ೧೯೧೧ರಲ್ಲಿ ಮೇರಿ, ಉಮೇದುವಾರಳಾಗಿ ನಿಂತಾಗ, ಪಿಯುರಿಯ ಆದೇ ಪ್ರತಿಸ್ಪರ್ಧಿ, ಹೆಂಗುಸಿಗೆ ತಮ್ಮೊಡನೆ ಸ್ಥಾನ ಎಲ್ಲನೆಂದು ಘೋಷಿಸಿದ್ದುಂಟು. ಹನ್ನೊಂದು ವರ್ಷಗಳು ಕಳೆಯುವ ಹೊತ್ತಿಗೆ, ಹೆಂಗುಸೆಂದು ಸ್ಥಳ ಕೊಡದೆ ಹೋಗಿದ್ದ ಗಂಡುಸರು, ಮೇರಿ ಯನ್ನು ಉಮೇದುವಾರಳಾಗಿ ಕೂಡ ನಿಲ್ಲಿಸದೆ, ತಮ್ಮ ಸಂಪ್ರದಾಯವನ್ನೆಲ್ಲ ಮುರಿದು, ಅವಳನ್ನು ಸದಸ್ಯೆಯನ್ನಾಗಿ ಮಾಡಿದರು. ಉಮೇದುವಾರರಾಗಿ ನಿಂತಿದ್ದವರೆಲ್ಲ, ತಮ್ಮ ಉಮೇದುವಾರಿಕೆಯನ್ನು ಹಿಂದಕ್ಕೆ ತೆಗೆದುಕೊಂಡರು. ೧೯೨೨ನೆಯ ಫೆಬ್ರುವರಿ, ಏಳನೆಯ ದಿನ ಮೇರಿಯ ಚುನಾವಣೆಯಾಗಿ, ಅಲ್ಲಿಯ ಅಧ್ಯಕ್ಷ, ಮೇರಿಯನ್ನು ಬಾಯಿತುಂಬ ಹೊಗಳಿದ!

‘ದೇಶಾಭಿಮಾನಿಯಾಗಿ, ಯುದ್ಧಕಾಲದಲ್ಲಿಯೂ, ಶಾಂತಿಯ ದಿನ ಗಳಲ್ಲಿಯೂ, ಕರ್ತವ್ಯಕ್ಕಿಂತ ಹೆಚ್ಚಾಗಿ ದೇಶಕ್ಕೆ ಉಪಕಾರ ಮಾಡಿ, ವಿಜ್ಞಾ ನಕ್ಕೂ, ಇತರ ಕೆಲಸಗಳಿಗೂ ಜೀವ ತೇದು, ಉದಾರ ಹೃದಯೆಯೂ, ದೊಡ್ಡ ವಿಜ್ಞಾನಿಯೂ ಆಗಿರುವ ನಿನ್ನನ್ನು ನಾವು ವಂದಿಸುತ್ತೇವೆ. ನೀನು ಇಲ್ಲಿರುವುದರಿಂದ, ನಿನ್ನ ಜೀವನದ ಉದಾಹರಣೆಯಿಂದಲೂ, ನಿನ್ನ ಹೆಸರಿನ ಕೀರ್ತಿಯಿಂದಲೂ, ನಮಗೆ ನೈತಿಕಬಲ ಒದಗುತ್ತದೆ ನಿನ್ನನ್ನು ನಾವು ವಂದಿಸುತ್ತೇವೆ. ನೀನು ನಮ್ಮೊಡನಿರುವುದು ನಮಗೊಂದು ಹೆಮ್ಮೆ. ಅಕ್ಯಾಡೆಮಿಯನ್ನು ಪ್ರವೇಶಿಸುವ ಫ್ರಾನ್ಸ್ ದೇಶದ ಹೆಂಗುಸರಲ್ಲಿ ನೀನು ಮೊದಲನೆಯವಳು. ಆದರೆ, ಹಾಗೆ ಪ್ರವೇಶಿಸುವ ಯೋಗ್ಯತೆ, ಯಾವ ಹೆಂಗುಸಿಗೆ ತಾನೇ ನಿನಗಿಂತ ಹೆಚ್ಚಾಗಿದೆ?’

೧೮೯೮ರಲ್ಲಿ, ರೇಡಿಯಂ, ಇಬ್ಬರು ಬಡ ವಿಜ್ಞಾನಿಗಳ ಶ್ರಮದ ಫಲ ವಾಗಿ ಬೆಳಕಿಗೆ ಬಂದು, ೧೯೨೩ರ ಹೊತ್ತಿಗೆ ಇಪ್ಪತ್ತೈದು ವರ್ಷ ಕಳೆದು ಹೋಗಿತ್ತು. ೧೯೨೦ರಲ್ಲಿ ಸ್ಥಾಪಿತವಾದ ಕ್ಯೂರಿ ಫೌಂಡೇಷನ್ ಈಗ ಅದರ ರಜತೋತ್ಸವವನ್ನು ಮಾಡಲು ಸಿದ್ಧವಾಯಿತು. ಫ್ರಾನ್ಸ್ ಸರ್ಕಾರ, ಇದರೊಡನೆ ಸಹಕರಿಸಿ, ಮೆಡೇಮ್ ಕ್ಯೂರಿಗೆ ವರ್ಷಕ್ಕೆ ನಲವತ್ತು ಸಾವಿರ ಫ್ರಾಂಕುಗಳ ವೇತನವನ್ನು ಗೊತ್ತುಮಾಡಿತು. ಮೇರಿಯಾದ ಮೇಲೆ, ಐರೀನ್ ಮತ್ತು ಈವ್ ಕೂಡ ಈ ವೇತನದ ಹಕ್ಕನ್ನು ಹೊಂದಿದರು.

೧೯೩೩ನೆಯ ಡಿಸೆಂಬರ್ ೨೬ನೆಯ ದಿನ ಸೋರ್ಬನ್ ಉತ್ಸಾಹದಿಂದ ಜರಿಯುವಂತಿತ್ತು. ವಿಜ್ಞಾನಿಯೊಬ್ಬಳನ್ನು ಗೌರವಿಸುವ ಈ ಹಬ್ಬದಲ್ಲಿ ಫ್ರಾನ್ಸಿಗೆ ಫ್ರಾನ್ಸೇ ಭಾಗ ವಹಿಸಿತ್ತು. ಫ್ರಾನ್ಸಿನ ಮತ್ತು ಇತರ ದೇಶಗಳ ವಿಶ್ವವಿದ್ಯಾಲಯಗಳು, ವಿಜ್ಞಾನ ಸಂಸ್ಥೆಗಳು, ದೊಡ್ಡ ದೊಡ್ಡ ಶಾಲೆಗಳು, ವಿದ್ಯಾರ್ಥಿ ಸಂಸ್ಥೆಗಳು, ಪತ್ರಿಕಾ ಸಂಸ್ಥೆ, ಪಾರ್ಲಿಮೆಂಟ್ ಇವುಗಳು ಕಳುಹಿಸಿದ ಪ್ರತಿನಿಧಿಗಳು ಹಜಾರದಲ್ಲಿ ಕಿಕ್ಕಿರಿದು ತುಂಬಿದ್ದರು. ವೇದಿಕೆಯ ಮೇಲೆ ಮಂಡಿಸಿದ್ದ ಗಣ್ಯ ವ್ಯಕ್ತಿಗಳ ಮತ್ತು ಭಾಷಣಕಾರರ ಮಧ್ಯೆ ಜೋಸೆಫ್, ಹೆಲಾ, ಬ್ರೋನ್ಯ, ತಂಗಿಯ ಸಂತೋಷದಲ್ಲಿ ಭಾಗಿಗಳಾಗಲು ಬಂದಿದ್ದ ಮುಪ್ಪಿನ ಮುದುಕರು, ಕಣ್ಣೊರಸಿಕೊಳ್ಳುತ್ತ ಕುಳಿತಿದ್ದರು. ಭಾಷಣಗಳೆಲ್ಲ ಮುಗಿದ ಮೇಲೆ ಮೇರಿ ಎದ್ದು, ಭಾಷಣ ಮಾಡಿ ಎಲ್ಲರನ್ನೂ ವಂದಿಸಿದಳು. ಇಪ್ಪತ್ತೈದು ವರ್ಷಗಳ ಕೆಳಗೆ, ತನ್ನ ಜೊತೆಜೊತೆಯಲ್ಲಿ ಕೆಲಸ ಮಾಡಿ, ತನ್ನನ್ನು ಪ್ರೀತಿಸಿದ್ದ ವ್ಯಕ್ತಿಯೊಬ್ಬನನ್ನು ಅವಳು ಈಗ ಮರೆಯಲಿಲ್ಲ. ಕಣ್ಮರೆಯಾಗಿ ಹೋಗಿದ್ದರೂ, ತನ್ನ ಹೃದಯದಲ್ಲಿ ಶಾಶ್ವತವಾಗಿ ಸ್ಥಳಮಾಡಿಕೊಂಡಿದ್ದ ತನ್ನ ಪ್ರಿಯರಿಯ ವಿಷಯವಾಗಿ ಅಭಿಮಾನದಿಂದ ಮಾತಾಡಿದಳು. ಆಮೇಲೆ ರೇಡಿಯಂ ಇನ್‌ಸ್ಟಿಟ್ಯೂಟಿನ ಭವಿಷ್ಯದ ವಿಷಯ ಪ್ರಸ್ತಾಪಿಸಿದಳು.

ಇಷ್ಟು ಕೆಲಸಗಳ ಮಧ್ಯೆ, ಮೇರಿ ತನ್ನ ತಾಯ್ನಾಡಾದ ಪೋಲೆಂಡ್‌ನ್ನು ಮರೆಯಲಿಲ್ಲ ಬಾಳು ಮುಪ್ಪಿನ ಕಡೆಗೆ ಸರಿಯುತ್ತಿದ್ದಂತೆ, ಹುಟ್ಟಿದ ದೇಶ, ಹುಟ್ಟಿದ ಮನೆಯ ಮೋಹ, ಅವಳನ್ನು ಹೆಚ್ಚುಹೆಚ್ಚಾಗಿ ಸೆಳೆಯುತ್ತಿತ್ತು. ಮೇರಿ ನಾಲ್ಕು ಸಲ ಪೋಲೆಂಡಿಗೆ ಹೋಗಿ ಬಂದಳು. ಒಂದು ಸಲಕ್ಕಿಂತ ಇನ್ನೊಂದು ಸಲ ಅವಳಿಗೆ ತೌರೂರು, ಸೌಂದರ್ಯದಲ್ಲಿ ಮಿಂಗಿಲಾಗುತ್ತಿದ್ದಂತೆ ಕಾಣಿಸುತ್ತಿತ್ತು. ಅಲ್ಲಿಯ ಬೆಟ್ಟ-ಗುಡ್ಡಗಳು,ಆ ನದಿಗಳು, ಬಂಡೆಗಳು, ಆ ಪ್ರಕೃತಿ, ಆ ನೆಲ, ಮೇರಿಯ ಪ್ರೀತಿಯನ್ನು ಸೂರೆಮಾಡಿದ್ದುವು. ಮೇರಿ, ಮಗಳಿಗೆ ಬರೆದ ಕಾಗದಗಳಲ್ಲಿ ಈ ಸೌಂದರ್ಯವನ್ನು ಬಣ್ಣಿಸಿ ಬಣ್ಣಿಸಿ ಹೇಳಿದಳು.

ಪೋಲೆಂಡಿನ ಕಡೆಗೆ ಗಮನ ತಿರುಗಿದ ಕೂಡಲೆ, ಮೇರಿ, ರೇಡಿಯಂ ವಿಷಯದಲ್ಲಿ ಸಂಶೋಧನೆಗಳನ್ನು ಮಾಡುವುದಕ್ಕೂ, ಕ್ಯಾನ್ಸರ್ ಚಿಕಿತ್ಸೆಯನ್ನು ಕೈಕೊಳ್ಳುವುದಕ್ಕೂ, ವಾರ್ಸಾದಲ್ಲಿ ರೇಡಿಯಂ ಇನ್‌ಸ್ಟಿಟ್ಯೂಟ್

ಒಂದನ್ನು ಸ್ಥಾಪಿಸಬೇಕೆಂದು ನಿರ್ಧರಿಸಿದಳು. ಹಣ ಕೂಡಿಸಲು ಮೇರಿಗೆ ವಿರಾಮವಿರಲಿಲ್ಲ. ಆದರೆ, ಎಳೆಯುತನದಿಂದ ತಂಗಿಯನ್ನು ಸಾಕಿ ಸಲಹಿದ್ದ ಅಕ್ಕ ಪೋಲೆಂಡಿನಲ್ಲಿರುವ ತನಕ ಮೇರಿ ಚಿಂತಿಸಬೇಕಾದುದೇನು? ಮುಪ್ಪಿನಿಂದ ಕುಸಿದುಹೋಗಿದ್ದರೂ, ಬ್ರೊನ್ಯ, ಇಲ್ಲದ ಉತ್ಸಾಹ ತಂದುಕೊಂಡು, ಎಲ್ಲ ಜವಾಬ್ದಾರಿಗಳನ್ನೂ ವಹಿಸಿಕೊಂಡಳು. ಕೂಡಲೆ ಪೋಲೆಂಡಿನ ಹಳ್ಳಿ ಹಳ್ಳಿಗಳಲ್ಲಿಯೂ, ಪೋಲೆಂಡಿನಲ್ಲಿ ಹುಟ್ಟಿದ ವಿಜ್ಞಾನಿಯ ಭಾವಚಿತ್ರವೂ, ಹಣಕ್ಕಾಗಿ ಪ್ರಾರ್ಥನೆಯೂ ಕಾಣಿಸಿಕೊಂಡುವು. 'ಮೇರಿ ಸ್ಕ್ಲೊಡೊವ್‌ಸ್ಕಿ—ಕ್ಯೂರಿ ಇನ್‌ಸ್ಟಿಟ್ಯೂಟ್‌ಗೆ ಒಂದು ಇಟ್ಟಿಗೆಯನ್ನು ಕೊಂಡು ಕೊಡಿರಿ' ಎಂದು ಆ ಪ್ರಾರ್ಥನೆಯಲ್ಲಿ ಕೇಳಿಕೊಳ್ಳಲಾಗಿತ್ತು. ಬೇಗ ಹಣ ಒದಗಿತು. ೧೯೩೨ರಲ್ಲಿ ಮೇರಿ ತಳಪಾಯದ ಕಲ್ಲನ್ನು ಹಾಕಿ ಕಟ್ಟಡವನ್ನು ಮೊದಲುಮಾಡಿಕೊಟ್ಟಳು. ಈ ಉತ್ಸವದಲ್ಲಿ ಹೊಸಬರ ಮಧ್ಯೆ ಇರುವ ಬಿಗುಮಾನ ಸ್ವಲ್ಪವೂ ಇರಲಿಲ್ಲ. ಮನೆಗೆ ಹಿಂದಿರುಗಿ ಒಂದು ಒಡನಾಡಿಗಳೊಡನೆ ಬೆರೆಯುವ ಮಗಳಂತೆ, ಮೇರಿ ಈ ಅತ್ಯಂತ ಪರಿಚಯದ ಸ್ಥಳಕ್ಕೆ ಹಿಂದಿರುಗಿ ಬಂದಿದ್ದಳು. ತಾಯಿಯೊಡನೆ ರಕ್ತಗತವಾಗಿ ಬಂದಿದ್ದ ಪ್ರೀತಿಯ ಪೋಲಿಷ್ ಭಾಷೆಯನ್ನಾಡುತ್ತಿದ್ದಳು. ಈ ಉತ್ಸವದಲ್ಲಿ ಅಧ್ಯಕ್ಷತೆ ವಹಿಸಿದ್ದಾತ, ಮೇರಿ ಮೊದಲು ಪ್ಯಾರಿಸ್‌ಗೆ ಓದಲು ಬಂದಿದ್ದಾಗ ಅವಳ ಸ್ನೇಹಿತನಾಗಿದ್ದವನು. ಆಗ, ಪೋಲಿಷ್ ಜನಾಂಗದವರೆಂಬ ಒಂದು ಪ್ರೀತಿಯಿಂದ, ಇವರೆಲ್ಲ ಒಂದು ಮನೆಯವರೆಂದು ಭಾವಿಸಿಕೊಂಡಿದ್ದವರು. ಎಷ್ಟೋ ವರ್ಷಗಳು ಉರುಳಿಹೋಗಿ ಒಬ್ಬೊಬ್ಬರು ಒಂದೊಂದು ದಾರಿಯಾದ ಮೇಲೆ, ಈಗ ನೆನಪಿನಲ್ಲಿ ಮಧುರವಾಗಿ ಉಳಿದಿದ್ದ ಹಿಂದಿನ ಕತೆಗಳು ಒಂದೊಂದಾಗಿ ಈಚೆಗೆ ಬಂದುವು. ಅಧ್ಯಕ್ಷ, ಮೇರಿಯನ್ನು ಕುರಿತು, 'ಮೂವತ್ತುಮೂರು ವರ್ಷಗಳ ಕೆಳಗೆ ನಾನು ಪೋಲೆಂಡಿಗೆ ಹೊರಟು ನಿಂತಿದ್ದಾಗ, ನೀನು ನನಗೆ ಪ್ರಯಾಣದಲ್ಲಿ ಉಪಯೋಗಿಸುವ ಪುಟ್ಟ ದಿಂಬೊಂದನ್ನು ಕೊಟ್ಟದ್ದು ನೆನಪು ಇದೆಯೆ?' ಎಂದು ಪ್ರಶ್ನೆ ಮಾಡಿದ. 'ನೀನು ಅದನ್ನು ನನಗೆ ಹಿಂದಕ್ಕೆ ಕೊಡುವುದನ್ನು ಮರೆತದ್ದೂ ನನಗೆ ನೆನಪಿದೆ' ಎಂದು ಮೇರಿ ನಗುನಗುತ್ತ ಉತ್ತರ ಕೊಟ್ಟಳು.

ವಾರ್ಸಾದ ರೇಡಿಯಂ ಇನ್‌ಸ್ಟಿಟ್ಯೂಟಿನ ಕಟ್ಟಡ ಮುಗಿಯಿತು.

...ತ್ತು ಬ್ರೊನ್ಯ ತಾವುಗಳು ಉಳಿಸಿದ್ದ ಹಣದಲ್ಲಿ ಹೆಚ್ಚು ಭಾಗವನ್ನು ಕೊಟ್ಟರೂ, ಅಲ್ಲಿಗೆ ಬೇಕಾಗಿದ್ದ ಒಂದು ಗ್ರಾಮ್ ರೇಡಿಯಂಗೆ ...ಷ್ಟು ಹಣ ಒದಗಲಿಲ್ಲ. ಮೇರಿ ಕ್ಯೂರಿ, ಯೋಚಿಸಿ ಯೋಚಿಸಿ ಪುನಃ ...ರಿಕಾವನ್ನೇ ಮರೆಹೊಕ್ಕಳು. ಅಮೆರಿಕಾವೂ ಹಿಂದುಳಿಯಲಿಲ್ಲ. ತಿರುಗಿ ...ಷ್ಟು ಹಣವನ್ನೂ ಒದಗಿಸಿಕೊಟ್ಟಿತು. ತಾನು ಜನಕ್ಕೆ ತೋರಿಸಿಕೊಟ್ಟ ...ಡಿಯಂಗೋಸ್ಕರ ಇತರರಲ್ಲಿ ಹೀಗೆ ಬೇಡುವುದನ್ನು, ಎಷ್ಟೋ ವರ್ಷಗಳ ಒಂದು ಸಣ್ಣ ಕೆಲಸ ಮಾಡಿ, ಮೇರಿ ತಪ್ಪಿಸಿಕೊಳ್ಳಬಹುದಾಗಿತ್ತು. ...ಡಿಯಂನ್ನು ತನ್ನದಾಗಿ ಮಾಡಿಕೊಳ್ಳದೆ, ಕಾಲಿಗೆ ತೊಡಕಿದ ... ಒಲ್ಲದೆಹೋಗಿ ಹೀಗೆ ಒಡತನವನ್ನು ಒಲಿದು ಪಡೆದುದು. ತನ್ನ ...ಂಬ ಭಾವ ಮಾತ್ರ ಮೇರಿಯ ಮನಸ್ಸಿಗೆ ತಟ್ಟುತ್ತಿರಲಿಲ್ಲ. ಆ ...ನ ನಡೆ, ಆ ಬುದ್ಧಿಯ ಓಟ ಯಾವಾಗಲೂ ಬೇರೆಯ ದಿಕ್ಕಿನಲ್ಲಿ. ...ಾ ಬಹುಮಾನವಾಗಿ ಕೊಟ್ಟ ಇನ್ನೊಂದು ಗ್ರಾಮ್ ರೇಡಿಯಂ ...ರಿಸಲು, ೧೯೨೯ನೆಯ ಅಕ್ಟೋಬರ್‌ನಲ್ಲಿ ಮೇರಿ ಪುನಃ ಅಲ್ಲಿಗೆ ಹೋಗಿ ಆ ದೇಶ ಈ ಸಲವೂ ವಿಜ್ಞಾನಿಯನ್ನು ಉತ್ಸಾಹದಿಂದ ಗೌರವಿ ...೩೨ನೆಯ ಮೇ ೨೯ನೆಯ ದಿನ, ವಾರ್ಸಾದ ರೇಡಿಯಂ ಇನ್‌ಸ್ಟಿ ...ೇರಿಯ ಕಣ್ಣೆದುರಿಗೆ ಸುಸಜ್ಜಿತವಾಗಿ ತೆರೆಯಲ್ಪಟ್ಟಿತು. ಮೇರಿ, ತಾಯಿನೆಲದಲ್ಲಿ ಕಾಲಿಟ್ಟುದು ಇದೇ ಕೊನೆಯ ಸಲ.

—

...ಯ ಇಪ್ಪತ್ತನಾಲ್ಕು

## ಮುಪ್ಪು



ಮುಪ್ಪು ಕವಿಯುತ್ತ ಬಂದಂತೆ, ಮೇರಿಯ ಬಾಳಿನಲ್ಲಿ ಗೆಲವು ಕಾಲೂರುತ್ತ ಬಂತು. ಕೀರ್ತಿ ಕುಡಿಯೊಡೆಯಿತು. ವಿಜ್ಞಾನಪ್ರಪಂಚದಲ್ಲಿ ಮೇರಿಗೆ ಅಪೂರ್ವವಾದ ಸ್ಥಾನವೊಂದು ಮೀಸಲಾಗಿತ್ತು. ಇಷ್ಟೊಂದು

ಗೆಲವು ಸಂಭ್ರಮಗಳ ಸುಳಿಗೆ ಸಿಕ್ಕಿದರೂ, ಮೇರಿಯ ಹೃದಯ ಬದಲಾಗಲಿಲ್ಲ. ಆ ಸ್ವಚ್ಛವಾದ ಮನಸ್ಸಿನಲ್ಲಿ, ಹೆಮ್ಮೆ ಅಹಂಕಾರಗಳ ಸ್ವಲ್ಪವೂ ಬೀಳಲಿಲ್ಲ. ಬಾಳಿನಲ್ಲಿ ಸಣ್ಣ ಸಣ್ಣ ಆಸೆಗಳಿಗೆ ಕೈಚಾಚಿ ವ ಮೇರಿಯ ಆಯುಷ್ಯದಲ್ಲಿ ಮುಗಿದುಹೋಗಿತ್ತು. ಯೌವನ ... ದುಃಖ, ಆಸೆ ಅಭಿಲಾಷೆಗಳನ್ನೆಲ್ಲ ಅಳಿಸಿಬಿಟ್ಟಿತು. ಈಗ, ಪ್ರೀತಿಯ ಬ್ರೊನ್ಯಳ ದುಃಖವೂ ಮೇರಿಯ ಹೃದಯವನ್ನು ಅಲ್ಲಾಡಿಸಿತು. ಇಬ್ಬರು ಮಕ್ಕಳೂ ಮೊದಲೇ ತೀರಿಹೋದರು. ೧೯೩೦ರ ಹೊತ್ತಿಗೆ, ಭ ಕ್ಯಾಸಿಮಿರ್ ಡ್ಲುಸ್ಕಿ ಸತ್ತುಹೋಗಿ, ಅಕ್ಕನ ಮನೆ ಪೂರ್ತಿಯಾಗಿ ಒಡೆ ಹೋಯಿತು. ಈ ದುಃಖಗಳೆಲ್ಲ ಮೇರಿಯ ಹೃದಯವನ್ನು ಹಿಂಡಿ ಕೊಟ್ಟಂಥವುಗಳು. ನೋವು, ದುಃಖ, ಮನುಷ್ಯನ ಮನಸ್ಸನ್ನು ಪರಿಪ ಮಾಡುವುದು ನಿಜವಾದರೆ, ಅದು ಸಂಪೂರ್ಣವಾಗಿ ನಡೆದುದು ಹೆಮ್ಮೆ, ಅಟ್ಟಹಾಸಗಳು, ತಾನು, ತನ್ನದು ಎಂಬ ಅಭಿಮಾನ, ಆ ಕ ದಿಂದ ಮರೆಯಾದುವು. ಸೌಂದರ್ಯ ಅಲ್ಲಿ ಮನೆಮಾಡಿತು ತನಗೋಸ್ಕರವೇ ಉತ್ಸವಗಳು ನಡೆಯುತ್ತಿದ್ದರೂ, ಮೇರಿ ಕಿಕ್ಕಿರಿದ ಜನಸಂದಣಿಯ ದಲ್ಲಿ ಒಂಟಿಯಾಗಿರುವಳು. ಸಂಭ್ರಮದಿಂದ ತನ್ನನ್ನು ಹೊಗಳುವ ವನ್ನು ಕೇಳುತ್ತಿದ್ದರೂ. ತನ್ನನ್ನು ಗೌರವಿಸುವ ಜನರ ಉತ್ಸಾ ಕಾಣುತ್ತಿದ್ದರೂ, ಅವರ ಮಧ್ಯೆ ಕುಳಿತ ಈ ತೇಜಸ್ವಿಯಾದ ಹ ಸುಕ್ಕುಗಟ್ಟಿದ ಪೇಲವವಾದ ಮುಖದಲ್ಲಿ ಯಾವ ಭಾವವೂ ಪ್ರಕಟ ತ್ತಿರಲಿಲ್ಲ. ಈ ಉತ್ಸಾಹವೆಲ್ಲ ತನಗಾಗಿ ಎಂಬ ಹೆಮ್ಮೆಯ ಭಾವನೆ ಮನಸ್ಸಿನಲ್ಲಿ ಸುಳಿಯುತ್ತಲೂ ಇರಲಿಲ್ಲ.

ಇನ್ನು ಬಡತನವಂತೂ ಮೇರಿಯ ಜೀವನಕ್ಕೆ ಅಂಟಿ ಬಂದದ್ದು ತಂದೆಯ ಪೋಷಣೆಯಲ್ಲಿದ್ದಾಗ ಅನುಭವಿಸಿದ ಬಡತನ, ಮದುವೆಯಾದ ಮೇಲೂ ಮೇರಿಯ ಬಾಳನ್ನು ಅಂಟದೆ ಬಿಡಲಿಲ್ಲ. ಹಿಂದೆ ವಿದ್ಯಾರ್ಥಿ ಜೀವನ ದಲ್ಲಿ ಸುಖಬಡಲು ಹಣವಿಲ್ಲದೆ, ಬಡ ಪೋಲಿಷ್ ಹುಡುಗಿ ಮೇಸ್ಯ ಸ್ಕ್ಲೊಡೊವ್ಸ್ಕಿ ಆರೇಳು ಅಂತಸ್ತಿನ ಮಹಡಿಯನ್ನು ಹತ್ತಬೇಕಾದ ಸಂದರ್ಭ ಬಂದಿತ್ತು. ಯೌವನದಲ್ಲಿ, ಪಿಯರಿ ರೋಗದಲ್ಲಿ ನರಳುತ್ತಿದ್ದಾಗ ಮೇರಿ, ಬಡತನ ತಪ್ಪಿದರೆ ಸಾಕೆಂದು ಹಂಬಲಿಸಿದ್ದುಂಟು. ಈಗ, ಮುಪ್ಪಿನಲ್ಲಿ

ವು:.

ವೇತನ, ಅಮೆರಿಕಾ ಅವಳಿಗೆ ಕೊಡುತ್ತಿದ್ದ ಗೌರವ ವೇತನ ಅವಳ

ನ್ನು ಹಿಂಗಿಸಿದ್ದುವು. ಆದರೆ ಹಣ ಒದಗಿ ಒಂದಾಗಲೂ ಮೇರಿ

ಅದ ಕ್ಷನ್ನು ತನ್ನಲ್ಲಿ ಆರೋಪಿಸಿಕೊಂಡಳು. ಯೌವನದ ಶಕ್ತಿಯನ್ನೆಲ್ಲ

ಆ ದ್ದ, ಅರವತ್ತೈದು ವರ್ಷದ ಮೆಡೇಮ್ ಕ್ಯೂರಿ, ಹಗಲೆಲ್ಲ

ಆ ಾಡ್ಡಿ ಸೋತು, ಎಂಟು ಗಂಟೆಗೆ ಮನೆಗೆ ಬಂದು ಮೂರಂತಸ್ತಿನ

ಅ ್ನು ಏರುತ್ತ ಹತ್ತುವಳು. ಕೆಲಸವನ್ನು ಬಿಟ್ಟು ಬದುಕಲಾರದ

ರ ು ಬಾಯಿಂದ ಪ್ರತಿ ದಿನವೂ 'ಎಷ್ಟು ಆಯಾಸವಾಗಿದೆ!' ಎಂಬ

ಹೊರಬೀಳುತ್ತಲೇ ಇರುವುದು.

ಮೇರಿಯ ಸುತ್ತ ಎಲ್ಲಿ ನೋಡಿದರೂ, ಅವಳ ಮನೆಯಲ್ಲಿ, ಬಟ್ಟೆಯಲ್ಲಿ,

ರಾರದಲ್ಲಿ ಬಡತನ ಎದ್ದು ಕಾಣುತ್ತಿತ್ತು. ಈವ್, ಬಲವಂತದಿಂದ

ಬಟ್ಟೆಗಳನ್ನು ಕೊಳ್ಳಲು ಅಂಗಡಿಗೆ ಕರೆದುಕೊಂಡು ಹೋದರೆ,

ಮು ದೃಷ್ಟಿ ಏನುಮಾಡಿದರೂ, ಬೆಲೆಯುಳ್ಳ ಬಟ್ಟೆಗಳ ಕಡೆಗೆ ತಿರುಗದು.

ಅಂಗಡಿಯ ಕಡೆಗಂತೂ ಮೇರಿ ಸುಳಿಯುತ್ತಿರಲಿಲ್ಲ. ಹೂವಿಗೆ

ಲೆ ಎಂಬುದು ಅವಳಿಗೆ ಚೆನ್ನಾಗಿ ಗೊತ್ತು. ಮನೆಯ ಅಚ್ಚು

ಬಂದ ಹಿತ ಜೀನ್ ಪೆರಿನ್ ಮನೆಗೆ ಬಂದಾಗ ಮೇರಿಗೋಸ್ಕರ, ಅನೇಕ

ಸಿತ: ಹೂವಿನ ಹೊರೆ ಹೊತ್ತು ತರುವನು. ಅವುಗಳನ್ನು ನೋಡಿ

ಟ್ರೋ ಅನರ್ಘ್ಯ ಆಭರಣಗಳನ್ನು ಕಂಡಷ್ಟು ಸಂತೋಷಪಡುವಳು.

ಪ್ರೀ ವಾಸಮಾಡುತ್ತಿದ್ದ ಮನೆಯಲ್ಲೂ ಅದೇ ಬಡತನ ನೆಲಸಿತ್ತು.

ಐವತ್ತು ಕುರ್ಚಿಗಳನ್ನು ಧಾರಾಳವಾಗಿ ಹಿಡಿಯುವ ದೊಡ್ಡ

ಲ್ಲ, ಡಾಕ್ಟರ್ ಕ್ಯೂರಿ, ಸೊಸೆಗೆ ಕೊಟ್ಟಿದ್ದ ಐದಾರು ಕುರ್ಚಿಗಳು

ಕಾಣಿಸುತ್ತಿದ್ದುವು. ನೆಲಕ್ಕೆ ಜಮಖಾನವಾಗಲಿ, ಬಾಗಿಲು ಕಿಟಕಿ

ಗಳಾಗಲಿ ಇರಲಿಲ್ಲ. ಒರಟೊರಟಾದ ಬಟ್ಟೆಗಳು ಮೇಜುಗಳನ್ನು

ಚ್ಚಿರುತ್ತಿದ್ದುವು. ಅಲಂಕಾರ, ಶೃಂಗಾರ ಒಂದು ಕೋಣೆಯಲ್ಲೂ ತೋರಿ

ರುತ್ತಿರಲಿಲ್ಲ.

ಈ ಪುರಾತನವಾದ ಮೂರಂತಸ್ತಿನ ದೊಡ್ಡ ಮನೆಯಲ್ಲಿ ವಾಸ ಮಾಡಿದ ಇಪ್ಪತ್ತೆರಡು ವರ್ಷಗಳ ದೀರ್ಘಕಾಲದಲ್ಲಿ ಮೆಡೇಮ್ ಕ್ಯೂರಿಯ ಜೀವನದಲ್ಲಿ ಎಷ್ಟೋ ಬದಲಾವಣೆಗಳಾದುವು. ಅವಳ ಮಕ್ಕಳಿಬ್ಬರೂ

ಬೆಳೆದು ದೊಡ್ಡವರಾದರು. ರಕ್ತಗತವಾಗಿ ಬಂದಿದ್ದ ವಿಜ್ಞಾನದ ಅಭಿರುಚಿ, ದೊಡ್ಡ ಮಗಳಲ್ಲಿ ಚೆನ್ನಾಗಿ ರೂಪುಗೊಂಡಿದ್ದುದನ್ನು ಮೇರಿ ನೋಡುತ್ತ ಬಂದಳು. ವಯಸ್ಸು ಬಂದ ಮೇಲೆ ಐರೀನ್, ತಾಯ ಜೊತೆಜೊತೆಯಾಗಿ ಪ್ರಯೋಗಶಾಲೆಯಲ್ಲಿ ಕೆಲಸ ಮಾಡಿದಳು. ೧೯೨೬ನೆಯ ವರ್ಷದ ಒಂದು ದಿನ ಐರೀನ್, ತಾನು, ಫ್ರೆಡರಿಕ್ ಜೋಲಿಯೋಟ್ ಎಂಬ ತರುಣನೊಬ್ಬನನ್ನು ಮದುವೆಯಾಗುವುದಾಗಿ ತಾಯಿಗೆ ತಿಳಿಸಿದಳು. ಫ್ರೆಡರಿಕ್ ಜೋಲಿಯೋಟ್, ಕ್ಯೂರಿ ಪ್ರಯೋಗಶಾಲೆಯಲ್ಲಿಯೇ ಸಂಶೋಧನೆ ನಡೆಸುತ್ತಿದ್ದ ಅತ್ಯಂತ ಪ್ರತಿಭಾಯುತನಾದ ತರುಣ ಸುದ್ದಿ ಕೇಳಿ ಮೇರಿಗೆ ಸುಖ ಹೆಚ್ಚಾಯಿತೋ, ಮನಸ್ಸಿನ ವ್ಯಾಕುಲತೆ ಹೆಚ್ಚಾಯಿತೋ ಹೇಳುವುದು ಕಷ್ಟ. ಮಗಳ ಸಂತೋಷವನ್ನು ನೋಡಿ ತಾಯ ಹೃದಯವೂ ಸಂತೋಷಪಟ್ಟಿತು. ಆದರೆ, ಯಾವಾಗಲೂ ತನ್ನೊಡನಿದ್ದು ಕೆಲಸ ಮಾಡುತ್ತಿದ್ದ ಹಿರಿಯ ಮಗಳನ್ನಗಲಲು ಮನಸ್ಸು ಪೂರ್ತಿಯಾಗಿ ಒಡಂಬಡಲಿಲ್ಲ. ಮನಸ್ಸಿನ ಆ ಖಿನ್ನತೆ ಎಷ್ಟೆಷ್ಟು ಪ್ರಯತ್ನಪಟ್ಟರೂ, ಮೇಲೆ ತೋರದಂತೆ ಹೃದಯದಲ್ಲಿ ಅಡಗುವುದು ಸಾಧ್ಯವಾಗಲಿಲ್ಲ. ಆದರೆ, ಸೌಂದರ್ಯ, ಪ್ರತಿಭೆ, ಉತ್ಸಾಹ, ಚಟುವಟಿಕೆ ಎಲ್ಲ ಒಂದುಗೂಡಿ ಮಾತಿನ ಮಲ್ಲನಾಗಿದ್ದ ತನ್ನ ಅಳಿಯನ ಪರಿಚಯ ಹೆಚ್ಚು ಹೆಚ್ಚಾಗಿ ಬೆಳೆದಂತೆ ಮೇರಿಯ ಅತೃಪ್ತಿ ಮಾಯವಾಯಿತು ತನ್ನ ಕೆಲಸಗಳಲ್ಲಿ ಕೈಸೇರಿಸಲು, ತನ್ನ ಚಿಂತೆಗಳಲ್ಲಿ ಭಾಗವಹಿಸಲು, ಇದ್ದ ಹಿರಿಯ ಮಗಳೊಬ್ಬಳ ಬದಲು ಈಗ ಇಬ್ಬರಾದರು ವಾರಕ್ಕೆ ನಾಲ್ಕು ಸಲ, ಐರೀನ್ ಮತ್ತು ಅವಳ ಗಂಡ ಮೇರಿಯ ಮನೆಗೇ ಊಟಕ್ಕೆ ಬರುವರು. ಈ ಮೂವರ ಮಧ್ಯದಲ್ಲಿ ಊಟ ಎಲ್ಲೋ ಮರೆತುಹೋಗಿ, ವಿಜ್ಞಾನದಲ್ಲಿ ನುರಿತ ಮುದುಕಿಯೊಬ್ಬಳ ಜೊತೆಯಲ್ಲಿ, ಎಳೆಯ ವಯಸ್ಸಿನ ಅವಳ ಹುಡುಗರು, ವಿಜ್ಞಾನದ ಕಠಿಣವಾದ ಸಮಸ್ಯೆಗಳನ್ನು ಚರ್ಚಿಸತೊಡಗುವರು.

ಐರೀನ್ ಮದುವೆಯಾಗಿ ಹೊರಟುಹೋದಮೇಲೆ, ಮೇರಿ ಮತ್ತು ಈವ್ ಇಬ್ಬರೇ ಮನೆಯಲ್ಲಿ ಉಳಿದರು. ಇಬ್ಬರೂ ಜೊತೆಯಲ್ಲಿ ಊಟ ಮಾಡುವರು. ಊಟದ ಮಧ್ಯದಲ್ಲಿ, ಮೇರಿ, ಮಗಳಿಗೆ ದಿನವೆಲ್ಲ ನಡೆದ ನೂರಾರು ವಿಷಯಗಳನ್ನು ವರ್ಣಿಸಿ ಹೇಳುವಳು. ಪ್ರಯೋಗಶಾಲೆಯ ವಿದ್ಯಾರ್ಥಿಗಳ ವಿಷಯವಾಗಿ ಹೇಳುವಳು; 'ನೋಡು, ಈವೊತ್ತು ನನ್ನ

ಚೀನಾ ವಿದ್ಯಾರ್ಥಿಯನ್ನು ನೋಡಲು ಹೋಗಿದ್ದೆ. ನಾವು ಇಂಗ್ಲಿಷಿನಲ್ಲಿ ಎಷ್ಟೋ ಹೊತ್ತು ಮಾತಾಡುತ್ತಲೇ ಇರುತ್ತೇವೆ. ಮಾತಾಡುತ್ತಿರುವವರೊಡನೆ ಅವರ ವಿರೋಧವಾಗಿ ಎದುರಾಡುವುದು, ಚೀನಾದೇಶದಲ್ಲಿ ಅನಾಗರಿಕತೆ. ನಾನೇನಾದರೂ ಒಂದು ವಿಜ್ಞಾನದ ನಿಯಮವನ್ನು ಅವನಿಗೆ ಹೇಳುತ್ತೇನೆ. ಅವನು ಆಗ ತಾನೇ ಅದನ್ನು ತಪ್ಪೆಂದು ಪ್ರಯೋಗದಿಂದ ಸಮರ್ಥಿಸಿ ತಿಳಿದಿದ್ದರೂ, ವಿನಯವಾಗಿ ನನ್ನ ಮಾತಿಗೆ ಒಪ್ಪಿಕೊಳ್ಳುತ್ತಲೇ ಹೋಗುತ್ತಾನೆ. ಅವನು ಯಾವ ಭಾಗದಲ್ಲಿ ವಿರೋಧವಾಗಿ ಮಾತಾಡಬೇಕೆಂದಿದ್ದಾನೆಂದು ನಾನೇ ಊಹಿಸಬೇಕು. ದೂರಪ್ರಾಚ್ಯದಿಂದ ಬರುವ ಈ ವಿದ್ಯಾರ್ಥಿಗಳ ಮುಂದೆ, ನನ್ನ ಅಸಭ್ಯತನಕ್ಕಾಗಿ ನಾನು ಯಾವಾಗಲೂ ನಾಚಿಕೊಳ್ಳುತ್ತೇನೆ. ಈವೆಟ್, ಇಷ್ಟರಲ್ಲೇ ಒಂದು ಸಾಯಂಕಾಲ ನನ್ನ ಫ್ರೇಂಚ್ ವಿದ್ಯಾರ್ಥಿಯನ್ನು ಮನೆಗೆ ಕರೆಯಬೇಕು. ಪ್ಯಾರಿಸ್‌ನಲ್ಲಿ ಅವನು ಎಷ್ಟು ಒಂಟಿಯಾಗಿರುವನೋ!'

ಉಡುಪಿನ ಅಲಂಕಾರ ವಿಷಯದಲ್ಲಿಯೂ, ಹೆಂಗುಸರ ಶೃಂಗಾರದ ವಿಷಯದಲ್ಲಿಯೂ, ಮೇರಿಗೂ, ಈವ್‌ಗೂ ತುಂಬ ಮತಭೇದ ಇತ್ತು. ಮೇರಿ, ಮಗಳು ಅಲಂಕಾರ ಮಾಡಿಕೊಳ್ಳಕೂಡದೆಂದು ಬಲವಂತ ಮಾಡದಿದ್ದರೂ, ಮಗಳ ಹೊಸ ತರಹದ ಶೃಂಗಾರವನ್ನು ನೋಡಿ ಆಶ್ಚರ್ಯಪಡುವಳು, ಹಾಸ್ಯಮಾಡುವಳು ಒಂದೊಂದು ಸಲ ರಾತ್ರಿ ಊಟವಾದ ಮೇಲೆ, ಈವ್ ಹೊರಗೆ ಹೋಗಲು ಶೃಂಗರಿಸಿಕೊಂಡಿರುವಾಗ, ಮೇರಿ ಅಲ್ಲಿಗೆ ಬಂದು ಮಗಳ ಅಲಂಕಾರವನ್ನೆಲ್ಲ ನಿಧಾನವಾಗಿ ನೋಡುವಳು, ನಗುನಗುತ್ತ ತನಗೆ ತೋರಿದ ಮಾತನ್ನೆಲ್ಲ ಆಡುವಳು.

'ಅಯ್ಯೋ ಈವ್! ಎಂಥ ಭಯಂಕರವಾದ ಹಿಮ್ಮಡಿಗಳು! ಹೆಂಗುಸರು ಹೀಗೆ ನೆಲದಿಂದ ಇಷ್ಟೆತ್ತರದಲ್ಲಿ ಕೋಲ ಮೇಲೆ ನಡೆಯುವಂತೆ ನಡೆಯಬೇಕೆಂದರೆ, ನನ್ನ ಮನಸ್ಸು ಒಡಂಬಡುವುದೇ ಇಲ್ಲ. . . . ಆಮೇಲೆ ಬಟ್ಟೆಯ ಬೆನ್ನೆಲ್ಲ ಕತ್ತರಿಸಿ ಹಾಕಿರುವುದು, ಇದೆಂಥ ಹೊಸ ನಮೂನೆ? ಮುಂದುಗಡೆ ಸ್ವಲ್ಪ ಹೆಚ್ಚಾಗಿ ಕತ್ತರಿಸಿದ್ದರೆ ಸಹಿಸಬಹುದೋ ಏನೋ! ಆದರೆ ಹೀಗೆ ಮೈಲಿಮೈಲಿಗಟ್ಟಲೆ ಬೆನ್ನು ಬಿಟ್ಟುಕೊಳ್ಳುವುದು! ಮೊದಲನೆಯದಾಗಿ ಇದು ಅಸಭ್ಯತನ, ಎರಡನೆಯದಾಗಿ ಇದರಿಂದ ಫ್ಲೂರಿಸಿ ಬಂದರೂ ಬಂದೀತು,

ಮೂರನೆಯದಾಗಿ ಇದು ನೋಡುವುದಕ್ಕೆ ಚೆನ್ನಾಗಿಲ್ಲ. ಮೊದಲೆರಡು ಕಾರಣಗಳು ನಿನ್ನ ಮನಸ್ಸಿಗೆ ಹಿಡಿಯದಿದ್ದರೂ, ಮೂರನೆಯದಾದರೂ ಹಿಡಿಯಬೇಕು. ಹೋಗಲಿ, ಅಂತು ಒಟ್ಟಿನಲ್ಲಿ ನಿನ್ನ ವೇಷ ಸುಂದರವಾಗಿದೆ. ನೀನು ತುಂಬ ಕಪ್ಪು ಉಡುತ್ತೀ. ನಿನ್ನ ವಯಸ್ಸಿಗೆ ಕಪ್ಪು ಒಪ್ಪುವುದಿಲ್ಲ..'

ಈವ್ ತನ್ನ ಮುಖವನ್ನು ಚೆನ್ನಾಗಿ ಶೃಂಗರಿಸಿಕೊಂಡ ಮೇಲೆ ಮೇರಿ, ಹಾಸ್ಯದ ಧ್ವನಿಯಲ್ಲಿ 'ಎಲ್ಲಿ, ಸ್ವಲ್ಪ ಈ ಕಡೆ ತಿರಗು, ನಿನ್ನನ್ನು ನೋಡಿ ಸಂತೋಷಪಡೋಣ!' ಎನ್ನುವಳು. ಆಮೇಲೆ ಮಗಳ ಮುಖವನ್ನು ಚೆನ್ನಾಗಿ ಪರೀಕ್ಷಿಸಿ, ಹೇಳುವಳು:

'....ಒಂದೇ ಮಾತಿನಲ್ಲಿ ಹೇಳಬೇಕಾದರೆ ಇದೆಲ್ಲ ಭಯಂಕರವಾಗಿದೆ. ಹುಬ್ಬನ್ನು ಕೆತ್ತಿಕೊಂಡು, ತುಟಿಗೆ ಏನೇನು ಮೆತ್ತಿಕೊಂಡರೂ ಅದರಿಂದ ಏನೂ ಪ್ರಯೋಜನವಿಲ್ಲ....'

'ಅಮ್ಮಾ! ಆದರೆ ಹೀಗಿರುವುದು ಮೊದಲಿಗಿಂತ ಚೆನ್ನಾಗಿಯೇ ಇರುತ್ತದೆ.'

'ಚೆನ್ನೇ? ಇಲ್ಲಿ ಕೇಳು; ನೀನು ನಾಳೆ ಬೆಳಿಗ್ಗೆ ಎದ್ದು ಮುಖವನ್ನು ಹೀಗೆ ಅಸಹ್ಯ ಮಾಡಿಕೊಳ್ಳುವುದಕ್ಕೆ ಮುಂಚೆ, ನೀನು ಹಾಸಿಗೆಯಲ್ಲಿರುವಾಗಲೇ, ನಾನು ಬಂದು ನಿನಗೆ ಮುತ್ತಿಡುತ್ತೇನೆ..ಈಗ ಹೊತ್ತಾಯಿತು. ಓಡು ಮಗು, ಓದುವುದಕ್ಕೆ ಯಾವುದಾದರೂ ಪುಸ್ತಕ ಕೊಡುತ್ತೀಯಾ?'

ಈವ್ ಯಾವುದಾದರೂ ಪುಸ್ತಕ ಆರಿಸಿ ತಾಯಿಗೆ ಕೊಡುವಳು. ಮೇರಿಯ ಕೈಯಲ್ಲಿ ಪುಸ್ತಕ ನಿಲ್ಲುತಿದ್ದುದು ಅರ್ಧಘಂಟೆ ಅಧವ ಹೆಚ್ಚೆಂದರೆ ಒಂದು ಗಂಟೆ ಮಾತ್ರ. ವಿಜ್ಞಾನ, ತನ್ನ ಪೂರ್ಣ ಸಮ್ಮೋಹನ ಶಕ್ತಿಯನ್ನು ಬೀಸಿ ಹೃದಯವನ್ನು ಎಳೆಯುತ್ತಿರುವಾಗ, ಕತೆ, ಕಾದಂಬರಿಗಳಲ್ಲಿ ಸ್ವಾರಸ್ಯ ಉಳಿದೀತೆ? ಮೇರಿ ಎದ್ದು ಬರೆಯುವ ಪುಸ್ತಕವನ್ನೂ, ಸೀಸದ ಕಡ್ಡಿಯನ್ನು ಕೈಗೆ ತೆಗೆದುಕೊಂಡು, ಎಂದಿನಂತೆ ಅರ್ಧರಾತ್ರಿ ಎರಡು ಮೂರು ಗಂಟೆಯ ತನಕ ವಿಜ್ಞಾನದ ಸಮಸ್ಯೆಗಳನ್ನು ಬಿಡಿಸುತ್ತ ಲೆಕ್ಕಾಚಾರ ಹಾಕುತ್ತ ಕುಳಿತೇ ಇರುವಳು. ದಿನವೆಲ್ಲ ಕೆಲಸಮಾಡಿ ಸೋತ ಈ ಮುಪ್ಪಿನ ಹೆಂಗುಸು, ವಿಜ್ಞಾನದಲ್ಲಿ ತಲ್ಲೀನಳಾಗಿ, ಹುಬ್ಬುಗಂಟಿಕ್ಕಿ, ಪೋಲಿಷ್ ಭಾಷೆಯಲ್ಲಿ ಅಂಕಿಗಳನ್ನು ಎಣಿಸುತ್ತ ನೆಲದ ಮೇಲೆ ಕುಳಿತಿರುವಳು. ಸಣ್ಣ ಮೇಜಿನ ಮುಂದೆ,

ಕುರ್ಚಿಯ ಮೇಲೆ ಕುಳಿತು ಕೆಲಸ ಮಾಡುವುದು ಮೇರಿಗೆ ಸಾಧ್ಯವಿರಲಿಲ್ಲ. ತನ್ನ ಬರೆವಣಿಗೆಯ ಕಾಗದಗಳಿಗೆ ಅನಂತವಾದ ಸ್ಥಳ ಬೇಕಾದವಳಂತೆ ಮೇರಿ, ಅವುಗಳನ್ನೆಲ್ಲ ನೆಲದ ಮೇಲೆ ಹರಡಿಕೊಂಡು, ಬರೆಯುವ ಪುಸ್ತಕವನ್ನು ತೊಡೆಯಮೇಲಿಟ್ಟುಕೊಳ್ಳುವಳು. ಮಗಳು ಬಾಗಿಲು ನೂಕಿ ಒಳಗೆ ಬಂದರೂ, ವಿಜ್ಞಾನದಲ್ಲಿ ಲೀನವಾಗಿರುವ ತಾಯಿ, ಕತ್ತೆತ್ತಿ ನೋಡುತ್ತಿರಲಿಲ್ಲ.

—

ಅಧ್ಯಾಯ ಇಪ್ಪತ್ತೈದು

## ಪ್ರಯೋಗಶಾಲೆಯಲ್ಲಿ



ಪ್ರಯೋಗಶಾಲೆ ಕಟ್ಟಿ ಮುಗಿದ ಮೇಲೆ, ತಾನು ಬದುಕಿರುವ ತನಕ ಮೆಡೇಮ್ ಕ್ಯೂರಿ, ಅದರ ಚಾಲಕಳಾಗಿ ನಿಂತು, ತನ್ನ ನೇತೃತ್ವದಲ್ಲಿ ಅದ್ಭುತ ವಾಗಿ ಕೆಲಸ ನಡೆಸಿದಳು. ಪಿಯರಿ ಬದುಕಿದ್ದ ದಿನಗಳಿಂದ ಹಂಬಲಿಸಿ ಪಡೆದ ಪ್ರಯೋಗಶಾಲೆ, ಅವಳ ಬಾಳಿನ ಭಾಗ್ಯವಾಗಿತ್ತು. ಪ್ರತಿ ದಿನವೂ ಎಂಟೂ ಮುಕ್ಕಾಲು ಗಂಟೆಗೆ ಮೆಡೇಮ್ ಕ್ಯೂರಿಯ ಮನೆಯ ಬಾಗಿಲಿನಲ್ಲಿ ಮೋಟಾರು ಬಂದು ನಿಲ್ಲುವುದು. ಅದು, ಮೇರಿ, ತನ್ನ ಪ್ರಯೋಗಶಾಲೆಗೆ ಹೋಗುವ ಹೊತ್ತು. ಅಲ್ಲಿ ಪ್ರಯೋಗಶಾಲೆಯಲ್ಲಿಯೂ ಪ್ರತಿ ದಿನ ಕಾಣ ಬರುವುದು ಒಂದೇ ದೃಶ್ಯ. ವಿದ್ಯಾರ್ಥಿಗಳೆಲ್ಲ, 'ಮೆಡೇಮ್ ಕ್ಯೂರಿ ಬಂದಳೆ?' 'ಮೆಡೇಮ್ ಕ್ಯೂರಿಯನ್ನು ನೋಡಬೇಕು', ಎಂದು ಸಡಗರಪಡುತ್ತ ಮೇರಿಯ ಬರವಿಗಾಗಿ ಕಾದಿರುವರು. ಮೇರಿಯನ್ನು ಬಾಗಿಲಲ್ಲಿ ಕಾಣುತ್ತಲೇ, ಎಳೆಯ ಮುಖಗಳು, ಉತ್ಸಾಹ, ಗೌರವ, ಸಂತೋಷಗಳನ್ನು ತುಂಬಿ ಕೊಂಡು, ನಲವತ್ತು ವರ್ಷ ವಿಜ್ಞಾನದಲ್ಲಿ ಲೀನಳಾಗಿದ್ದ, ಅಸಾಧಾರಣಳಾದ ಹೆಂಗುಸನ್ನು ಪ್ರೀತಿಯಿಂದ ಸ್ವಾಗತಿಸುವುವು. ವಿದ್ಯಾರ್ಥಿಗಳು, ಹೆಂಗು ಸರು, ಗಂಡುಸರು, ಮೇರಿಯ ಸುತ್ತ ತುಂಬಿಕೊಳ್ಳುವರು. ಪ್ರತಿಯೊಬ್ಬರಿಗೂ

ಅವಳ ಸಹಾಯ ಬೇಕು, ಸಲಹೆ ಬೇಕು. ವಿದ್ಯಾರ್ಥಿಗಳನ್ನೆಲ್ಲ ಆರಿಸಿಕೊಂಡು, ಅವರಿಗೆಲ್ಲ ಆಯಾ ಕೆಲಸಗಳನ್ನು ಹೊಂದಿಸಿಕೊಟ್ಟಿರುವಳೂ ಮೇರಿಯೇ. ಈಗ, ಒಬ್ಬೊಬ್ಬರು ಒಂದೊಂದು ವಿಷಯದಲ್ಲಿ ಪ್ರಶ್ನೆ ಕೇಳಿದಾಗ, ವಿಜ್ಞಾನವನ್ನು ಕರತಲಾಮಲಕವಾಗಿ ಮಾಡಿಕೊಂಡ ಮೇರಿ, ಒಬ್ಬೊಬ್ಬರನ್ನಾಗಿ ವಿಚಾರಿಸಿ ಅವರ ತಪ್ಪನ್ನು ತೋರಿಸಿಕೊಡುವಳು, ಅವರ ತೊಂದರೆಯನ್ನು ನಿವಾರಿಸುವಳು. ವಿಜ್ಞಾನದ ಒಂದು ಭಾಗದಿಂದ ಇನ್ನೊಂದು ಭಾಗಕ್ಕೆ, ಒಂದು ವಿಷಯದಿಂದ ಇನ್ನೊಂದು ವಿಷಯಕ್ಕೆ ಅವಳ ಬುದ್ಧಿ ಲೀಲಾಜಾಲವಾಗಿ ಜಾರುವುದು.

ಪ್ರಯೋಗಶಾಲೆಯಲ್ಲಿ ದಿನವೂ ನೆರೆಯುತ್ತಿದ್ದ ಈ ಅಸಾಧಾರಣವಾದ ಗುಂಪನ್ನು ಹಾದುಹೋಗುವವರೆಲ್ಲ, ಮೇರಿಗೆ ನಮಸ್ಕರಿಸಿ ಮುಂದೆ ಹೋಗದೆ, ಅಲ್ಲಿಯೇ ನಿಲ್ಲುವರು. ಕೊನೆಗೆ ಮೇರಿ ಮಹಡಿಯ ಸೋಪಾನದ ಮೆಟ್ಟಲೊಂದರ ಮೇಲೆ ಕುಳಿತು, ಸುತ್ತ ನಿಂತಿರುವ ಹುಡುಗರ ಕಡೆಗೆ ನೋಡುತ್ತ ಮಾತಾಡುವಳು. ಈ ಗುಂಪೆಲ್ಲ ಚದರಿ ಹೋದಮೇಲೆ, ಮೇರಿ ತನ್ನ ಕೋಣೆಗೆ ಹೋಗಿ ಸ್ವಂತ ಕೆಲಸದಲ್ಲಿ ಮಗ್ನಳಾಗುವಳು. ಅವಳ ಹುಡುಗರು ಅಲ್ಲಿಯೂ ಅವಳನ್ನು ಸುಮ್ಮನೆ ಇರಗೊಡಿಸುತ್ತಿರಲಿಲ್ಲ. ಅಷ್ಟರಲ್ಲಿಯೇ ಯಾರಾದರೂ ವಿದ್ಯಾರ್ಥಿಗಳು, ತಮ್ಮ ಸಂಶೋಧನೆಯ ವಿಷಯವಾಗಿ ಲೇಖನ ಬರೆದು, ಸೈನ್ಸ್ ಅಕ್ಯಾಡೆಮಿಗೆ ಒಪ್ಪಿಸಬೇಕೆಂದಿರುವವರು, ಅದನ್ನು ಮೊದಲು ಮೇರಿಗೆ ತೋರಿಸಲು ಬರುವರು. ಮೇರಿಯಿಂದ ಏನು ಆಕ್ಷೇಪಣೆ ಬಂದೀತೋ ಎಂದು ಹೆದರಿ ನಡುಗುವ ಕೈಗಳು, ಲೇಖನವನ್ನು ಮೇರಿಯ ಮುಂದೆ ನೀಡುವುವು. ಭಯದಿಂದ ಅರ್ಧ ಸತ್ತಿರುವ ವಿದ್ಯಾರ್ಥಿಯ ಮುಂದೆ ಕುಳಿತು, ಮೇರಿ ಆ ಲೇಖನವನ್ನು ಚೆನ್ನಾಗಿ ಓದಿ ಪರಿಶೀಲಿಸುವಳು. ತಪ್ಪಿರುವ ವಾಕ್ಯಗಳನ್ನೆಲ್ಲ ಹೊಡೆದು ಬೇರೆ ಬರೆಯುವಳು. ಹೀಗಿರದೆ ಲೇಖನ ಚೆನ್ನಾಗಿದ್ದರೆ, ಮೇರಿ ನಗುಮುಖಳಾಗಿ, ಸರಿಯಾಗಿದೆ ಎಂದು ಹೇಳುವಳು. ಮುಂದೆ ನಿಂತಿರುವ ವಿದ್ಯಾರ್ಥಿ ಇದಕ್ಕಿಂತ ದೊಡ್ಡ ಭಾಗ್ಯ ಇಲ್ಲ ಎಂದು ಭಾವಿಸಿಕೊಳ್ಳುವನು. ಹೀಗೆ, ಮೇರಿಯ ನೇತೃತ್ವದಲ್ಲಿ ನಡೆಯುತ್ತಿದ್ದ ಪ್ರಯೋಗಶಾಲೆಯಲ್ಲಿ ೧೯೧೯ರಿಂದ ೧೯೩೪ರ ವರೆಗೆ, ರೇಡಿಯೋ ಚಟುವಟಿಕೆಯ ಮೇಲೆ ಸಂಶೋಧನೆ ನಡೆದು, ಹೊರಟ ಲೇಖನಗಳು ನಾನೂರ-

ಎಂಬತ್ತಮೂರು. ಅದರಲ್ಲಿ ಮೂವತ್ತೊಂದು ಮೇರಿಯ ಸ್ವಂತದ್ದು. ಇಷ್ಟು ಕೆಲಸದ ಗಡಿಬಿಡಿಯ ಮಧ್ಯೆ ಬಿಡುವಿನ ಹೊತ್ತಿನಲ್ಲಿ ಮೇರಿ, ಮೂರು ಸಣ್ಣ ಪುಸ್ತಕಗಳನ್ನೂ, ಲೇಖನಗಳನ್ನೂ ಪ್ರಕಟಿಸಿದಳು. ಅವುಗಳಲ್ಲಿ ಒಂದರ ವಿಷಯ ಮೇರಿಯ ಹೃದಯಕ್ಕೆ ಬಹು ಹತ್ತಿರವಾದದ್ದು. ಪಿಯರಿಯ ಸುಂದರವಾದ ಒಂದು ಜೀವನಚರಿತ್ರೆ.

ಮುಪ್ಪು ಹೆಚ್ಚಾಗುತ್ತ ಶಕ್ತಿ ಕರಗಿ ಹೋಗುತ್ತ ಬಂದ ಮೇಲೆಯೂ ಮೇರಿ ಪ್ರಯೋಗಶಾಲೆಯ ತೊಡಕನ್ನು ಬಿಡಿಸಿಕೊಳ್ಳದೆ ಹೋದುದನ್ನು ನೋಡಿದರೆ ಸಹಜವಾಗಿ ಆಶ್ಚರ್ಯವಾಗುತ್ತದೆ. ಮೇರಿಯ ಜೀವ ಪ್ರಯೋಗ ಶಾಲೆಯಲ್ಲಿ, ವಿಜ್ಞಾನದ ಸಂಶೋಧನೆಗಳಲ್ಲಿ ಹೇಗೆ ಸೆರೆಯಾಗಿತ್ತೆಂಬುದನ್ನು ಮೇರಿ ಬ್ರೊನ್ಯಳಿಗೆ ಬರೆದ ಕಾಗದದಲ್ಲಿ ತಾನೇ ಹೇಳಿಕೊಂಡಿದ್ದಾಳೆ.

'ಕೆಲವು ಸಲ ನನ್ನ ಧೈರ್ಯ ಕುಸಿದುಹೋದಾಗ, ಈ ಕೆಲಸವನ್ನೆಲ್ಲ ಬಿಟ್ಟುಕೊಟ್ಟು, ಹಳ್ಳಿಯಲ್ಲಿ ನೆಲಸಿ ತೋಟದ ಕೆಲಸಮಾಡಿಕೊಂಡಿರುವುದೇ ಸರಿ ಎಂದು ನಾನು ಯೋಚಿಸುತ್ತೇನೆ. ಆದರೆ ಸಾವಿರಾರು ಬಂಧನಗಳು ಇಲ್ಲಿ ನನ್ನನ್ನು ಬಿಗಿದಿವೆ. ಬೇರೆ ಏರ್ಪಾಡನ್ನು ಯಾವಾಗ ಮಾಡಿಕೊಳ್ಳ ಬಲ್ಲೆನೋ ಅದು ನನಗೆ ತಿಳಿಯದು. ವಿಜ್ಞಾನದ ಪುಸ್ತಕಗಳನ್ನು ಬರೆಯುವ ಹವ್ಯಾಸ ಇಟ್ಟುಕೊಂಡರೂ, ಪ್ರಯೋಗಶಾಲೆಯನ್ನುಳಿದು ನಾನು ಬದುಕು ವುದು ಸಾಧ್ಯವೇ ಎಂಬುದೂ ನನಗೆ ಗೊತ್ತಿಲ್ಲ.'

ಪ್ರಯೋಗಶಾಲೆಯಲ್ಲಿ ಪ್ರಯೋಗಸಾಧನಗಳ ಮುಂದೆ ಕುಳಿತಳೆಂದರೆ ಮೇರಿಗೆ ಉಳಿದ ಪ್ರಪಂಚವೆಲ್ಲ ಮರೆತುಹೋಗುವುದು. ಐರೀನ್ ರೋಗ ದಲ್ಲಿ ಮಲಗಿ ಮೇರಿಯ ಮನಸ್ಸು ದುಃಖದಲ್ಲಿ ಕುದಿಯುತ್ತಿದ್ದಾಗ ಕೂಡ ಅವಳು ಪ್ರಯೋಗಗಳನ್ನು ಮಾಡುತ್ತಲೇ ಇದ್ದಳು. ಪ್ರಯೋಗ ಮಾಡುತ್ತ ಮಾಡುತ್ತ ಅವು ಕೆಟ್ಟು ಹೋದರೆ, ತಾನು ನಿರೀಕ್ಷಿಸಿದಷ್ಟು ಸರಿಯಾಗದೆ ಹೋದರೆ ಮೇರಿ ತಲ್ಲಣಪಡುವಳು. ಜಡವಾದ ಕಣ್ಣುಗಳನ್ನು ಪ್ರಯೋಗ ಸಾಧನದ ಮೇಲಿರಿಸಿ ದೊಡ್ಡ ದುಃಖವೊಂದು ತಲೆಯ ಮೇಲೆರಗಿದಂತೆ, ಎಲ್ಲ ನಾಶವಾದಂತೆ ಮೇರಿ ಕುಸಿದುಹೋಗುವಳು. ಪ್ರಯೋಗ ಸರಿಯಾಗಿ ಬಂದರೆ ಅವಳಿಗೆ ಜೀವನ ಉತ್ಸಾಹದಿಂದ ತುಂಬಿ ಸುಂದರವಾಗಿ ತೋರು-

ವುದು. ಸಂತೋಷವನ್ನು ಹರಿಯಿಸುತ್ತ ಮೇರಿ ತೋಟದಲ್ಲಿ ಗಿಡಗಳ ಮಧ್ಯೆ ಉತ್ಸಾಹದಿಂದ ಓಡಾಡುವಳು.

ತಾನಾಗಿ ಕಟ್ಟಿಕೊಂಡ ಈ ಪ್ರಯೋಗಶಾಲೆಯ ಒಳಗವನ್ನು ಮೇರಿ ಅಪಾರವಾಗಿ ಪ್ರೀತಿಸಿದಳು. ಅಲ್ಲಿಯ ವಿದ್ಯಾರ್ಥಿಗಳಲ್ಲಿ, ಅಲ್ಲಿ ತಾನು ನೆಟ್ಟು ಬೆಳೆಸಿದ ಗಿಡಗಳಲ್ಲಿ, ಅಲ್ಲಿಯ ಸುಂದರವಾದ ವಾತಾವರಣದಲ್ಲ ಅವಳ ಮಧುರ ವಾದ ಪ್ರೇಮ ತುಂಬಿ ಹರಿಯಿತು. ೧೯೩೨ನೆಯ ಆಗಸ್ಟ್‌ನಲ್ಲಿ ಮೇರಿಯ ಪ್ರಿಯ ಶಿಷ್ಯರಲ್ಲೊಬ್ಬ ಸತ್ತುಹೋದಾಗ ಮೇರಿ ಹೀಗೆ ಬರೆದಳು.

'ಪ್ಯಾರಿಸ್ ತಲುಪಿದಾಗ ನನಗೆ ತುಂಬ ದುಃಖವಾಯಿತು. ನಾನು ಅಷ್ಟೊಂದು ಪ್ರೀತಿಸುತ್ತಿದ್ದ ಹುಡುಗ ರೇಮಂಡ್ ನದಿಯಲ್ಲಿ ಮುಳುಗಿ ಸತ್ತುಹೋಗಿದ್ದಾನೆ. ನನಗೆ ಅತ್ಯಂತ ವ್ಯಸನವಾಗಿದೆ ಅವನು ತನ್ನ ಜೀವನದ ಉತ್ತಮವಾದ ಭಾಗವನ್ನೆಲ್ಲ ಪ್ರಯೋಗಶಾಲೆಯಲ್ಲಿ ಕಳೆದನೆಂದು ಅವನ ತಾಯಿ ನನಗೆ ಕಾಗದ ಬರೆದಳು. ಇದು ಹೀಗೆ ಕೊನೆಗಾಣಬೇಕಾದರೆ ಅದರಿಂದ ಏನು ಪ್ರಯೋಜನವಾದಂತಾಯಿತು? ಎಷ್ಟೊಂದು ಸೊಗಸಾದ ಹುಡುಗ, ಎಂತಹ ಲಾಲಿತ್ಯ, ದೊಡ್ಡತನ, ಸೊಬಗು, ಎಷ್ಟು ಪ್ರತಿಭೆ ಇವೆಲ್ಲ ಒಂದು ಹಾಳು ಸ್ನಾನಕ್ಕೋಸ್ಕರ ಮಣ್ಣುಗೂಡಿಹೋಯಿತೇ......'

ವಿದ್ಯಾರ್ಥಿಗಳ ಮನಸ್ಸನ್ನು ಮುಟ್ಟುತ್ತಿದ್ದ ಇಂತಹ ಆಳವಾದ ಪ್ರೀತಿಗೆ ಬದಲಾಗಿ ವಿದ್ಯಾರ್ಥಿಗಳೂ ಮೇರಿಯನ್ನು ಗಾಢವಾಗಿ ಪ್ರೀತಿಸುತ್ತಿದ್ದರು. ಒಂದೊಂದು ಸಲ ಮೇರಿ ವಿಜ್ಞಾನದ ವಿಷಯವಾಗಿ ಚರ್ಚಿಸುತ್ತ ತಲ್ಲೀನಳಾಗಿ, ಹೊರಗಡೆ ಗಾಳಿಗೆ ಮೈಯೊಡ್ಡಿ ಕುಳಿತುಬಿಟ್ಟರೆ ಪ್ರೀತಿಯಿಂದ ಮಧುರವಾದ ಧ್ವನಿಯೊಂದು, 'ಮೆಡೇಮ್, ಶೀತವಾದೀತು, ದಯವಿಟ್ಟು ಒಳಗೆ ಬಾ', ಎಂದು ಮೇರಿಯನ್ನು ಒಳಕ್ಕೆ ಕರೆಯುವುದು. ಎಂದಾದ ರೊಂದು ದಿನ ಮೇರಿ ಊಟಕ್ಕೆ ಹೋಗದೆ ನಿಂತುಬಿಟ್ಟರೆ ಯಾರಾದರೂ ಒಬ್ಬರು ಬ್ರೆಡ್ಡನ್ನೂ ಹಣ್ಣನ್ನೂ ಅವಳ ಬಳಿ ತಂದಿಡುವರು. ಹೀಗೆ ಮೇರಿಯ ಕಡೆಗೆ ಪ್ರೀತಿ ಸಲ್ಲುತ್ತಿದ್ದುದು ಅವಳ ವಿದ್ಯಾರ್ಥಿಗಳಿಂದ ಮಾತ್ರವಲ್ಲ. ಅವಳ ಸಹವಾಸ ಸುಖವನ್ನು ಅನುಭವಿಸಿದವರು, ಅವಳ ಹೃದಯದ ಮಾಧುರ್ಯ ವನ್ನು ಅರಿತವರೆಲ್ಲ ಅವಳನ್ನು ಪ್ರೀತಿಸುತ್ತಿದ್ದರು. ತೋಟದ ಕೆಲಸ ಮತ್ತು ಇತರ ಕೆಲಸಗಳನ್ನೆಲ್ಲ ಮಾಡಿಕೊಂಡು ಹೋಗುತ್ತಿದ್ದ ಜಾರ್ಜಸ್ ಎಂಬ

ಮನುಷ್ಯನೇ ಮೇರಿಯ ಕಾರನ್ನೂ ನಡೆಸುತ್ತಿದ್ದ. ಕೊನೆಗೆ ಒಂದು ದಿನ ಮೇರಿ ಬೇರೆ ಡ್ರೈವರ್ ಒಬ್ಬನನ್ನು ನೇಮಿಸಿಕೊಂಡಾಗ, ಇತರರು ಯಾರೋ ಮೇರಿಯ ಕಾರನ್ನು ನಡೆಸುವರಲ್ಲ ಎಂದು ಭಾವಿಸಿಕೊಂಡು ಜಾರ್ಜಸ್ ಗುಟ್ಟಾಗಿ ಬಿಕ್ಕಿ ಬಿಕ್ಕಿ ಅಳುತ್ತಿದ್ದ.

ಮೇರಿಯ ಪ್ರಯೋಗಶಾಲೆಯಲ್ಲಿ ಸುಂದರವಾದ ಒಂದು ಪದ್ಧತಿ ಇತ್ತು. ಪ್ರಯೋಗಶಾಲೆಗೆ ಸೇರಿದ ಯಾವುದಾದರೂ ವಿದ್ಯಾರ್ಥಿ ನಿಬಂಧ ಬರೆದು ಯಶಸ್ವಿಯಾದರೆ ಅವನನ್ನು ಗೌರವಿಸುವುದಕ್ಕೋಸ್ಕರ ಪ್ರಯೋಗ ಶಾಲೆಯಲ್ಲಿ ಒಂದು ಕೂಟ ನಡೆಯುತ್ತಿತ್ತು. ಬೇಸಗೆಯ ದಿನಗಳಲ್ಲಿ ಮರದ ಕೆಳಗೆ, ಚಳಿಗಾಲದಲ್ಲಿ ಒಳಗಿನ ಲೈಬ್ರರಿಯಲ್ಲಿ, ಎಲ್ಲರೂ ಸೇರಿ ಈ ವಿಚಿತ್ರ ವಿಜ್ಞಾನಿಗಳು ಪ್ರಯೋಗಶಾಲೆಯ ಗಾಜಿನ ಪಾತ್ರೆಗಳಲ್ಲಿ ಟೀ ತುಂಬಿ ಕೊಂಡು, ದ್ರವವನ್ನು ಕದರುವ ಗಾಜಿನ ಕಡ್ಡಿಗಳನ್ನು ಚಮಚಗಳಾಗಿ ಉಪಯೋಗಿಸಿಕೊಳ್ಳುವರು. ತಿಂಡಿಯನ್ನೂ ಟೀಯನ್ನೂ ಹಂಚುವ ಕೆಲಸ ಹೆಣ್ಣು ಹುಡುಗಿಯರದು. ಕೊನೆಯಲ್ಲಿ ಮೇರಿ ಬಹುಮಾನ ಪಡೆದ ವಿದ್ಯಾರ್ಥಿ ಯನ್ನು ಹೊಗಳಿ ಸಣ್ಣ ಭಾಷಣ ಮಾಡುವಳು. ಮೇರಿಯ ಮನಸ್ಸಿಗೆ ಹೆಚ್ಚು ಸಂತೋಷವನ್ನು ತುಂಬಿಕೊಟ್ಟ ಇನ್ನೆರಡು ಕೂಟಗಳೂ ಹೀಗೆಯೇ ನಡೆದುವು. ಒಂದು ಐರೀನ್ ನಿಬಂಧ ಬರೆದು ಡಾಕ್ಟರ್ ಡಿಗ್ರಿ ಪಡೆದಾಗ, ಇನ್ನೊಂದು ಮೇರಿಯ ಅಳಿಯ ಜೋಲಿಯೋಟ್‌ನ ಡಾಕ್ಟರೇಟ್‌ಗೋಸ್ಕರ. ೧೯೩೪ರಲ್ಲಿ ಐರೀನ್ ಮತ್ತು ಫ್ರೆಡರಿಕ್ ಜೋಲಿಯೋಟ್, ರೇಡಿಯಂ ವಿಷಯದಲ್ಲಿ ಸಂಶೋಧನೆ ಮಾಡಿ ಅದ್ಭುತವಾದ ಒಂದು ಅಂಶವನ್ನು ಕಂಡು ಹಿಡಿದರು. ಪ್ರತಿಭೆಯನ್ನು ಬೀರುವ ರೇಡಿಯಂ ಮೊದಲಾದ ವಸ್ತುಗಳ ಕಿರಣದ ಪ್ರಭಾವದಿಂದ ಅಲ್ಯೂಮಿನಿಯಂ ಮುಂತಾದ ಕೆಲವು ವಸ್ತುಗಳು ಸ್ವತಃ ಕಿರಣವನ್ನು ಎರಚುವ ಶಕ್ತಿಯನ್ನು ಪಡೆಯುವವೆಂದು ತೋರಿಸಿ ಕೊಟ್ಟರು. ಇನ್ನು ಮುಂದೆ ಕ್ಯಾನ್ಸರ್ ಚಿಕಿತ್ಸೆಗೆ ಅಮೂಲ್ಯವಾದ ರೇಡಿಯಂ ಆವಶ್ಯಕತೆ ತಪ್ಪಿದಂತಾಯಿತು. ಜೋಲಿಯೋಟ್ ದಂಪತಿಗಳು ಈ ದೊಡ್ಡ ಸಂಶೋಧನೆಯ ವಿಷಯವಾಗಿ, ಭೌತಶಾಸ್ತ್ರಸಂಸ್ಥೆಯ ಆಶ್ರಯದಲ್ಲಿ ಭಾಷಣ ಮಾಡಿದಾಗ, ಮೇರಿ ಸಭಿಕರ ಮಧ್ಯೆ ಕುಳಿತು ಆಸಕ್ತಿಯಿಂದ ಅದನ್ನು ಕೇಳಿದಳು. ಅವಳ ಹೃದಯ ತನ್ನ ಮಗಳು ಮತ್ತು ಅಳಿಯನ ಗೆಲವನ್ನು

ನೋಡಿ ಸಂತೋಷದಿಂದ ಬಿರಿಯುವಂತಿತ್ತು. ಎಂದೂ ಹೆಚ್ಚು ಮಾತನಾಡದ ಮೇರಿ, ಆ ದಿನ ಪಿಯರಿಯ ಕಾಲದಲ್ಲಿ ತಮಗೆ ಪ್ರಯೋಗಶಾಲೆಯಲ್ಲಿ ಸಹಾಯಕನಾಗಿದ್ದಾತನನ್ನು ಕಂಡಾಗ 'ಅವರು ಚೆನ್ನಾಗಿ ಮಾತಾಡಿದರು, ಅಲ್ಲವೆ? ಹಳೆಯ ಪ್ರಯೋಗಶಾಲೆಯ ಸುಖದ ದಿನಗಳು ಹಿಂದಿರುಗಿ ಒಂದಾ ತಿವೆ' ಎಂದು ಹಿಗ್ಗಿನಿಂದ ಉತ್ಸಾಹದಿಂದ ಹೇಳಿದಳು. ಉತ್ಸಾಹ ಹಿಡಿಸ ಲಾರದೆ ಮೇರಿ ಆ ದಿನ ಮನೆಗೆ ನಡೆದುಕೊಂಡೇ ಬಂದಳು. ಜೊತೆಯಲ್ಲಿ ಅನೇಕ ಸಹೋದ್ಯೋಗಿಗಳು ಮನೆಯ ತನಕ ಬಂದರು. ಅಷ್ಟು ಹೊತ್ತೂ ಜೊತೆಯವರೊಡನೆ ಮೇರಿಗೆ 'ತನ್ನ ಹುಡುಗರ' ಮಾತೇ ಮಾತು.

ಮೆಡೇಮ್ ಕ್ಯೂರಿ, ತನ್ನ ಪ್ರಯೋಗಶಾಲೆಯನ್ನು ಹೆಚ್ಚು ಹೆಚ್ಚು ಅಭಿವೃದ್ಧಿಪಡಿಸುವುದಕ್ಕೋಸ್ಕರ ಹಣ ಸಂಗ್ರಹಿಸುವ ಕೆಲಸದಲ್ಲಿ ಯಾವಾ ಗಲೂ ತೊಡಗಿದ್ದಳು. ಸರ್ಕಾರದಲ್ಲಿ ಮತ್ತು ಮಂತ್ರಿಗಳಲ್ಲಿ ವಿದ್ಯಾರ್ಥಿ ವೇತನಗಳಿಗೋಸ್ಕರ ಪ್ರಾರ್ಥನೆ ಮಾಡಿಕೊಂಡಳು. ಮೇರಿ, ಕೇಳಿದರೆ ಇಲ್ಲ ವೆನ್ನುವ ಧೈರ್ಯ, ಮನಸ್ಸು ಯಾರಿಗೂ ಇರುತ್ತಿರಲಿಲ್ಲ.

ರೇಡಿಯಂ ಗಣಿಯವರು ಮೇರಿಯ ಪ್ರಯೋಗಶಾಲೆಗೆ ಬಹುಮಾನ ವಾಗಿ ರೇಡಿಯಂ ಅದುರನ್ನು ಕೊಟ್ಟು ಕಳುಹಿಸಿದರು. ಅಲ್ಲಿ, ಇಲ್ಲಿ ಕಾದು ಅವರಿವರನ್ನು ಕಂಡು ಪ್ರಾರ್ಥನೆ ಮಾಡುವ ಈ ಕೆಲಸವನ್ನು ಮೇರಿ, ಈವ್ ಒಡನೆ ವರ್ಣಿಸುತ್ತ ಒಂದೊಂದು ಸಲ 'ಕೊನೆಗೆ ಅವರು ನಮ್ಮನ್ನು ಭಿಕ್ಷುಕ ರಂತೆ ಅಟ್ಟಿ ಓಡಿಸಿಬಿಡುತ್ತಾರೆ, ಅಷ್ಟೆ' ಎಂದು ಹೇಳುವಳು.

ಇಲ್ಲಿ ಮೇರಿಯ ಪ್ರಯೋಗಶಾಲೆ ಹೀಗೆ ಅಭಿವೃದ್ಧಿಯಾಗುತ್ತಿರುವಾಗ ಆ ಪಕ್ಕದಲ್ಲಿ ಮೇರಿಯ ಕೈಯಿಂದ ಬೆಳಕು ಕಂಡ ರೇಡಿಯಂ ಜನತೆಯ ಉಪಕಾರಿಯಾಗಿ ದೊಡ್ಡದೊಂದು ಕೆಲಸ ನಡೆಸುತ್ತಿತ್ತು. ಅಲ್ಲಿಗೆ ಬಂದು ಚಿಕಿತ್ಸೆ ಪಡೆದು ರೋಗ ವಾಸಿಮಾಡಿಕೊಳ್ಳುತ್ತಿದ್ದ 'ಕ್ಯಾನ್ಸರ್' ಪೀಡಿತರ ಸಂಖ್ಯೆ ದಿನದಿನಕ್ಕೆ ಹೆಚ್ಚುತ್ತಿತ್ತು. ಶ್ರೀಮಂತರು, ಉದಾರಿಗಳು, ಅನೇಕ ಸಂಸ್ಥೆಗಳವರು ಈ ರೋಗ ಚಿಕಿತ್ಸಾಲಯಕ್ಕೆ ಕೊಡುಗೈಯಿಂದ ಹಣ ನೀಡಿದರು. ಪ್ರಪಂಚದ ನಾನಾ ಕಡೆಗಳಿಂದ ಸುಮಾರು ಇನ್ನೂರು ಜನ ವೈದ್ಯರು ಇಲ್ಲಿಗೆ ಬಂದು ಕ್ಯಾನ್ಸರ್ ರೋಗಚಿಕಿತ್ಸೆಯ ವಿಧಾನವನ್ನು ಕಲಿತು ಕೊಂಡು ಹೋದರು.

ಇಷ್ಟು ಕೆಲಸ ಎಡರು-ತೊಡರುಗಳಿಲ್ಲದೆ ನಡೆಯಲಿಲ್ಲ. ಮೆಡೇವರ್ ಕ್ಯೂರಿ, ೧೯೧೯ರಲ್ಲಿ ಸುಸಜ್ಜಿತವಾದ ಪ್ರಯೋಗಶಾಲೆಯಲ್ಲಿ ಕೆಲಸ ಆರಂಭಿಸಿ ಒಂದು ವರ್ಷ ಕಳೆದ ಮೇಲೆ ೧೯೨೦ರ ಹೊತ್ತಿಗೆ, ಮೇರಿಯ ಎರಡು ಕಣ್ಣು ಗಳಲ್ಲೂ ಪರೆ ಬೆಳೆಯಲು ಪ್ರಾರಂಭವಾಯಿತು. ಕಣ್ಣನ್ನು ಪರೀಕ್ಷಿಸಿದ ವೈದ್ಯರು ಶಸ್ತ್ರಚಿಕಿತ್ಸೆಮಾಡಲು ಇನ್ನೂ ಎರಡು ಮೂರು ವರ್ಷ ಕಳೆಯ ಬೇಕೆಂದರು. ಈ ಅವಧಿಯಲ್ಲಿ ದಿನದಿನಕ್ಕೆ ಮೇರಿಯ ಕಣ್ಣಿನ ಬೆಳಕು ಕಡಮೆ ಯಾಗುತ್ತ ಬಂತು. ಮೇರಿ ಪ್ರಯೋಗಶಾಲೆಯ ಕೆಲಸ ಬಿಟ್ಟುಕೊಟ್ಟು ರೋಗಿಯಾಗಿ ಆಲಸ್ಯದ ಜೀವನ ಕಳೆಯಲು ಸಿದ್ಧಳಾಗಿರಲಿಲ್ಲ. ಆದ್ದರಿಂದ ಜನಗಳಿಂದ ತನ್ನ ಕಣ್ಣಿನ ತೊಂದರೆಯನ್ನು ಬಚ್ಚಿಟ್ಟುಕೊಳ್ಳಲು ಸಿದ್ಧರಿಸಿ ದಳು. ವಿಷಯ ತಿಳಿದಿದ್ದುದು ಮೇರಿಯ ಅಕ್ಕಂದಿರಿಗೆ, ಅಣ್ಣಸಿಗೆ, ಹೆಣ್ಣು ಮಕ್ಕಳಿಗೆ ಮತ್ತು ಡಾಕ್ಟರುಗಳಿಗೆ ಮಾತ್ರ. ಇವರೆಲ್ಲ ಮೇರಿಯೊಡನೆ ಸಹ ಕರಿಸಿ ಅವಳಿಗೆ ದೃಷ್ಟಿ ಸರಿಯಾಗಿದೆ ಎಂಬಂತೆ ನಟನೆ ಮಾಡಿದರು. ಮಂಜಿ ನಲ್ಲಿ ನಡೆಯಬೇಕಾಗಿ ಒಂದು ದಾರಿ ಕಾಣದೆ ಹೋದಾಗ ಮೇರಿಯೊಡನೆ ಹೆಣ್ಣುಮಕ್ಕಳಲ್ಲೊಬ್ಬರು ಇದ್ದೇ ಇರುವರು ದಾರಿಯಲ್ಲಿ ಎಡರು-ತೊಡರು ಗಳು ಬಂದಾಗ, ಯಾರಿಗೂ ತೋರದಂತೆ ಮೇರಿಯ ತೋಳನ್ನು ಮೃದು ವಾಗಿ ಅಮುಕಿ ಅವಳಿಗೆ ಎಚ್ಚರಿಕೆ ಕೊಡುವರು. ಮೇರಿ ಪ್ರಯೋಗಶಾಲೆ ಯಲ್ಲಿ ಕುರುಡಿಯೆಂದು ತೋರಿಸಿಕೊಳ್ಳದ ಹಾಗೆ ಸಾಧನಗಳ ಮೇಲೆಲ್ಲಾ ಬಣ್ಣದ ಗುರುತುಗಳನ್ನು ಮಾಡಿದಳು. ಸೋರ್ಬಾನ್ನಿನ ಉಪನ್ಯಾಸಗಳನ್ನು ದೃಷ್ಟಿ ಕಡಿಮೆಯಾಗಿದ್ದ ತನ್ನ ಕಣ್ಣಿಗೂ ಕಾಣುವ ಹಾಗೆ ಅತ್ಯಂತ ದೊಡ್ಡ ಅಕ್ಷರಗಳಲ್ಲಿ ಬರೆಯುವಳು. ಪ್ರಯೋಗಶಾಲೆಯಲ್ಲಿ ವಿದ್ಯಾರ್ಥಿಗಳು ಏನ ನ್ನಾದರೂ ತೋರಿಸಲು ಬಂದರೆ ಅದರ ಸೂಕ್ಷ್ಮವಾದ ವಿವರಗಳನ್ನೆಲ್ಲ ಅವರ ಬಾಯಿಂದಲೇ ಹೊರಡಿಸುವಳು. ಪತ್ತೆಕೊಡದಹಾಗೆ ಇಷ್ಟೊಂದು ಎಚ್ಚರಿಕೆಯಿಂದ ನಡೆದುಕೊಂಡರೂ ಪ್ರಯೋಗಶಾಲೆಯವರೆಲ್ಲಾ ಇದನ್ನು ಕಂಡುಕೊಂಡೇ ಇದ್ದರು. ಆದರೆ ತಮಗೆ ಈ ವಿಷಯ ತಿಳಿದೇ ಇಲ್ಲವೇನೋ ಎಂಬಂತೆ ಮೇರಿಯ ಜೊತೆಜೊತೆಗೂ ಅವರೂ ಆಟ ಕಟ್ಟಿದರು.

ಕೊನೆಗೆ ೧೯೨೩ರ ಜುಲೈನಲ್ಲಿ ಮೇರಿಗೆ ಶಸ್ತ್ರಚಿಕಿತ್ಸೆ ಆಯಿತು. ಆಸ್ಪತ್ರೆಯಲ್ಲಿ ಅಲುಗಲಾರದೆ ಕಣ್ಣಿಗೆ ಒಟ್ಟೆಕಟ್ಟಿಕೊಂಡು ಮಲಗಿದ್ದ

ತಾಯಿಗೆ ಈವ್ ಚಮಚದಿಂದ ಆಹಾರ ತಿನ್ನಿಸಿದಳು. ಕಣ್ಣಿನಲ್ಲಿ ರಕ್ತಸ್ರಾವ ಪ್ರಾರಂಭವಾಗಿ ಕಣ್ಣು ಪೂರ್ತಿಯಾಗಿ ಹೋಗಿಬಿಡುವುದರಲ್ಲಿತ್ತು. ಆದರೆ ಹೇಗೋ ನಿಧಾನವಾಗಿ ಉಳಿದುಕೊಂಡಿತು. ಇನ್ನೂ ಮೂರು ಸಲ ಶಸ್ತ್ರ ಚಿಕಿತ್ಸೆ ನಡೆದು ೧೯೩೦ರ ಹೊತ್ತಿಗೆ ದೃಷ್ಟಿ ಮೊದಲಿನಂತೆ ಸ್ಪಷ್ಟವಾಗಿ ಕೂಡಿ ಕೊಂಡಿತು.

—

## ಅಧ್ಯಾಯ ಇಪ್ಪತ್ತಾರು

### ಕೊನೆಯ ದಿನಗಳು

ಮುಪ್ಪು ಕವಿದುಬರುತ್ತಿದ್ದರೂ, ಶರೀರ ದಿನದಿನಕ್ಕೆ ಗಳಿತವಾಗುತ್ತಿದ್ದರೂ ಮೇರಿ ಅವಿಶ್ರಾಂತವಾದ ದುಡಿತವನ್ನು ಸ್ವಲ್ಪವೂ ಸಡಿಲಿಸಲಿಲ್ಲ. ಮುಪ್ಪಿನ ರೋಗಗಳು ಒಂದೊಂದಾಗಿ ಕಾಲಿಡುತ್ತಿದ್ದುವು. ಕಿವಿಯಲ್ಲಿ ಕೊರೆದುಕೊಂಡು ಹೋಗುವಂತೆ ಯಾವಾಗಲೂ ಶಬ್ದವಾಗುತ್ತಿತ್ತು. ಮೂವತ್ತೈದು ವರ್ಷಗಳಿಂದ ರೇಡಿಯಂ ಸಹವಾಸ ಪಡೆದು ನಾಲ್ಕುವರ್ಷಗಳ ಕಾಲ ಎಕ್ಸ್‌ರೇಗೆ ಮೈಯೊಡ್ಡಿ ಅವಳ ರಕ್ತ ಕೆಟ್ಟುಹೋಗಿತ್ತು. ಯಾವ ಕೈಗಳಿಂದ ತಾನು ಬೆಳಕು ಕಂಡಿತ್ತೋ, ಆ ಕೈಗಳ ಮೇಲೆ ರೇಡಿಯಂ ತನ್ನ ಪ್ರಭಾವವನ್ನು ಚೆನ್ನಾಗಿ ಬೀರಿತ್ತು. ಮೇರಿಯ ಕೈಯಲ್ಲಿ ಸುಟ್ಟುಹೋಗಿ, ಆಗಾಗ ಆ ಗಾಯಗಳು ಹಸಿಯಾಗುತ್ತಿದ್ದುವು. ಇಷ್ಟಾದರೂ ಮೇರಿಗೆ ವಿಶ್ರಾಂತಿಪಡೆಯಬೇಕೆಂಬ ಅಭಿಲಾಷೆ ಹುಟ್ಟಿರಲಿಲ್ಲ ಒಂದಾದ ಮೇಲೊಂದು ಆಲೋಚನೆ, ಒಂದಾದ ಮೇಲೊಂದು ಕೆಲಸ, ಒಂದಾದ ಮೇಲೊಂದು ಗೆಲವು ಸಮುದ್ರದ ಅಲೆಗಳಂತೆ ಬಿಡುವಿಲ್ಲದೆ ಬೀಸಿ ಬರುತ್ತಿದ್ದುವು. ಮೇರಿ ಆದುರಿನಿಂದ ರೇಡಿಯಂ ತೆಗೆಯುವುದಕ್ಕೋಸ್ಕರ ಹೊಸದಾಗಿ ಒಂದು ಫ್ಯಾಕ್ಟರಿ ಕಟ್ಟಿದಳು. ರೇಡಿಯೋ ಚಟುವಟಿಕೆಯ ವಿಷಯವಾಗಿ ಅದ್ಭುತವಾದ ಪುಸ್ತಕವೊಂದನ್ನು ಒರೆಯುವುದಕ್ಕೆ ಹವಣಿಸಿಕೊಂಡಿದ್ದಳು. ಆಕ್ಟಿನೀಯಂ ವಿಷಯವಾಗಿ ಸಂಶೋಧನೆ ಮಾಡುತ್ತಿದ್ದಳು. ಅದು ಮುಗಿ

ಯುವ ಹೊತ್ತಿಗೆ ಆಲ್ಫಾ ಕಿರಣದ ವಿಷಯ ಸಿದ್ಧವಾಗಿತ್ತು. ಈ ಅವಿಚ್ಛಿನ್ನ ಕೆಲಸಗಳ ಮಧ್ಯೆ, ಮೇರಿಗೆ ತಾನು ಮುಪ್ಪಿನವಳು, ವಿಶ್ರಾಂತಿಪಡೆಯ ಬೇಕು, ಇಲ್ಲದೆ ಹೋದರೆ ಬೇಗ ಸತ್ತು ಹೋದೇನು, ಎಂದು ಯೋಚಿಸಿ ಕೊಳ್ಳುವುದಕ್ಕೆ ವಿರಾಮವಿರಲಿಲ್ಲ. ಸಾವು ಬಂದೀತು ಎಂಬ ಹೆದರಿಕೆಯನ್ನು ಅವಳು ಮನಸ್ಸಿನಿಂದ ತೊಡೆದುಬಿಟ್ಟಿದ್ದಳು. ಅದ್ಭುತವಾದ ಆ ಬುದ್ಧಿಶಕ್ತಿ ಸ್ವಚ್ಛವಾಗಿರುವ ತನಕ, ಶಕ್ತಿಯ ಒಂದು ಕಣ ದೇಹದಲ್ಲಿ ಉಳಿದಿರುವ ತನಕ ಕೆಲಸಮಾಡದೆ ಕೂಡುವ ಚೇತನ ಅದಲ್ಲ. ತನಗೆ ಶಕ್ತಿ ಇನ್ನೂ ಉಳಿದಿದೆ ಎಂದು ಸಾಧಿಸಿಕೊಳ್ಳುವುದಕ್ಕೋಸ್ಕರ, ಮೇರಿ, ಬ್ರೊನ್ಯ ಈಸ್ಟರ್ ದಿನಗಳಲ್ಲಿ ಪ್ಯಾರಿಸ್‌ಗೆ ಬಂದಾಗ, ಅವಳೊಡನೆ ದಕ್ಷಿಣದ ಪ್ರದೇಶಗಳಲ್ಲಿ ಮೋಟಾರಿನ ಪ್ರಯಾಣ ಏರ್ಪಡಿಸಿದಳು. ಅಕ್ಕನಿಗೆ ಸುಂದರವಾದ ಭಾಗಗಳನ್ನೆಲ್ಲ ತೋರಿ ಸಲು ಹೊರಟವಳು ಪ್ರಯಾಣ ಮುಗಿಸಿ ಜರ್ಝರಿತಳಾಗಿ ಮನೆಗೆ ಬಂದಳು. ಮೈಯಲ್ಲ ಶೀತಚೆನ್ನಾಗಿ ಊರಿತ್ತು. ದೇಹದಲ್ಲಿ ಅಸಾಧ್ಯ ನಡುಕ ಕಾಣಿಸಿ ಕೊಂಡಿತ್ತು. ಮುಪ್ಪಿನ ಅಕ್ಕನ ತೋಳುಗಳಲ್ಲಿ ಸೆರೆಯಾಗಿ ಮೇರಿ ಎಳೆಮಗುವಿ ನಂತೆ ಬಿಕ್ಕಿಬಿಕ್ಕಿ ಅತ್ತಳು. ಮಾರನೆಯ ದಿನದ ಹೊತ್ತಿಗೆ ಕದಡಿದ ಮನಸ್ಸನ್ನು ಸಮಾಧಾನಮಾಡಿಕೊಂಡಳು. ವೈದ್ಯರು ಮೇರಿಯನ್ನು ಪರೀಕ್ಷಿಸಿ ಏನೂ ತಿಳಿ ಯದೆ ಕೆಲಸ ಹೆಚ್ಚು ಎಂದರು. ಮೇರಿಗೆ ಎಷ್ಟೋ ದಿನದಿಂದ ಈ ಮಾತು ಕೇಳಿ ಅಭ್ಯಾಸವಾಗಿತ್ತು. ಕೆಲವು ದಿನ ವಿಶ್ರಾಂತಿಪಡೆದಮೇಲೆ ಮೈಮೇಲೆ ಸಣ್ಣ ಜ್ವರ ಎಡಬಿಡದೆ ಇರುತ್ತಿದ್ದರೂ ರೋಗ ಗುಣಮುಖವಾದಂತೆ ತೋರಿತು. ಬ್ರೊನ್ಯ ಪೋಲೆಂಡಿಗೆ ಹಿಂತಿರುಗಿ ಹೊರಟಳು. ಪ್ಯಾರಿಸ್‌ನ ಪ್ಲಾಟ್‌ಫಾರಂ ಮೇಲೆ ವಾರ್ಸಾಕ್ಕೆ ಹೊರಡುವ ಗಾಡಿಯ ಪಕ್ಕದಲ್ಲಿ, ಎಳೆಯತನದಲ್ಲಿ ಒಟ್ಟಿಗೆ ಬೆಳೆದಾಗಿನಿಂದ ಹಿಡಿದು, ಮುಪ್ಪಿನಲ್ಲಿ ಕಾಲಿಟ್ಟ ಮೇಲೂ ಒಬ್ಬರಲ್ಲೊಬ್ಬರು ಪ್ರಾಣಪಟ್ಟಿದ್ದ ಈ ಅಕ್ಕ-ತಂಗಿಯರು ಕೊಟ್ಟ ಕೊನೆಯ ಸಲ ಅಪ್ಪಿಕೊಂಡರು. ಬ್ರೊನ್ಯ ತಂಗಿಯ ವಿಷಯವಾಗಿ ಅಗಾಧ ವಾದ ಚಿಂತೆ ಹೊತ್ತು ಪೋಲೆಂಡ್ ತಲುಪಿದಳು.

ಮೇರಿ ಪ್ರಯೋಗಶಾಲೆಯಲ್ಲಿ ಕೆಲಸ ಮಾಡುತ್ತಲೇ ಇದ್ದಳು. ಜ್ವರ, ನಡುಕ ದಿನದಿನಕ್ಕೆ ಉಲ್ಬಣವಾಯಿತು. ಡಾಕ್ಟರುಗಳು ಪರೀಕ್ಷಿಸಿ ಹಾಸಿಗೆ ಯಿಂದ ಅಲುಗಬಾರದು ಎಂದು ಹೇಳಿದರೂ, ಮೇರಿ ಕುಸಿದುಹೋದ ಕಾಲು

ಗಳಿಂದ ಮೆಟ್ಟಿಲು ಹತ್ತಿ, ಸೋತ ಕೈಗಳಿಂದ ಪ್ರಯೋಗಸಾಧನಗಳನ್ನು ಹಿಡಿಯುವುದನ್ನು ಬಿಡಲಿಲ್ಲ. ಕೊನೆಗೆ ಒಂದು ದಿನ ೧೯೩೪ರ ಮೇ ತಿಂಗಳಲ್ಲಿ, ಮೇರಿ ಮಧ್ಯಾಹ್ನ ಮೂರೂವರೆ ಗಂಟೆಯ ತನಕ ಕೆಲಸ ಮಾಡಿದಳು. ಜ್ವರ ಬಂದಿದೆಯೆಂದು ಮನೆಗೆ ಹೊರಟಳು. ತೋಟದಲ್ಲೆಲ್ಲ ಸುತ್ತಾಡಿ ಬಣಗಿ ಹೋಗುತ್ತಿದ್ದ ಒಂದು ಗುಲಾಬಿಯ ಗಿಡದ ಮುಂದೆ ನಿಂತು 'ಜಾರ್ಜಸ್, ಈ ಗುಲಾಬಿಯನ್ನು ನೋಡು, ಬೇಗ ಇದಕ್ಕೆ ಆರೈಕೆ ಮಾಡು' ಎಂದಳು. ಮೋಟಾರಿನ ಕಡೆಗೆ ಹೋಗುತ್ತ ಹೋಗುತ್ತ ತಿರುಗಿ ನೋಡಿ 'ಮರೆಯ ಬೇಡ ಜಾರ್ಜಸ್, ಗುಲಾಬಿ ಗಿಡ' ಎಂದಳು. ತಾನು ಕಟ್ಟಿಸಿ, ಪ್ರೀತಿಸಿ, ಜೀವ ತೇದ ಪ್ರಯೋಗಶಾಲೆಯಲ್ಲಿ ಮೇರಿ ಕಾಲಿಡುವುದು, ಅದೇ ಕೊನೆಯ ಸಲವಾಯಿತು. ಆ ದಿನ ಹಾಸಿಗೆ ಹತ್ತಿದವಳು ಪುನಃ ಏಳಲಿಲ್ಲ.

ಡಾಕ್ಟರುಗಳ ಪರೀಕ್ಷೆ ಒಂದೊಂದಾಗಿ ನಡೆಯಿತು. ಯಾವ ಅಂಗವೂ ಕೆಟ್ಟಿರಲಿಲ್ಲ. ಜ್ವರ ಏತರಿಂದ ಎಂದು ಬಗೆಹರಿಯಲಿಲ್ಲ. ಕೊನೆಗೆ ಶ್ವಾಸ ಕೋಶದ ಎಕ್ಸ್‌ರೇ ಛಾವಚಿತ್ರ ಏನೋ ಅನುಮಾನ ತೋರಿಸುತ್ತದೆಂದು ಹೇಳಿ ಸ್ಯಾನಿಟೋರಿಯಂಗೆ ಹೋಗಬೇಕೆಂದು ಗೊತ್ತಾಯಿತು. ಮೇರಿ ಏನೇನು ಹೇಳಿದರೂ ಎಲ್ಲದಕ್ಕೂ ಎಳೆಮಗುವಿನಂತೆ ಒಡಂಬಟ್ಟಳು. ಆದರೂ ಸ್ಯಾನಿಟೋರಿಯಂನಲ್ಲಿ ಸಾಯುವುದಕ್ಕೆ ಹೋಗುತ್ತಿದ್ದೇನೆಂದು ಅವಳು ತಿಳಿದಿರಲಿಲ್ಲ. ಪ್ರಯಾಣ ಹೊರಡುವುದಕ್ಕೆ ಎಲ್ಲ ಸಿದ್ಧವಾಯಿತು. ಪ್ರಯೋಗ ಶಾಲೆಯ ಕೆಲಸವನ್ನೂ, ತಾನು ಆಗ ತಾನೇ ಬರೆದು ಮುಗಿಸಿದ್ದ ಪುಸ್ತಕ ಅಚ್ಚುಹಾಕುವ ಕೆಲಸವನ್ನೂ ಮೇರಿ, ಮಗಳು, ಅಳಿಯನಿಗೆ ಒಪ್ಪಿಸಿದಳು. ಪ್ರಯೋಗಶಾಲೆಯ ಮೆಡೇಮ್ ಕೋಟೆಲ್ ಅನ್ನು ಗುಟ್ಟಾಗಿ ಕರೆಸಿ, ಆಕ್ಟಿನಿಯಂ ಅನ್ನು ಭದ್ರವಾಗಿ ತೆಗೆದಿಡು, ನಾನು ಹಿಂದಿರುಗಿ ಬಂದ ಮೇಲೆ ಕೆಲಸ ಮುಂದುವರಿಸೋಣ ಎಂದು ಹೇಳಿದಳು. ಹೀಗೆ ಪ್ರಾಣ ಹತ್ತಿಬರುತ್ತಿದ್ದ ಸಮಯದಲ್ಲಿ ಮುಂದೆ ತಾನು ಇನ್ನೂ ಪ್ರಯೋಗಶಾಲೆಯ ಕೆಲಸ ಮಾಡುತ್ತೇನೆಂದು ಭಾವಿಸಿಕೊಂಡು ಮೇರಿ ಪ್ರಯಾಣ ಹೊರಟಳು. ಈವ್, ತಾಯಿಯೊಡನೆ ಹೊರಡುವುದು, ಕೆಲವು ವಾರಗಳಾದ ಮೇಲೆ ಮೇರಿಯ ಅಕ್ಕಂದಿರು, ಅಣ್ಣ ಪೋಲೆಂಡಿನಿಂದ ಒಂದು ತಂಗಿಯೊಡನಿರುವುದು, ಆಗಸ್ಟ್‌ನಲ್ಲಿ ಐರೀನ್ ಸರದಿ ಎಂದು ಗೊತ್ತಾಯಿತು. ಈ ಸಂಭ್ರಮವನ್ನೆಲ್ಲ ನೋಡಿ

ಮೇರಿ, ಒಂದೊಂದು ಸಲ ಮಗಳೊಡನೆ, 'ವ್ಯರ್ಥವಾಗಿ ಇಷ್ಟೆಲ್ಲ ತೊಂದರೆಯೋ ಏನೋ!' ಎನ್ನುವಳು. ಚಿಂತೆಯ ಮಾತು, ನಿರುತ್ಸಾಹದ ಭಾವನೆ ಅಷ್ಟು ಮಾತ್ರ. ಉಳಿದ ಹೊತ್ತು, ಮಗಳು ಅಳಿಯನ ಪ್ರತಿಭೆಯ ಮಾತು, ಕಿರಿಯ ಮಗಳ ಭವಿಷ್ಯದ ಯೋಚನೆ, ಪ್ರಯೋಗಶಾಲೆಯ ವಿಷಯ ಇವೆಲ್ಲ ತುಂಬಿರುತ್ತಿದ್ದುವು.

ಕೊನೆಗೆ, ಪ್ರಯಾಣ ಮಾಡುವುದಕ್ಕೆ ಕೆಲವು ದಿನ ಮುಂಚೆ ಈವ್, ನಾಲ್ಕು ಜನ ದೊಡ್ಡ ಡಾಕ್ಟರುಗಳನ್ನು ಕರೆಸಿ, ತಾಯಿಯ ಶರೀರಸ್ಥಿತಿಯ ವಿಷಯವಾಗಿ ಪ್ರಶ್ನಿಸಿದಳು. ಮೇರಿಗೆ ಬಂದಿದ್ದ ಜ್ವರದ ಕಾರಣ ಅವರ ಬುದ್ಧಿಗೂ ಹುಟಿಯದೆ, ಅವರು ಸುಮ್ಮನೆ ಶ್ವಾಸಕೋಶವೇ ಕೆಟ್ಟಿರಬೇಕು ಎಂದರು. ಮೇರಿ ಮತ್ತು ಈವ್ ಸ್ಯಾನಿಟೋರಿಯಂ ಕಡೆಗೆ ಹೊರಟರು. ರೈಲಿನಲ್ಲಿ ಮೇರಿ, ಈವ್ ತೋಳುಗಳಲ್ಲಿ ಮೂರ್ಛಿತೆಯಾದಳು. ಸ್ಯಾನಿಟೋರಿಯಂನಲ್ಲಿ ಪುನಃ ಶ್ವಾಸಕೋಶದ ಪರೀಕ್ಷೆ ನಡೆದು, ಎರಡು ಶ್ವಾಸಕೋಶಗಳೂ ಆರೋಗ್ಯವಾಗಿ ಸರಿಯಾಗಿಯೇ ಇದ್ದುವು. ಪ್ರಯಾಣದಿಂದ ಆಯಾಸ ಮಾತ್ರವೇ ಫಲವಾಯಿತು.

ಮೇರಿಯ ರಕ್ತಪರೀಕ್ಷೆ, ಕೆಂಪು, ಬಿಳಿಯ ಕಣಗಳೆರಡೂ ನಿಮಿಷ ನಿಮಿಷಕ್ಕೆ ಕಮ್ಮಿಯಾಗುತ್ತಿದ್ದುದನ್ನು ತೋರಿಸಿತು. ರಕ್ತಕ್ಷಯ ಅಂಕೆ ಮೀರುವಷ್ಟು ತೀಕ್ಷ್ಣವಾಗಿದೆ, ಎಂದು ಡಾಕ್ಟರುಗಳು ಹೇಳಿದರು. ಜ್ವರ ನೂರನಾಲ್ಕು ಡಿಗ್ರಿಗಳಿಗಿಂತ ಹೆಚ್ಚಾಗಿತ್ತು. ಡಾಕ್ಟರ್ ಪಿಯರಿ ಲೊವಿಸ್, ಏನಾದರೂ ಮಾಡಿ ಮೇರಿಯನ್ನು ಉಳಿಸುತ್ತೇನೆಂದು ಮೃತ್ಯುವಿನೊಡನೆ ಹೋರಾಟ ಮಾಡತೊಡಗಿದ. ಆದರೆ ಮೇರಿಯ ಕೊನೆಗಾಲ ಪ್ರಾಪ್ತವಾಗಿತ್ತು. ಅಂತಹ ಜೀವ, ಪ್ರಪಂಚ ಬಿಟ್ಟು ಹೋಗುತ್ತಿದೆಯೆಂದು ತಿಳಿದು, ಸ್ಯಾನಿಟೋರಿಯಂ ಸ್ತಬ್ಧವಾಗಿ ಹೋಗಿತ್ತು. ಇಷ್ಟಾದರೂ ಮೇರಿಯ ಅಂತರಂಗದಲ್ಲಿ ಸಾವಿನ ಯೋಚನೆ ಹೊಕ್ಕಿರಲಿಲ್ಲ. ಹೇಗಾದರೂ ಮಾಡಿ, ಸಾವಿನ ಭಾವನೆ ಮೇರಿಯ ಮನಸ್ಸಿಗೆ ಹೊಳೆಯದ ಹಾಗೆ ಮಾಡಲು, ಈವ್ ಮತ್ತು ಡಾಕ್ಟರ್ ಲೊವಿಸ್ ಅತ್ಯಂತ ಪ್ರಯತ್ನ ಮಾಡಿದರು. ಬಂಧುಗಳೆಲ್ಲ ಅಂತ್ಯದರ್ಶನ ಪಡೆಯಲು ಮೇರಿಯ ಹಾಸಿಗೆಯ ಸುತ್ತ ಸುತ್ತಿಕೊಳ್ಳಲಿಲ್ಲ. ಸಾಯುವ ಗಳಿಗೆಯಲ್ಲಿ ಜೀವವನ್ನುಳಿಸಹೋಗಿ ಹತಾಶರಾಗುವ ಯಾವ

ಪ್ರಯತ್ನವೂ ನಡೆಯಲಿಲ್ಲ ಇಪ್ಪತ್ತೆಂಟು ವರ್ಷಗಳ ಹಿಂದೆ, ಕೆಲಸ ಮಾಡುತ್ತ ಮಾಡುತ್ತ ಸಾವಿನ ಸುದ್ದಿ ಇಲ್ಲದೆ ಪ್ರಾಣ ಬಿಟ್ಟ ಪಿಯರಿಯಂತೆ, ಮೇರಿ ಮುಂದಿನ ಜೀವಮಾನದ ಕೆಲಸಗಳನ್ನೆಲ್ಲ ಭದ್ರಮಾಡಿಟ್ಟು, ತನಗೇ ಗೊತ್ತುಹರಿಯದಂತೆ ಜೀವ ನೀಗಿದಳು.

ಜುಲೈ ಮೂರನೆಯ ದಿನ ಬೆಳಿಗ್ಗೆ ಮೇರಿ ಎಂದಿನಂತೆ, ನಡುಗುವ ಕೈಗಳಲ್ಲಿ ಥರ್ಮಾಮಿಟರ್ ಹಿಡಿದು ಉಷ್ಣಾಂಶ ನೋಡಿಕೊಂಡಳು ಕೊನೆ ಗಾಲದ ಸೂಚನೆಯಾಗಿ ಜ್ವರ ಇಳಿದಿದೆಯೆಂದು ತಿಳಿಯದೆ, ರೋಗ ಹಿಮ್ಮೆಟ್ಟಿತೆಂದು ಮಗಳನ್ನು ನೋಡಿ ನಕ್ಕಳು. ಈವ್, ಕಾಯಿಲೆ ಗುಣವಾಗುವುದು ಎಂದು ಹೇಳಿದ್ದನ್ನು ಕೇಳಿ, ಕಿಟಿಕಿಯಿಂದಾಚೆ ಪ್ರಿಯವಾದ, ಸುಂದರವಾದ ಪ್ರಕೃತಿಯನ್ನು ನೋಡಿ 'ನನ್ನ ಸ್ಥಿತಿ ಉತ್ತಮವಾದದ್ದು ಔಷಧಗಳಿಂದಲ್ಲ, ಈ ಶುದ್ಧವಾದ ಗಾಳಿಯಿಂದ, ಈ ಎತ್ತರವಾದ ಪ್ರದೇಶದಿಂದ' ಎಂದಳು. ಅಲ್ಲಿಂದ ಮುಂದೆ ಜ್ಞಾನ ತಪ್ಪುತ್ತ ಬಂತು. ಜಗತ್ತಿನಲ್ಲಿ ವಿಜ್ಞಾನಿಯ ಭಾಗಕ್ಕೆ ಜಡವಾದದ್ದೆಲ್ಲ ಅವಳ ಮನಸ್ಸಿನಿಂದ ಅಳಿದುಹೋಯಿತು. ಹಿಂದಿನ ದಿನ ತಾನೆ ಅಲ್ಲಿಗೆ ಬಂದು ತಲುಪಿದ್ದ ಪ್ರೀತಿಯ ಹಿರಿಯ ಮಗಳ ಹೆಸರನ್ನು ಕೂಗಲಿಲ್ಲ. ಈವ್ ವಿಷಯ ಎತ್ತಲಿಲ್ಲ. ಬಂಧುಗಳ ಸುದ್ದಿ ಇರಲಿಲ್ಲ. ಮೇರಿ, ಬಾಳಿನಲ್ಲೆಲ್ಲ ತಪಸ್ಸು ಮಾಡಿ ಆರಾಧಿಸಿದ ದೈವ, ಜೀವ ತೇದು, ಹೆಣಗಿ ಹಾತೊರೆದು ಅರಸಿದ ಸತ್ಯ, ಬದುಕಿನ ಕಷ್ಟದ ದಿನಗಳಲ್ಲಿ ದುಃಖದ ವೇಳೆಗಳಲ್ಲಿ ಅವಳಿಗೆ ಶಾಂತಿ ತುಂಬಿಕೊಟ್ಟ ಸೌಂದರ್ಯವಾದ ವಿಜ್ಞಾನ ಅವಳ ಹೃದಯ ದಲ್ಲಿ, ಮನಸ್ಸಿನಲ್ಲಿ, ಅಂತರಂಗದಲ್ಲಿ, ಆತ್ಮದಲ್ಲಿ ತುಂಬ ಆವರಿಸಿಬಿಟ್ಟಿತ್ತು. ಅಲ್ಲಿ ಬೇರೆ ಯಾವುದಕ್ಕೂ ಸ್ಥಳವಿರಲಿಲ್ಲ. ಮೇರಿ ತಾನು ಬರೆದ ಪುಸ್ತಕದ ವಿಷಯವಾಗಿ ಮಾತಾಡುತ್ತಲೇ ಇದ್ದಳು. ಟೀ ಬಟ್ಟಲನ್ನು ದೃಷ್ಟಿಸಿ ನೋಡಿ 'ಇದು ಯಾತರಿಂದ ಮಾಡಿದೆ? ರೇಡಿಯಂದಿಂದಲೇ ಮೀಸೋಥೋರಿಯಂ ಇಂದಲೇ' ಎಂದಳು. ಆಮೇಲೆ ಹದಿನಾರು ಗಂಟೆಗಳ ಹೊತ್ತು, ದೇಹ ಬಿಟ್ಟು ಹೋಗಲಾರದ ಜೀವದ ತಳಮಳದ ಮುಂದೆ, ಡಾಕ್ಟರ್ ಲೊವಿಸ್ ಮತ್ತು ಈವ್, ರೇಡಿಯಂದಿಂದ ಸುಟ್ಟುಹೋಗಿದ್ದ ಮೇರಿಯ ಕೈಗಳನ್ನು ಹಿಡಿದು ಕುಳಿತೇ ಇದ್ದರು. ಮಾರನೆಯ ದಿನ ೧೯೩೪ನೆಯ ಜುಲೈ ೪ನೆಯ ತಾರೀಕು ಮುಂಬೆಳಗಿನಲ್ಲಿ ಸೂರ್ಯ ಹುಟ್ಟಿ ಸುಂದರವಾದ ಪ್ರಕೃತಿಯನ್ನು

ಕಣ್ಣಿಗೆ ತೋರುವ ಹೊತ್ತಿಗೆ ಅಮೂಲ್ಯವಾದ ಬದುಕೊಂದು ಕೊನೆಯಾಯಿತು. ಮೇರಿಯ ನಿಶ್ಚಲವಾದ ದೇಹದ ಮೇಲೆ, ಅದ್ಭುತವಾದ ಮಿದುಳನ್ನು ಹಿಂದಿಟ್ಟುಕೊಂಡಿದ್ದ ವಿಶಾಲವಾದ ಉಬ್ಬಿದ ಹಣೆಯ ಮೇಲೆ, ಗುಳಿಗಿಳಿದ ಕಣ್ಣುಗಳ ಮೇಲೆ ಸೂರ್ಯಕಿರಣ ಬಿದ್ದು, ಬೆಳಕು ಚೆಲುವಾಯಿತು.

ಡಾಕ್ಟರುಗಳು ಆಮೇಲೆ ಪರೀಕ್ಷೆ ಮಾಡಿದ್ದರಲ್ಲಿ ರಕ್ತಕ್ಷಯದಿಂದ ಸತ್ತವರ ಲಕ್ಷಣ ಮೇರಿಯ ರಕ್ತದಲ್ಲಿರಲಿಲ್ಲ. ಕೊನೆಗೆ ಸಾವಿನ ಕಾರಣ ಪತ್ತೆಯಾಯಿತು. ವರ್ಷಾನುಗಟ್ಟಲೆಯಿಂದ ರೇಡಿಯಂ ಸಹವಾಸಪಡೆದಿದ್ದರಿಂದ, ಆ ರೇಡಿಯಂ ಮೇರಿಯ ಶರೀರದ ಮೇಲೆ, ರಕ್ತದ ಮೇಲೆ, ಮೂಳೆಯ ಮೇಲೆ ಅಸಾಧಾರಣ ಪ್ರಭಾವವನ್ನು ಬೀರಿ ಕೊನೆಗೆ ಸಾವನ್ನು ತಂದಿತ್ತು.

ಮೇಡೇಮ್ ಕ್ಯೂರಿಯ ಸಾವಿನ ಸುದ್ದಿ ಪ್ರಪಂಚದಲ್ಲೆಲ್ಲ ಹರಡಿತು. ಕಿರಿಯ ತಂಗಿ ಪ್ರಾಣನೀಗಿದಳೆಂಬ ಕರುಳುಕೊರೆಯುವ ಸಮಾಚಾರ ಫ್ರಾನ್ಸ್ ಕಡೆಗೆ ಧಾವಿಸಿ ಬರುತ್ತಿದ್ದ ಅಣ್ಣನಿಗೆ, ಪೋಲೆಂಡಿನಲ್ಲಿ ಹೆಲಾಗೆ, ಬ್ರೋನ್ಯಳಿಗೆ ತಿಳಿಯಿತು. ತಂಗಿಯ ಮುಖ ಸಿಕ್ಕೀತೇ ಎಂದು ಬ್ರೋನ್ಯ ಓಡೋಡಿ ಬಂದದ್ದೂ ವ್ಯರ್ಥವಾಯಿತು. ಜಾಕ್ವೆಸ್ ಕ್ಯೂರಿ, ಸಾವಿನ ಸುದ್ದಿ ಕೇಳಿ ತಲ್ಲಣಿಸಿದ. ಪ್ಯಾರಿಸ್ ಪ್ರಯೋಗಶಾಲೆಯಲ್ಲಿ ವಿದ್ಯಾರ್ಥಿಗಳು ಪ್ರಯೋಗ ಸಾಧನಗಳ ಮುಂದೆ ನಿಂತು, ತಬ್ಬಲಿಗಳಾದೆವೆಂದು ಬಿಕ್ಕಿಬಿಕ್ಕಿ ಅತ್ತರು.

೧೯೩೪ ನೇ ಜುಲೈ ೬ನೇ ಶುಕ್ರವಾರ ಮಧ್ಯಾಹ್ನ ಮೇರಿಯ ಆತ್ಮಕ್ಕೆ ಪ್ರೀತಿಯಾಗುವಂತೆ, ಮೆರವಣಿಗೆಯಿಲ್ಲದೆ, ಭಾಷಣಗಳಿಲ್ಲದೆ ಮೇರಿಯ ದೇಹಸಂಸ್ಕಾರವಾಯಿತು. ಮೇರಿಯ ಸ್ನೇಹಿತರು, ಬಂಧುಗಳು, ವಿದ್ಯಾರ್ಥಿಗಳು, ಆ ಜೀವವನ್ನು ಮನಮುಟ್ಟಿ ಪ್ರೀತಿಸಿದ್ದವರು ಅಲ್ಲಿ ಸೇರಿದ್ದರು. ಪಿಯರಿಯ ಪೆಟ್ಟಿಗೆಯ ಮೇಲೆ ಮೇರಿಯ ಪೆಟ್ಟಿಗೆಯನ್ನು ಇಳಿಸಿದರು. ಜೋಸೆಫ್ ಮತ್ತು ಬ್ರೋನ್ಯ ಪೋಲೆಂಡಿನಿಂದ ತಂದಿದ್ದ ಒಂದೊಂದು ಹಿಡಿ ಮಣ್ಣನ್ನು ಅದರ ಮೇಲೆ ಹಾಕಿದರು. ಮೇರಿ ಶಾಂತಳಾಗಿ ಮಲಗಿ ಒಂದು ವರ್ಷ ಮುಗಿಯುವ ಹೊತ್ತಿಗೆ ಆ ಅದ್ಭುತ ಚೇತನದ ಶಾಶ್ವತ ಸ್ಮಾರಕವೆಂಬಂತೆ ರೇಡಿಯೋ ಚಟುವಟಿಕೆಯ ಮೇಲೆ ಅವಳು ಬರೆದಿದ್ದ ಅದ್ವಿತೀಯವಾದ ಪುಸ್ತಕ ಅಚ್ಚಾಗಿ ಹೊರಬಿತ್ತು.

—